















ಫೆಬ್ರವರಿ ೧೭, ೨೦೧೯ರ ಭಾನುವಾರದಂದು ಬೆಂಗಳೂರಿನ ಪರಾಗ ಹೋಟೆಲ್‌ನಲ್ಲಿ ಅದ್ದೂರಿ ಸಮಾರಂಭವೊಂದು ನಡೆಯಿತು. ನವಕರ್ನಾಟಕ ಸಂಸ್ಥೆಯನ್ನು ಕಟ್ಟಿ ಬೆಳೆಸಿ ಅದರ ಮೂಲಕ ಕನ್ನಡ ಪುಸ್ತಕ ಸಂಸ್ಕೃತಿಯನ್ನು ನಾಡಿನಾದ್ಯಂತ ಪಸರಿಸಿದ ಸಾಧನೆಗಾಗಿ ಶ್ರೀ ಆರ್. ಎಸ್. ರಾಜಾರಾಮ್ ಅವರಿಗೆ ೨೦೧೮ರ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ದೊರೆತ ಕಾರಣ ಸಂಭ್ರಮದ ವಾತಾವರಣ. ಪತ್ನಿ ಶ್ರೀಮತಿ ಗೀತಾ ರಾಜಾರಾಮ್ ಅವರೊಂದಿಗೆ ರಾಜಾರಾಮ್ ಅವರನ್ನು ಗೌರವಿಸಿ, ಅಭಿನಂದಿಸಿ, ಸನ್ಮಾನಿಸಲಾಯಿತು. ಇದೇ ಸಂದರ್ಭದಲ್ಲಿ, ನವಕರ್ನಾಟಕ ೬೦ನೇ ವರ್ಷದ ಕಡೆಗೆ ಹೆಜ್ಜೆಯಿರಿಸುವ 'ಅಕ್ಷರ ಪಯಣ–೬೦'ರ ಗುರುತಾಗಿ ಮೊದಲ ಪುಸ್ತಕ "ಬಹುಮುಖ ಪ್ರತಿಭೆಯ ಕುಮಾರ ವೆಂಕಣ್ಣ" ಎಂಬ ಕೃತಿಯನ್ನು ಶ್ರೀ ಎಚ್. ಎಸ್. ದೊರೆಸ್ವಾಮಿ ಲೋಕಾರ್ಪಣೆ ಮಾಡಿದರು. ಮುಖ್ಯ ಅತಿಥಿ ಡಾ॥ ವಿಜಯಾ, ಕೃತಿಯ ಲೇಖಕ ಶ್ರೀ ಪರಂಜ್ಯೋತಿ ಮತ್ತು ಶ್ರೀಮತಿ ಪದ್ಮಾವತಿ ಕುಮಾರ ವೆಂಕಣ್ಣ ವೇದಿಕೆಯಲ್ಲಿ ಉಪಸ್ಥಿತರಿದ್ದರು. ನವಕರ್ನಾಟಕ ಬಳಗ, ರಾಜಾರಾಮ್ ಮತ್ತು ಕುಮಾರ ವೆಂಕಣ್ಣನವರ ಕುಟುಂಬದ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು.






# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ಸೃಜನ್, ಸುನಿಲ್ ಮಿಶ್ರಾ, ತನು,
ಗೋಪಿ ಹಿರೇಬೆಟ್ಟು, ವಿ. ಜಿ. ನಾರಾಯಣ

**ಮುಖಪುಟ :** ಮಹಿಳಾ ಐಕ್ಯತೆಯ ಗೋಡೆ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ರಾಜ್ಯ ರಾಜಕಾರಣದಲ್ಲಿ ಕಾಂಗ್ರೆಸ್–ಜೆಡಿಎಸ್ 'ದೋಸ್ತಿ' ಸರಕಾರವನ್ನು ಉರುಳಿಸುವುದನ್ನೇ ಭಾಜಪ ಗುರಿಯಾಗಿಸಿಕೊಂಡಿದೆ. ಇದಕ್ಕಾಗಿ ಯಡಿಯೂರಪ್ಪ ಕಂಪೆನಿ ರೂಪಿಸಿಕೊಂಡಿದ್ದು ಮಾಧ್ಯಮಗಳು ಹೇಳುವ 'ಆಪರೇಷನ್ ಕಮಲ' ಎನ್ನುವ ಮಾರ್ಗ. ಅರ್ಥಾತ್ ಕಾಂಗ್ರೆಸ್, ಜೆಡಿಎಸ್ ಅತೃಪ್ತ ಶಾಸಕರಿಗೆ ಆಮಿಷ ಒಡ್ಡಿ ನೂರಾರು ಕೋಟಿ ಸುರಿದು ಒಲಿಸಿಕೊಳ್ಳುವ ಹುನ್ನಾರ. ಇದು ಈವರೆಗೆ ಯಶಸ್ಸು ಕಾಣಲಿಲ್ಲ, ಸದ್ಯಕ್ಕೆ ಕಮಲ ಪಕ್ಷ ಕಮರಿ ಹೋಗಿದ್ದು ಯಡಿಯೂರಪ್ಪ ಮತ್ತೆ ಮುಖ್ಯಮಂತ್ರಿಯಾಗುವ ಕನಸು ನನಸಾಗದೆ ಹೋಗಿದೆ. ಇದಕ್ಕೆ ಬಲಿ ಎಂದರೆ ವಿಧಾನಮಂಡಲದ ಅಧಿವೇಶನಗಳು. ಹೊಸ ವರ್ಷದಲ್ಲಿ ಜರುಗಿದ ಬಜೆಟ್ ಅಧಿವೇಶನ ಅದಕ್ಕೆ ನಿದರ್ಶನ. ರಾಜ್ಯಪಾಲರ ಭಾಷಣದ ಸಂದರ್ಭದಲ್ಲಿ ಗದ್ದಲ ಎಬ್ಬಿಸಿದ ಭಾಜಪ ಸದಸ್ಯರುಗಳು ಚರ್ಚೆಯೇ ಇಲ್ಲದೆ ಬಜೆಟ್ ಅನುಮೋದನೆಯ ವರೆಗೆ ಕಲಾಪಕ್ಕೆ ಅಡ್ಡಿ ತಂದು ಕೂಗಾಡಿದರು. ತರಾತುರಿಯಲ್ಲಿ ಕೆಲವು ಮಸೂದೆಗಳನ್ನು ಮುಖ್ಯಮಂತ್ರಿ ಕುಮಾರಸ್ವಾಮಿ ಪಾಸು ಮಾಡಿಕೊಂಡರು ಅಷ್ಟೆ. ವಿಧಾನಮಂಡಲದ ಅಧಿವೇಶನ ಪೂರ್ತಿಯಾಗಿ ತೆರಿಗೆದಾರರ ಹಣದ ವಂಚನೆ.

ಈ ಮಧ್ಯೆ ಧ್ವನಿ ಮುದ್ರಣದ ಹಗರಣ. ಇದೇನೂ ನಮ್ಮ ರಾಜಕೀಯದಲ್ಲಿ ಹೊಸ ವಿಷಯವಲ್ಲ. ಹಿಂದೆ ಹಲವು ಪ್ರಕರಣಗಳಲ್ಲಿ ಕದ್ದಾಲಿಕೆ, ರಿಕಾರ್ಡಿಂಗ್, ಟೇಪ್, ತಟ್ಟೆ ಎಲ್ಲ ಬಿದ್ದುಹೋಗಿದೆ. ಆದರೂ ಇದು ಮುಂದುವರಿಯುತ್ತಲೇ ಇದೆ. ಆಧುನಿಕ ತಂತ್ರಜ್ಞಾನದ ಈ ಕಾಲದಲ್ಲಿ ಮೊಬೈಲ್ ಯುಗದಲ್ಲಿ ಯಾವ ಧ್ವನಿಯನ್ನೂ ಅನುಕರಿಸಲು ಸಾಧ್ಯ. ಯಡಿಯೂರಪ್ಪ ಈ ಸಲ ಎಡವಟ್ಟು ಮಾಡಿಕೊಂಡಿದ್ದಾರೆ. ಒಂದು ರೀತಿಯಲ್ಲಿ ಧ್ವನಿ ತನ್ನದೇ ಅನ್ನುವುದನ್ನು ಒಪ್ಪಿಕೊಂಡಿದ್ದಾರೆ. ಅಧಿವೇಶನದ ಕಲಾಪಗಳು ಕೊಚ್ಚಿಹೋಗುವುದಕ್ಕೆ ಇದೂ ಒಂದು ಕಾರಣ. ಎಸ್ಐಟಿ, ಸದನ ಸಮಿತಿ, ನ್ಯಾಯಾಂಗ ವಿಚಾರಣೆ ಈ ಗೊಂದಲದಲ್ಲಿ ವ್ಯರ್ಥವಾದ್ದು ಸದನದ ಕಲಾಪಗಳು.

ವಿಧಾನ ಮಂಡಲದ ಕಲಾಪಗಳು ಹೋಗಲಿ, ಕುಮಾರಸ್ವಾಮಿ ಸರಕಾರ ನಡೆಯುತ್ತಿದೆಯೇ ಎನ್ನುವ ಅನುಮಾನವೂ ಜನರಿಗೆ ಇದೆ. ಕಾಂಗ್ರೆಸ್‌ನಲ್ಲಿ ಅತೃಪ್ತಿಯ ಹೊಗೆಯಾಡುತ್ತಿದ್ದು ಸರಕಾರದ ಮೇಲೆ ತೂಗು ಕತ್ತಿ ಓಲಾಡುತ್ತಿದೆ. ಏನೇ ಪ್ರಯತ್ನಪಟ್ಟರೂ ವಿವಾದವಾಗಲಿ, ಅತೃಪ್ತಿಯಾಗಲಿ ಶಮನವಾಗುವ ಸೂಚನೆ ಕಾಣುತ್ತಿಲ್ಲ. ಮುಂಬರುವ ಲೋಕಸಭಾ ಚುನಾವಣೆಗಳ ಸಂದರ್ಭದಲ್ಲಿ ಸೀಟು ಹಂಚಿಕೆ ಯಾವ ರೀತಿಯಲ್ಲಾಗುವುದೋ ನೋಡಬೇಕು. ಅಂತೂ ಚುನಾವಣೆಗಳವರೆಗೆ ದೋಸ್ತಿ ಸರಕಾರ ಮುಂದುವರಿಯುವುದು ಖಚಿತ.

ಮುಂಬರುವ ಲೋಕಸಭಾ ಚುನಾವಣೆಯೇ ಬಹುಮುಖ್ಯ ವಿಷಯ. ಈಗಾಗಲೇ ಮಾಧ್ಯಮಗಳು ಲೆಕ್ಕಾಚಾರದಲ್ಲಿ ತೊಡಗಿವೆ. ಒಂದರ ಮೇಲೊಂದು ಸಮೀಕ್ಷೆಗಳು ಬರತೊಡಗಿವೆ. ಎಲ್ಲವೂ ಒಂದು ಬಗೆಯ ಸ್ಪೆಕ್ಯುಲೇಶನ್. ರಾಜ್ಯ ಹಾಗೂ ಕೇಂದ್ರ ಸರಕಾರದ ಬಜೆಟ್‌ಗಳ ಮಂಡನೆಯಾಗಿದ್ದು ಎರಡೂ ಕೂಡ ಹೆಚ್ಚು ಕಡಿಮೆ ಚರ್ಚೆಯೇ ಇಲ್ಲದೆ ಅಂಗೀಕಾರವಾಗಿವೆ. ಮಂಡಿತವಾದ ಎರಡೂ ಬಜೆಟ್‌ಗಳು ಕೂಡ ಚುನಾವಣಾ ಪ್ರಣಾಳಿಕೆಗಳಂತೆಯೇ ಇವೆ. ಕೇಂದ್ರ ಬಜೆಟ್ಟನ್ನು ಅಮೆರಿಕದಲ್ಲಿ ಚಿಕಿತ್ಸೆ ಪಡೆಯುತ್ತಿದ್ದ ಹಣಕಾಸು ಸಚಿವ ಅರುಣ್ ಜೇಟ್ಲಿ ಪರವಾಗಿ ಹಂಗಾಮಿ ಹಣಕಾಸು ಸಚಿವ ಪೀಯೂಷ್ ಗೋಯಲ್ ಮಂಡಿಸಿದರೆ, ಮುಖ್ಯಮಂತ್ರಿ ಕುಮಾರಸ್ವಾಮಿಯವರು ಗದ್ದಲದ ನಡುವೆಯೇ ಬಜೆಟ್ ಮಂಡಿಸಿದರು. ಮುಂದೆ ಮೇ ತಿಂಗಳಲ್ಲಿ ನಡೆಯುವ ಲೋಕಸಭಾ ಚುನಾವಣೆಗಳಿಗಾಗಿ ಆಡಳಿತ ಹಾಗೂ ಪ್ರತಿಪಕ್ಷಗಳು ಸೀಟುಗಳ ಹಂಚಿಕೆಯ ಕಸರತ್ತು ನಡೆಸಿವೆ. ಕೆಲವೆಡೆ ಭಾಜಪ ಹೊಂದಾಣಿಕೆ ಮಾಡಿಕೊಂಡಿದೆ. ಅದಕ್ಕೆ ಉದಾಹರಣೆ ಬಿಹಾರ. ಈಚೆಗೆ ಶಿವಸೇನೆ ಮತ್ತು ಭಾಜಪ ಮಹಾರಾಷ್ಟ್ರದಲ್ಲಿ ಒಂದಾಗಿ ಯಾರಿಗೆ ಎಷ್ಟು ಸೀಟು ಎಂಬುದು ಇತ್ಯರ್ಥವಾಗಿದೆ. ಮತ್ತೆ ಅಧಿಕಾರದ ಚುಕ್ಕಾಣಿ ಹಿಡಿಯಲು ಭಾಜಪದ ಮೋದಿ – ಷಾ ಜೋಡಿ ಜೋರು ಪ್ರಯತ್ನ ನಡೆಸಿದೆ. ಪ್ರತಿ ಪಕ್ಷಗಳ ಹೊಂದಾಣಿಕೆ ತಕರಾರಿನಲ್ಲಿದೆ. ಒಂದೊಂದು ರಾಜ್ಯದಲ್ಲೂ ಬೇರೆ ಬೇರೆ ಕೂಟಗಳು ರಚನೆಯಾಗುತ್ತಿವೆ. ಕಾಂಗ್ರೆಸ್ ಹೊರತುಪಡಿಸಬೇಕೆ ಬೇಡವೆ ಎಂಬ ವಿವಾದ ಇನ್ನೂ ಜೀವಂತ. ಒಂದು ರೀತಿಯಲ್ಲಿ ಪ್ರತಿ ಪಕ್ಷಗಳು ಕಪ್ಪೆ ತಕ್ಕಡಿಗೆ ಹಾಕಿದಂತೆ ತುಯ್ದಾಡುತ್ತಿವೆ. ಕಾಂಗ್ರೆಸ್‌ಗೆ ಪ್ರಿಯಾಂಕಗಾಂಧಿ ಈಗ ಟ್ರಂಪ್ ಕಾರ್ಡಾಗಿದ್ದಾರೆ. ಅವರಿಗೆ ಪ್ರಧಾನ ಕಾರ್ಯದರ್ಶಿ

*(೭ನೇ ಪುಟಕ್ಕೆ)*







ಸಂಪುಟ-೨೦ ಸಂಚಿಕೆ-೮ ಮಾರ್ಚ್ ೨೦೧೯

■ *ಗೌರವ ಸಂಪಾದಕ*

ಜಿ. ರಾಮಕೃಷ್ಣ

■ *ಸಂಪಾದಕ-ಮುದ್ರಕ-ಪ್ರಕಾಶಕ*

ಸಿದ್ದನಗೌಡ ಪಾಟೀಲ

■ *ಸಹಸಂಪಾದಕರು*

ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

■ *ವ್ಯವಸ್ಥಾಪಕ*

ಎ. ರಮೇಶ ಉಡುಪ

■ *ಮುದ್ರಣ*

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ *ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೯೧೧, ೨೨೧೬೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


# ಸಂಪಾದಕೀಯ

## ರಾಜಕೀಯ ಚದುರಂಗದಾಟದಲ್ಲಿ ಮಹಿಳೆಯರು

೧೦೯ ವರ್ಷಗಳ ಹಿಂದೆ ವಿಶ್ವ ಮಹಿಳಾ ದಿನಾಚರಣೆಯನ್ನು ಹುಟ್ಟು ಹಾಕಿದ ಜರ್ಮನಿಯ ಕ್ಲಾರಾ ಜೆಟ್‌ಕಿನ್ ಮಹಿಳಾ ಪ್ರಶ್ನೆಗಳನ್ನು ಮತ್ತು ಸಮಸ್ಯೆಗಳನ್ನು ರಾಜಕೀಯ ಅಜೆಂಡಾ ಮಾಡದಿದ್ದಲ್ಲಿ ಯಾವುದೇ ಪರಿಹಾರ ದೊರೆಯದು, ಎಂದು ಘೋಷಿಸಿದ್ದಳು. ಮತ್ತೆ ಇಂದು ಮಹಿಳಾ ದಿನ ಬಂದಿದೆ. ಮಹಿಳೆಯರ ಪ್ರಶ್ನೆಗಳು ಮತ್ತು ಸಮಸ್ಯೆಗಳು ಅಂದಿಗಿಂತ ಇಂದು ದ್ವಿಗುಣಿತವಾಗಿವೆ. ಗಂಡುಮಯವಾದ ನಮ್ಮ ಇಂದಿನ ರಾಜಕೀಯದಲ್ಲಿ ಮಹಿಳಾ ಪ್ರಶ್ನೆಗಳನ್ನು ರಾಜಕೀಯ ಪ್ರಶ್ನೆಗಳನ್ನಾಗಿಸುವುದು ಹೇಗೆ ಎಂಬ ಯಕ್ಷ ಪ್ರಶ್ನೆ ನಮ್ಮ ಮುಂದೆ ನಿಂತಿದೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಮತ್ತು ಅಂಬೇಡ್ಕರ್ ನೇತೃತ್ವದ ಚಳುವಳಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ಮಹಿಳೆಯರು ನಂತರದಲ್ಲಿ ರಾಜಕೀಯ ರಂಗದಿಂದ ನೇಪಥ್ಯಕ್ಕೆ ಸರಿದದ್ದಕ್ಕೆ ಹಲವಾರು ಕಾರಣಗಳ ಜೊತೆಗೆ ನಮ್ಮ ರಾಜಕೀಯ ವಾತಾವರಣವೂ ಮುಖ್ಯ ಕಾರಣವಾಗಿದೆ.

ಸ್ತ್ರೀ ಪುರುಷ ಸಮಾನತೆಯ ಆಶಯವನ್ನು ಒಡಲಲ್ಲಿಟ್ಟುಕೊಂಡಿರುವ ಸಂವಿಧಾನವಿದ್ದೂ ಭಾರತದ ಪ್ರಜಾಪ್ರಭುತ್ವದಲ್ಲಿ ಅದರ ಅರ್ಧ ಭಾಗವಾಗಿರುವ ಮಹಿಳೆಯರನ್ನು ನೋಡುವ ದೃಷ್ಟಿಕೋನದಲ್ಲಿ ಮಾತ್ರ ಏಕಪಕ್ಷೀಯವಾದ ಪಕ್ಷಪಾತ ಧೋರಣೆ ಎದ್ದುಕಾಣುತ್ತಿದೆ. ಇಂದಿನ ರಾಜಕೀಯ ಶಕ್ತಿಗಳ ನಡವಳಿಕೆಗಳು ಇದನ್ನು ಮತ್ತೆ, ಮತ್ತೆ ಪ್ರತಿಷ್ಠಾಪಿಸುತ್ತಿವೆ. ಪುರುಷಪ್ರಧಾನ ಸಮಾಜದ ಪ್ರಮುಖ ಲಕ್ಷಣವಾಗಿರುವ 'ಅಧಿಕಾರ'ದ ಪರಿಕಲ್ಪನೆಯಲ್ಲಿ ಹೆಣ್ಣು ಎಂದೂ ಆಳಿಸಿ ಕೊಳ್ಳುವವಳಾಗಿಯೇ ಕಂಡಿದ್ದಾಳೆ. ಪುರುಷರ ಭದ್ರಕೋಟೆಯಾದ ರಾಜಕೀಯದಲ್ಲಿ ಎಲ್ಲ ಅಧಿಕಾರದ ಗೂಟಗಳನ್ನು ಇನ್ನೂ ಪುರುಷನೇ ಹೊಂದಿರುವಾಗ ಮಹಿಳೆಯ ಪಾತ್ರವನ್ನು ನಿರ್ಧರಿಸುವವನು ಅವನೇ ಆಗಿದ್ದಾನೆ. ಪಂಚಾಯತಿ ಚುನಾವಣೆಯಲ್ಲಿ ಮೀಸಲಾತಿ ಅವಕಾಶದಿಂದ ಹೆಣ್ಣು ಅಧಿಕಾರ ಹಿಡಿದರೂ ಅವಳನ್ನು ತನ್ನ ಸೂತ್ರದ ಗೊಂಬೆಯಂತೆ ಕುಣಿಸುವ ಗಂಡಸಿನ ಪ್ರವೃತ್ತಿ ಬದಲಾಗಿಲ್ಲ. ಇತ್ತೀಚೆಗೆ ಮೈಸೂರಿನಲ್ಲಿ ನಡೆದ ಸಾರ್ವಜನಿಕ ಸಭೆಯೊಂದರಲ್ಲಿ ಜನಪ್ರತಿನಿಧಿಯೂ ಆಗಿದ್ದ ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಜಮಾಲಾ ಜನಪ್ರತಿನಿಧಿಗಳ ಕಾರ್ಯವೈಖರಿಯನ್ನು ಮೇಜು ಕುಟ್ಟಿ ಪ್ರಶ್ನಿಸಿದ್ದಕ್ಕೆ ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯನವರು ಅದಕ್ಕೆ ತಿರುಗುಬಾಣವಾಗಿ ಅವಳ ಕೈಯಿಂದ ಮೈಕು ಕಸಿದು 'ಮೇಜು ಕುಟ್ಟುತ್ತೀಯಾ?' ಎಂದು ಪ್ರಶ್ನಿಸಿದ್ದು, ಮೈಕಿನೊಂದಿಗೆ ಆ ಮಹಿಳೆಯ ದುಪ್ಪಟ್ಟ ಕಳಚಿ ಬಂದದ್ದು ಹೀನಾಯವಾಗಿ ಎಲ್ಲರಿಗೂ ಮುಜುಗರವನ್ನುಂಟುಮಾಡಿತು. ಸಿದ್ದರಾಮಯ್ಯನವರು ಮಾತ್ರವಲ್ಲ, ಅವರ ಹಿಂದೆ ನಿಂತಿದ್ದ ಪುರುಷರೆಲ್ಲಾ ಅವಳನ್ನು ಸುಮ್ಮನಿರಲು ಸೂಚಿಸುತ್ತಿದ್ದ ದೃಶ್ಯ, ಹೆಣ್ಣಿನ ದಿಟ್ಟ ನಡವಳಿಕೆಗೆ ಪುರುಷರ ಪ್ರತಿಕ್ರಿಯೆಯಾಗಿ ಅಭಿವ್ಯಕ್ತಿ ಪಡೆದಿತ್ತು. ಎಲ್ಲರೂ ಊಹಿಸಬಹುದಾದಂತೆ ಆ ಹೆಣ್ಣು ಮಗಳಿಂದ ಕ್ಷಮಾಪಣೆ ಕೇಳುವ ನಾಟಕವನ್ನು ಸಮರ್ಪಕವಾಗಿಯೇ ಮಾಡಿಸಿಕೊಂಡಾಯ್ತು. ರೆಸಾರ್ಟ್ ರಾಜಕೀಯದ ಪರಿಣಾಮವಾಗಿ ಕುಡಿದು ಉನ್ಮತ್ತರಾಗಿ ಸಾಯುವಂತೆ ಹೊಡೆದಾಡಿಕೊಂಡ ಶಾಸಕರ ದೃಶ್ಯವನ್ನು ಮಾಧ್ಯಮಗಳಲ್ಲಿ ನೋಡಿದ ಮೇಲೆ ಹೆಣ್ಣು ಮಕ್ಕಳಿಗೆ ರಾಜಕೀಯಕ್ಕೆ ಬರುವ ಧೈರ್ಯವೇ ಇರದಿದ್ದರೆ ಆಶ್ಚರ್ಯವಿಲ್ಲ.

ಇಂದು ನಮ್ಮ ರಾಜಕಾರಣಿಗಳ ಹೊಲಸು ನಾಲಿಗೆ ರಾಜಕೀಯ ಕ್ಷೇತ್ರವನ್ನು ಕುಲಗೆಡಿಸಿದೆ. ಹೆಣ್ಣಿನ ಮೇಲಾಗುವ ಅತ್ಯಾಚಾರದ ಹಿಂಸೆಯನ್ನು ತಮ್ಮ ದಿನನಿತ್ಯದ ಹಿಂಸೆಗೆ ಹೋಲಿಸಿ ನಗಾಡುವ ಸಭಾಪತಿಗಳು, ಅವರಿಗೆ ದನಿಗೂಡಿಸುವ ರಾಜಕಾರಣಿಗಳು ನಿರಾಶಾದಾಯಕ ವಾತಾವರಣವನ್ನು ಸೃಷ್ಟಿಸುತ್ತಿದ್ದಾರೆ. ಶಬರಿಮಲೆ ಅಯ್ಯಪ್ಪನ ಪ್ರಕರಣವಂತೂ ವೋಟಿನ ರಾಜಕೀಯದಲ್ಲಿ ಹೆಣ್ಣನ್ನು ದಾಳವಾಗಿ ಬಳಸಿಕೊಂಡು ಅವಳಿಗೆ ಅಪಮಾನಮಾಡಿದ ಅತ್ಯುತ್ತಮ ಉದಾಹರಣೆಯಾಗಿದೆ. ಎಲ್ಲ ಬಲಪಂಥೀಯ ಪಕ್ಷಗಳು ವೋಟಿನ ರಾಜಕೀಯದ ಆಟವಾಡಿ ಹೆಣ್ಣನ್ನು ಅಪಮಾನಿಸುವುದರಲ್ಲಿ ಹಿಂದೆ ಬೀಳಲಿಲ್ಲ. 'ಹಿಂದೂ ಹೆಣ್ಣು ಮಕ್ಕಳ ಮೇಲೆ ಯಾರಾದರೂ ಕೈಹಾಕಿದರೆ, ಅವರ ಕೈಯನ್ನು ಕತ್ತರಿಸಿ' ಎಂದು ಆದೇಶ ನೀಡುವ ಕೇಂದ್ರ ಮಂತ್ರಿಯ ಹುಚ್ಚು ಮಾತುಗಳೂ ಮತಗಳಿಕೆಯ ಸೂತ್ರಗಳೇ. ಬೇರೆ ಮತದ ಹೆಣ್ಣುಮಕ್ಕಳಿಗೆ ಏನಾದರೂ ಆಗಬಹುದು, ಎನ್ನುವುದಾದರೆ, ಇವನೆಂತಹ ಜನಪ್ರತಿನಿಧಿಯಾದಾನು.

ಮಹಿಳೆಯರನ್ನು ಒಂದು ಸಮುದಾಯವಾಗಿ ಪರಿಗಣಿಸಲು ಮಹಿಳಾ ರಾಜಕಾರಣಿಗಳಿಗೆ ಸಾಧ್ಯವಾಗಿದೆಯೇ, ಎಂದು ಪ್ರಶ್ನಿಸಿಕೊಂಡರೆ ಅಲ್ಲೂ ಉತ್ತರ ಆಶಾದಾಯಕವಾಗಿಲ್ಲ. ಮಹಿಳಾ ಪ್ರಾತಿನಿಧ್ಯಕ್ಕಾಗಿ ಮತ್ತು ಮಹಿಳಾ ಮೀಸಲಾತಿಗಾಗಿ ಮಹಿಳಾ ಚಳುವಳಿಯು ದೀರ್ಘ ಹೋರಾಟವನ್ನು ನಡೆಸಿದೆಯಾದರೂ ಚುನಾಯಿತರಾದ ಮಹಿಳೆಯರು ಮಹಿಳಾ ಕಾಳಜಿಗಳನ್ನು ವ್ಯಕ್ತಪಡಿಸುವುದಕ್ಕಿಂತ ಹೆಚ್ಚಾಗಿ ಅವರ ಪಕ್ಷದ ಆಶೋತ್ತರಗಳಿಗೆ, ಇಲ್ಲವೆ ರಾಜಕೀಯ ಆಮಿಷಗಳಿಗೆ ಸ್ಪಂದಿಸುತ್ತಾರೆ. ಶಬರಿಮಲೆ ಪ್ರಕರಣದಲ್ಲಿ ಮಹಿಳಾ ರಾಜಕಾರಣಿಗಳು ತಾವು ಹೆಣ್ಣೆಂಬುದನ್ನು ಮರೆತು ತಮ್ಮ ಪಕ್ಷಗಳ ಧ್ವನಿಯನ್ನು ಮತ್ತೆ ಮೊಳಗಿಸಿ ಸ್ತ್ರೀವಿರೋಧಿ ನಿಲುವಿಗೆ ಸಾಕ್ಷಿಯಾಗಿದ್ದಾರೆ! "ಮಹಿಳೆಯರಿಗೆ ಸಮಾನತೆ ಬೇಡ" ಎನ್ನುವ ಭಾಜಪ ದ ರಾಜ್ಯ ಘಟಕದ ಅಧ್ಯಕ್ಷೆ ಭಾರತಿ ಶೆಟ್ಟಿಯಂಥವರ ಮಾತು ಮತ್ತು ರಾಜಕೀಯ ಚಟುವಟಿಕೆ ಗಳಿಂದ ಸ್ತ್ರೀ ಸಮುದಾಯಕ್ಕೆ ಏನು ಲಾಭ? ಮಹಿಳಾ ಪ್ರತಿನಿಧಿಗಳಿಗೂ ಮಹಿಳಾ ಚಳುವಳಿಗೂ ಪರಸ್ಪರ ಕೊಳು ಕೊಡುಗೆಗಳಿಲ್ಲದೆ ಇದ್ದಲ್ಲಿ ಮಹಿಳಾ ಪ್ರತಿನಿಧೀಕರಣಕ್ಕೂ ಲಾಭವಿಲ್ಲ. ಆದರೆ ಎಲ್ಲೋ ಕೆಲವರು ಮಹಿಳಾ

ಚಳುವಳಿಯೊಂದಿಗೆ ಸಂಪರ್ಕವಿರಿಸಿಕೊಂಡವರು, ಚಳುವಳಿಯಿಂದಲೇ ಮೂಡಿಬಂದವರು ಮಾತ್ರ ಗುಣಾತ್ಮಕವಾದ ನಾಯಕತ್ವವನ್ನು ಕೊಡುವಲ್ಲಿ ಸಫಲರಾಗಿದ್ದಾರೆ, ಎಂಬುದಕ್ಕೆ ಕೆಲವು ನಿದರ್ಶನಗಳು ನಮ್ಮ ಕಣ್ಣ ಮುಂದಿವೆ.

ಅಧಿಕಾರ ರಾಜಕೀಯದ ವಿಶಾಲ ಕ್ಷೇತ್ರಕ್ಕೆ ಕಾಲಿಡುವ ಮುನ್ನ ಮಹಿಳೆ ತನ್ನಲ್ಲೇ ಕೆಲವು ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾಗುತ್ತದೆ. ದೃಢವಾದ ರಾಜಕೀಯ ಅಂಶಗಳು ಮಾತ್ರ ಸಬಲೀಕರಣವನ್ನು ವಾಸ್ತವವಾಗಿಸಲು ಸಾಧ್ಯ. ಅಭಿವೃದ್ಧಿ ರಾಜಕೀಯದ ಸೈದ್ಧಾಂತಿಕ ಅಂಶಗಳನ್ನು ಹೆಚ್ಚಿಸಿದಾಗ ಮಾತ್ರ ಸಬಲೀಕರಣಕ್ಕೊಂದು ಅರ್ಥ ಬರುತ್ತದೆ. ರಾಜಕೀಯ ಎನ್ನುವ ಪದವೇ ಹೆಚ್ಚು ವ್ಯಾಪ್ತಿಯನ್ನು ಪಡೆಯಬೇಕು. ಅಧಿಕಾರ ಮತ್ತು ಸಂಪನ್ಮೂಲಗಳ ಹಂಚಿಕೆಯಲ್ಲಿ ಮಹಿಳೆಯರು ಪ್ರಮುಖ ಪಾತ್ರವಹಿಸಬೇಕು. ತಾವು ಸರ್ಕಾರದ ಔದಾರ್ಯದಿಂದ ನೀಡಲಾಗುವ ದಾನ, ಧರ್ಮದ ಫಲಾನುಭವಿಗಳು ಮಾತ್ರ ಎಂದು ತೃಪ್ತರಾಗದೆ, ಸರ್ಕಾರದ ಅಧಿಕಾರದಲ್ಲಿ ಪಾಲು ಕೇಳುವುದರಲ್ಲೂ ಹೆಂಗಸರು ಬಾಧ್ಯಸ್ಥರಾಗಬೇಕು.

ಮಹಿಳೆಯರು ಸ್ವತಃ ಅಧಿಕಾರ ಗಳಿಸಲು ಪ್ರಯತ್ನಿಸುವುದು ಹಾಗೂ ಮಹಿಳೆಯರು ಅಧಿಕಾರ ಗಳಿಸುವಂತೆ ಇತರರು ಮಾಡುವುದು – ಇವೆರಡೂ ಪ್ರಕ್ರಿಯೆಗಳು ಮಹಿಳಾ ಸಬಲೀಕರಣದ ಎರಡು ಮುಖಗಳು. ಮಹಿಳಾ ಮೀಸಲಾತಿ ನಮ್ಮ ರಾಜಕೀಯ ವ್ಯವಸ್ಥೆಯ ಎಲ್ಲ ಅಸಮಾನತೆಯನ್ನು ಇಲ್ಲವಾಗಿಸುತ್ತದೆ, ಎಂದು ಭಾವಿಸುವುದೇ ಮೊದಲು ತಪ್ಪು. ಮೀಸಲಾತಿಯು ಆರಂಭದಲ್ಲಿ ರಾಜಕೀಯ ಕ್ಷೇತ್ರದಲ್ಲಿ ನಿರ್ಧಾರ ತೆಗೆದುಕೊಳ್ಳಬಲ್ಲ ಮಹಿಳೆಯರ ಸಂಖ್ಯೆಯನ್ನು ಹೆಚ್ಚಿಸುತ್ತದೆ. ಇಂತಹ ಹೆಚ್ಚಿನ ಸಂಖ್ಯೆಯ ಮಹಿಳೆಯರಿಂದಾಗಿ ಬದಲಾದ ಮಹಿಳಾ ಸಂಸ್ಕೃತಿಯ ಸೃಷ್ಟಿಗೆ ನಾಂದಿ ಹಾಡಬಹುದು. ಮೀಸಲಾತಿ ಮಸೂದೆಯು ಪುರುಷ ಪ್ರಾಧಾನ್ಯತೆಯನ್ನು ಪ್ರಶ್ನಿಸುವ, ಸಮಾಜದ ಸ್ಥಾಪಿತ ಮೌಲ್ಯಗಳಿಗೆ ಸವಾಲೆಸೆಯುವ ಪ್ರಯತ್ನವಾಗಿದೆ. ಇಂತಹ ಪ್ರಯತ್ನಗಳು ರೂಢಿಗತ ಸಮಾಜಕ್ಕೆ ಒಂದು ಶಾಕ್ ಕೊಡಬಹುದು. ಇದರಿಂದ ಮಹಿಳೆಯರ ಸಮಸ್ಯೆಗಳೆಲ್ಲಾ ಪರಿಹಾರವಾಗುತ್ತದೆ, ಎಂಬ ಭ್ರಮೆ ಇಟ್ಟುಕೊಳ್ಳುವುದು ಬೇಡ. ಆದರೆ ಸಮಾಜದ ಸ್ಥಗಿತತೆಯನ್ನು ಅಲುಗಾಡಿಸಿ ಬದಲಾವಣೆಯತ್ತ ಮುಖ ಮಾಡಲು ಚಿಕ್ಕ ಚಿಕ್ಕ ಶಾಕ್‌ಗಳು ತುಂಬ ಪ್ರಯೋಜನಕಾರಿಯಾಗುತ್ತವೆ.

"ಶಾಸನ ಸಭೆಗಳಲ್ಲಿ ಮಹಿಳೆಯರ ಪ್ರಾತಿನಿಧ್ಯವು ಹೆಚ್ಚಿದಲ್ಲಿ ಸಾಮಾಜಿಕ ಬದ್ಧತೆ ಹಾಗೂ ಸೂಕ್ಷ್ಮತೆ ಉನ್ನತ ಮಟ್ಟದಲ್ಲಿರುತ್ತದೆ. ಸದನದಲ್ಲಿ ಶಿಸ್ತು, ಸಂಯಮದ ವಾತಾವರಣ ಮೂಡುವುದಲ್ಲದೆ ಕಿರಿ ಕಿರಿ ಉಂಟುಮಾಡುವ ಸನ್ನಿವೇಶಗಳು ಕಡಿಮೆಯಾಗುತ್ತವೆ." ಎಂದು ನಮ್ಮ ಭಾರತದ ಪ್ರಧಾನಿ ಕೆ. ಆರ್. ನಾರಾಯಣನ್ ಹಿಂದೆ ಹೇಳಿದ್ದರು. ಇಂತಹ ಮನಃಸ್ಥಿತಿಯಿರುವ ಪುರುಷರು ಹೆಚ್ಚಾಗಬೇಕು. ಚುನಾಯಿತರಾದ ಮಹಿಳೆಯರು ಅಂತಹ ಧೀರೋದಾತ್ತ ಗುಣಗಳನ್ನು ಅಳವಡಿಸಿಕೊಳ್ಳಬೇಕು.

೧೯೮೦ರ ದಶಕದಲ್ಲಿ ಮಹಿಳಾ ಸಂಘಟನೆಗಳು ಆರಂಭಿಸಿದ್ದ ಸಾಮಾಜಿಕ ಸಮಸ್ಯೆಗಳ ವಿರುದ್ಧದ 'ಪ್ರತಿಭಟನಾ ರಾಜಕೀಯ' ಇಂದು ತನ್ನ ನೆಲೆಯನ್ನು ರಾಜಕೀಯ ಮುಖ್ಯವಾಹಿನಿಗೆ ಬದಲಾಯಿಸಿದೆ. ಸಮಾಜ ಮತ್ತು ರಾಜಕೀಯ ಪರಿವರ್ತನೆಯಲ್ಲಿ ತನ್ನದು ಮಹತ್ವದ ಪಾತ್ರ ಎನ್ನುವ ಮಹಿಳಾ ಚಳುವಳಿ ರಾಜಕೀಯ ಮೀಸಲಾತಿಯನ್ನು ತನ್ನ ಪ್ರಮುಖ ಅಜೆಂಡಾ ಆಗಿ ಮಾಡಿಕೊಂಡಿದೆ. ಮಹಿಳಾ ಮೀಸಲಾತಿ ಮಸೂದೆ ನೆನೆಗುದಿಗೆ ಬಿದ್ದು ೨೩ ವರ್ಷಗಳೇ ಕಳೆದಿವೆ. ಆದರೆ ಹೋರಾಟಗಾರ್ತಿಯರು ನಿರಾಶರಾಗಿಲ್ಲ. ಇದನ್ನೊಂದು ಬಹುಮುಖ್ಯ ಅಜೆಂಡಾ ಮಾಡಿಕೊಳ್ಳುವ ಸಂಕಲ್ಪ ತೊಟ್ಟು ಹೋರಾಟ ಮುಂದುವರೆಸಿದ್ದಾರೆ. ಸದ್ಯದಲ್ಲೇ ನಾವು ಲೋಕಸಭೆಯ ಚುನಾವಣೆಯನ್ನು ಎದುರಿಸಲು ಹೋಗುತ್ತಿದ್ದೇವೆ. ಮಹಿಳೆಯರ ಹಿತಾಸಕ್ತಿಗಳನ್ನು ಕೇಂದ್ರೀಕರಿಸಿ ಚುನಾವಣೆಯ ಪ್ರಚಾರ ಕೈಗೊಳ್ಳಬೇಕಿದೆ. ಗಾರ್ಮೆಂಟ್ ಮಹಿಳೆಯರು, ಅಂಗನವಾಡಿ, ಬಿಸಿಯೂಟದ ಮಹಿಳೆಯರು, ಸ್ವಸಹಾಯ ಗುಂಪಿನ ಮಹಿಳೆಯರು ಒಗ್ಗಟ್ಟಾಗಿ ಸಂಘಟಿತರಾಗಿ ಯಾವುದೇ ಆಮಿಷಗಳಿಗೆ ಒಳಗಾಗದೆ ಮುನ್ನಡೆಯಬೇಕಾಗಿದೆ. ಹೆಂಗಸರ ಬೇಡಿಕೆಗಳನ್ನು ಕ್ಷುಲ್ಲಕವಾಗಿ ಕಾಣುವ ಅಧಿಕಾರಸ್ಥರಿಗೆ ಬುದ್ಧಿ ಕಲಿಸಬೇಕಾಗಿದೆ. ಮದ್ಯಪಾನ ನಿಷೇಧ ಬೇಡಿಕೆಯನ್ನಿಟ್ಟುಕೊಂಡು ಚಿತ್ರದುರ್ಗದಿಂದ ಬೆಂಗಳೂರಿಗೆ ಎರಡು ಸಾವಿರ ಮಹಿಳೆಯರು ೧೨ ದಿನಗಳ ಕಾಲ ೨೧೦ ಕಿಲೋಮೀಟರ್ ದೂರವನ್ನು ಕಾಲ್ನಡಿಗೆಯಲ್ಲಿ ಕ್ರಮಿಸಿ ಬಂದದ್ದು ಮಹಿಳೆಯರ ಹೋರಾಟದ ಶಕ್ತಿಗೆ ಜ್ವಲಂತ ಉದಾಹರಣೆಯಾಗಿದೆ.

"ಸಮಾನವಾಗಿ ಯೋಚಿಸಿ, ಪರಿವರ್ತನೆಗಾಗಿ ಕ್ರಿಯಾಶೀಲ ನವೀನ ಮಾದರಿಯನ್ನು ನಿರ್ಮಿಸಿ" ಎನ್ನುವುದು ಈ ಬಾರಿಯ ವಿಶ್ವ ಮಹಿಳಾದಿನದ ಘೋಷಣೆಯಾಗಿದೆ. ಪುರುಷಶಾಹಿಯ ರಾಜಕೀಯ ಆಟಕ್ಕೆ ದಾಳಗಳಾಗದೆ ಲಿಂಗಸಮಾನತೆಯನ್ನು ಇನ್ನೂ ಹೆಚ್ಚು ಸೃಜನಶೀಲವಾಗಿ, ಕ್ರಿಯಾಶೀಲವಾಗಿ ಸಾಧಿಸುವ ಹೊಸ ಅನ್ವೇಷಣೆಗಳನ್ನು ಕಂಡುಕೊಳ್ಳುವುದು ಮಹಿಳಾ ಚಳುವಳಿಯ ಗುರಿಯಾಗಬೇಕಾಗಿದೆ.

ಗಾಯತ್ರಿ. ಎನ್.

## ದೇಶದ ಭದ್ರತೆ ಮತ್ತು ರಾಜಕಾರಣ

**ಕಾ**ಶ್ಮೀರದಲ್ಲಿ ನಮ್ಮ ದೇಶದ ಸೈನಿಕರ ಮೇಲೆ ಭಯೋತ್ಪಾದಕ ಸಂಘಟನೆಯ ಆತ್ಮಾಹುತಿ ಸದಸ್ಯನಿಂದ ನಡೆದ ಅಮಾನವೀಯ ದಾಳಿ, ರಾಷ್ಟ್ರೀಯ, ಅಂತರರಾಷ್ಟ್ರೀಯ ವಲಯದಲ್ಲಿ ಖಂಡನೆಗೆ ಒಳಗಾಗಿದೆ. ನಮ್ಮ ದೇಶದ ಜನತೆಯ ಮನ ಕಲಕಿರುವ ಈ ದಾಳಿ, ಇಷ್ಟು ವರ್ಷಗಳ ಕಾಲ ನಡೆದ ಭಯೋತ್ಪಾದನಾ ದಾಳಿಗಳಲ್ಲಿ ತೀವ್ರವಾದದ್ದು.






■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೫/- |
| ವಾರ್ಷಿಕ ಚಂದಾ | ₹ ೩೦೦/- |
| ಮೂರು ವರ್ಷಕ್ಕೆ | ₹ ೬೦೦/- |

■ ನವಕರ್ನಾಟಕ ಶಾಖೆಗಳು

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಮೃತ ಯೋಧರ ಸಾವಿಗೆ ಕಂಬನಿ ಮಿಡಿಯುತ್ತಲೇ ಅವರ ಕುಟುಂಬದ ದುಃಖದಲ್ಲಿ 'ಹೊಸತು' ಬಳಗ ಭಾಗಿಯಾಗುತ್ತದೆ.

ಭಾರತ ಪಾಕಿಸ್ತಾನಗಳ ನಡುವಿನ ಸಂಘರ್ಷ ಹೊಸದಲ್ಲ. ಈ ಎರಡೂ ದೇಶಗಳು ಸ್ವತಂತ್ರವಾಗುತ್ತಲೇ ಆರಂಭವಾದ ಈ ಸಂಘರ್ಷ ಇಂದು ಕಾಶ್ಮೀರ ವಿಷಯದಲ್ಲಿ ಮುಂದುವರೆಯುತ್ತಲೇ ಇದೆ. ಕೇಂದ್ರದಲ್ಲಿ ಯಾವುದೇ ಪಕ್ಷದ ಸರಕಾರವಿದ್ದರೂ ಕಾಶ್ಮೀರ ವಿವಾದ, ಗಡಿಭಾಗದಲ್ಲಿ ಸಂಘರ್ಷ ನಡೆಯುತ್ತಲೇ ಇದೆ. ಎರಡು ದೇಶಗಳ ನಡುವೆ ಸ್ನೇಹ ಸಂಬಂಧ ಬೆಳೆಸಲು ಹಲವಾರು ಪ್ರಯತ್ನಗಳೂ ನಡೆದಿವೆ. ಇಂದು ಕಾಶ್ಮೀರದಲ್ಲಿ ಮೊದಲ ಬಾರಿಗೆ ಕಾರ್‌ಬಾಂಬ್ ಸ್ಫೋಟದ ಮೂಲಕ ದಾಳಿ ನಡೆಸಿದ ಭಯೋತ್ಪಾದಕ ಕಾಶ್ಮೀರಿ ಯುವಕ, ಅವನ ಜೊತೆ ಈ ಸಂಚಿನಲ್ಲಿ ಪಾಕಿಸ್ತಾನದ ಪ್ರಜೆಯ ಕೈವಾಡವೂ ಇದೆ ಎಂದು ವರದಿಯಾಗಿದೆ. ಇಂಥ ಸಂಚುಗಾರರು, ಕೊಲೆಗಾರರು ಯಾವ ದೇಶದಲ್ಲಿದ್ದರೂ ಅವರನ್ನು ಹಿಡಿದು ಶಿಕ್ಷೆಗೊಳಪಡಿಸಬೇಕಾದದ್ದು ಎಲ್ಲ ದೇಶಗಳ ಜವಾಬ್ದಾರಿ. ಪಾಕಿಸ್ತಾನ ಸರಕಾರ ತನ್ನ ದೇಶದಲ್ಲಿ ಆಶ್ರಯ ಪಡೆದಿರುವ ಭಯೋತ್ಪಾದಕರ ಭಾಗವಹಿಸುವಿಕೆಯ ಕುರಿತು ಸಾಕ್ಷಿ ಕೇಳುತ್ತಿದೆ. ಇದು ರಾಜತಾಂತ್ರಿಕವಾಗಿ ನೋಡುವ ವಿಚಾರವಲ್ಲ. ಇದು ಪಾಕಿಸ್ತಾನದ ಸೈನಿಕರಿಂದ ನಡೆದ ದಾಳಿಯಲ್ಲ ನಿಜ. ಆದರೆ ಕಾಶ್ಮೀರದ ಪ್ರತ್ಯೇಕತಾವಾದಿಗಳಿಗೆ ಪಾಕಿಸ್ತಾನ ಸರಕಾರ ಬೆಂಬಲ, ರಕ್ಷಣೆ, ಸಹಾಯ ಕೊಡುತ್ತಿರುವುದು ಹೊಸ ವಿಷಯವೇನಲ್ಲ. ಭಯೋತ್ಪಾದಕ ಶಕ್ತಿಗಳಿಗೆ ನೆಲೆಕೊಟ್ಟು ತನ್ನ ದೇಶದ ಹಲವಾರು ಪ್ರಜೆಗಳು, ಮಕ್ಕಳು ಮಾತ್ರವಲ್ಲ ರಾಜಕೀಯ ಧುರೀಣರೂ ಬಲಿಯಾಗಿದ್ದನ್ನು ಪಾಕಿಸ್ತಾನ ಸರಕಾರ ಗಮನಿಸಬೇಕು. ವಾಸ್ತವದಲ್ಲಿ ಪಾಕಿಸ್ತಾನ ಸರಕಾರ ಭಯೋತ್ಪಾದಕರಿಗೆ ಬೆಂಬಲಿಸುತ್ತಿದೆಯೋ ಅಥವಾ ಸರಕಾರವೇ ಮೂಲಭೂತವಾದಿ ಭಯೋತ್ಪಾದಕ ಸಂಘಟನೆಗಳ ನಿಯಂತ್ರಣದಲ್ಲಿದೆಯೋ ಎಂಬುದು ಇಂದು ವಿವಾದದ ಸಂಗತಿ.

ಎರಡನೇ ಜಾಗತಿಕ ಮಹಾಯುದ್ಧದ ನಂತರ ಸ್ವತಂತ್ರವಾದ ಈ ಎರಡು ದೇಶಗಳು ಅಂತರರಾಷ್ಟ್ರೀಯ ಮಟ್ಟದಲ್ಲಿ ವಿಭಿನ್ನ ರಾಜಕೀಯ ಮಾರ್ಗ ತುಳಿದವು. ಅಲಿಪ್ತ ರಾಷ್ಟ್ರಗಳ ಒಕ್ಕೂಟ ಸೇರಿದ ಭಾರತ ಸಮಾಜವಾದಿ ದೇಶಗಳೊಂದಿಗೆ ಸಹಕಾರ, ಸೌಹಾರ್ದ, ಸಂಬಂಧವಿಟ್ಟುಕೊಂಡು ಆಂತರಿಕ ಅಭಿವೃದ್ಧಿಯಲ್ಲಿ ಗಮನಾರ್ಹ ಬೆಳವಣಿಗೆ ಕಂಡಿತು. ಅದೇ ಸಂದರ್ಭದಲ್ಲಿ ವಿಶ್ವದ ಸ್ವತಂತ್ರ, ಅಭಿವೃದ್ಧಿಶೀಲ, ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ದೇಶಗಳ ಪರವಾಗಿ ನಿಂತಿತು, ಅಲಿಪ್ತ ರಾಷ್ಟ್ರಗಳ ಒಕ್ಕೂಟದ ನಾಯಕತ್ವವನ್ನೂ ವಹಿಸಿತು. ಈ ಎಲ್ಲ ಬೆಳವಣಿಗೆಗಳನ್ನು ಸಹಿಸದ ಅಮೆರಿಕ ದಕ್ಷಿಣ ಏಶಿಯಾ ಪ್ರದೇಶದಲ್ಲಿ, ಭಾರತ ಉಪಖಂಡದಲ್ಲಿ ತನ್ನ ನಿಯಂತ್ರಣ ಸಾಧಿಸಲು ಪಾಕಿಸ್ತಾನವನ್ನು ತನ್ನ ಕೈಗೊಂಬೆ ಮಾಡಿಕೊಂಡಿತು. ಈ ಭಾಗದಲ್ಲಿನ ತನ್ನ ಸೇನಾ ನೆಲೆಗಳಿಗೆ, ಅಮೆರಿಕದ ಗುಪ್ತಚರ ಸಂಸ್ಥೆ ಸಿಐಎ ಚಟುವಟಿಕೆಗಳಿಗೆ ಪಾಕಿಸ್ತಾನವನ್ನು ಬಳಸಿಕೊಂಡಿತು. ಕಳೆದ ಶತಮಾನದ ೭೦-೮೦ರ ದಶಕದಲ್ಲಿ ಅಮೆರಿಕಾ, ನ್ಯಾಟೋ ಕೂಟದಿಂದ ವಿಶ್ವದಾದ್ಯಂತ ಸ್ವತಂತ್ರ, ಅಲಿಪ್ತ ದೇಶಗಳ ಮೇಲೆ ನಿರಂತರವಾಗಿ ದಾಳಿ, ಯುದ್ಧ ನಡೆದವು. ಅಮೆರಿಕದ ಸಿಐಎ ಬಡ, ಅಭಿವೃದ್ಧಿಶೀಲ ದೇಶಗಳಲ್ಲಿ ಬುಡಮೇಲು ಕೃತ್ಯಗಳನ್ನು ನಡೆಸಿದ್ದು, ಭಯೋತ್ಪಾದಕ ಗುಂಪುಗಳಿಗೆ ತರಬೇತಿ ಕೊಟ್ಟಿದ್ದು ಗುಟ್ಟಾಗಿ ಉಳಿದಿಲ್ಲ. ೧೯೭೮ರಲ್ಲಿ ಅಫಘಾನಿಸ್ತಾನ್‌ದಲ್ಲಿ ಆದ ಕ್ರಾಂತಿ, ಅಲ್ಲಿನ ಮೂಲಭೂತವಾದಿಗಳ ಸರಕಾರದ ಪತನದಿಂದ ಅಮೆರಿಕ ವಿಚಲಿತವಾಯಿತು. ಅಫಘಾನಿಸ್ತಾನದಲ್ಲಿನ ಸೋವಿಯತ್ ಯೂನಿಯನ್ ಬೆಂಬಲಿತ ಸರಕಾರವನ್ನು ಪತನ ಮಾಡಲು ಅಮೆರಿಕ ನಡೆಸಿದ ಕುತಂತ್ರಗಳಿಗೆ ವಿಶ್ವ ಸಂಸ್ಥೆಯೂ ಬೆಚ್ಚಿ ಬಿದ್ದಿದೆ. ಆಫ್ಘಾನಿಸ್ತಾನದ ಸರಕಾರವನ್ನು ಪತನ ಮಾಡಲು ಅಧಿಕಾರ ಕಳೆದುಕೊಂಡ ಆಫ್ಘಾನಿ ಮೂಲಭೂತವಾದಿಗಳಿಗೆ ಭಯೋತ್ಪಾದನೆಯ ತರಬೇತಿ ಕೊಟ್ಟದ್ದು ಅಮೆರಿಕದ ಸಿಐಎ, ಅದು ಆ ತರಬೇತಿಗೆ ಬಳಸಿಕೊಂಡ ನೆಲವೇ ಪಾಕಿಸ್ತಾನ.

ಇರಾನ್ ದೇಶದ ಸವಾಕ್, ಇಸ್ರೇಲ್‌ನ ಮೊಸ್ಸಾದ್, ಮಧ್ಯಪೂರ್ವದ ಮುಸ್ಲಿಂ ಸಹೋದರತ್ವ, ಇಂಥ ಸಂಸ್ಥೆ, ಸಂಘಟನೆಗಳಿಗೆ ಸಹಾಯ, ತರಬೇತಿಕೊಟ್ಟ ಸಿಐಎ, ಆಫ್ಘಾನಿಸ್ತಾನದ ಇಸ್ಲಾಮಿ ಮೈತ್ರಿಕೂಟದ ಸಂಚುಗಾರ ಬರ್ಹಾನುದ್ದೀನ್ ರಬ್ಬಾನಿಗೆ, ಅವನ ಪಡೆಗಳಿಗೆ ಆಫ್ಘಾನಿಸ್ತಾನ ಸರಕಾರ ಉರುಳಿಸಲು, ಭಯೋತ್ಪಾದನೆ ನಡೆಸಲು ಹಣಕಾಸು ನೀಡಿದ್ದು ಅಮೆರಿಕ, ತರಬೇತಿಕೊಟ್ಟದ್ದು ಅವರ ಸಿಐಎ, ಅದರ ಜೊತೆಗೂಡಿದ್ದು ಪಾಕಿಸ್ತಾನದ ಗುಪ್ತಚರ ಸಂಸ್ಥೆ ಐಎಸ್‌ಐ, ಇದೆಲ್ಲ ನಡೆದದ್ದು ಪಾಕಿಸ್ತಾನದಲ್ಲಿ. ಆಗ ಪಾಕಿಸ್ತಾನದಲ್ಲಿ ರೂಪುಗೊಂಡ ಯೋಜನೆಯ ಪ್ರಕಾರ ೧೯೮೧ರಲ್ಲಿ ಬಾಂಗ್ಲಾ ದೇಶದ ಅಧ್ಯಕ್ಷ ರೆಹಮಾನ್ ಕೊಲೆಯಾಯಿತು. ಮುಂದೆ ಆಫ್ಘಾನಿಸ್ತಾನ ಸರಕಾರ ಪತನವಾಯಿತು. ಆ ಸಂದರ್ಭದಲ್ಲಿ ಪಾಕಿಸ್ತಾನ ಸರಕಾರ ನಿಧಾನವಾಗಿ ತನ್ನ ಮೂಲ ಶಕ್ತಿಯನ್ನು ಕಳೆದುಕೊಂಡು, ಅಮೆರಿಕದ ಜೊತೆಗೂಡಿ ತಾನೇ ಬೆಳೆಸಿದ ಮೂಲಭೂತವಾದಿ, ಭಯೋತ್ಪಾದಕ ಸಂಘಟನೆಗಳ ಕೈಗೊಂಬೆ ಆಗುವಂತಾಯಿತು. ತಿರುಗಿಬಿದ್ದ ಅದೇ ಭಯೋತ್ಪಾದಕ ಶಕ್ತಿಗಳು ಅಮೆರಿಕದ ವಾಣಿಜ್ಯ ಕಟ್ಟಡಗಳ ಮೇಲೆ ದಾಳಿ ಮಾಡಿದವು. ಆಫ್ಘಾನಿಸ್ತಾನ ಸರಕಾರವನ್ನು ಪತನ ಮಾಡಿದ ಮೂಲಭೂತವಾದಿಗಳು, ಪಾಕಿಸ್ತಾನದಲ್ಲಿ ತರಬೇತಿ ಹೊಂದಿದ ಮತಾಂಧ ಶಕ್ತಿಗಳು ಕಾಶ್ಮೀರದ ಮೇಲೆ ತಮ್ಮ ದಾಳಿಗಳನ್ನು ಕೇಂದ್ರೀಕರಿಸಿದವು.

ಧರ್ಮಾಧಾರಿತ ದೇಶವಾದ ಪಾಕಿಸ್ತಾನದ ಸರಕಾರ ಜನರ ಮೂಲಭೂತ ಸಮಸ್ಯೆಗಳನ್ನು ಪರಿಹರಿಸಲಾಗದೆ ಇಸ್ಲಾಂ ಮೂಲಭೂತವಾದಿ ಸಂಘಟನೆಗಳ ನಿಯಂತ್ರಣದಿಂದ ತಪ್ಪಿಸಿಕೊಳ್ಳಲಾಗದೆ ಸಂದಿಗ್ಧ ಸ್ಥಿತಿಯಲ್ಲಿದೆ. ಜನ ಹಸಿವು, ಬಡತನ, ನಿರುದ್ಯೋಗದಿಂದ ತತ್ತರಿಸಿದ್ದಾರೆ. ಪಾಕಿಸ್ತಾನ ಸರಕಾರ ಭಾರತದ ಭಯ ತೋರಿಸಿ, ಕಾಶ್ಮೀರಿಗಳ ಸ್ವಾತಂತ್ರ್ಯದ ಹೆಸರಿನಲ್ಲಿ ಜನರನ್ನು ಸೇನಾ ಹಿಡಿತದಲ್ಲಿಟ್ಟುಕೊಂಡಿದೆ. ಪಾಕಿಸ್ತಾನ ಸರಕಾರ ಭಯೋತ್ಪಾದನೆಗೆ ಬೆಂಬಲಿಸುತ್ತದೆ ಎಂದು ಗೊತ್ತಿದ್ದೂ ಅಮೆರಿಕ ಕಳೆದ ಹದಿನೈದು ವರ್ಷಗಳಲ್ಲಿ ಪಾಕಿಸ್ತಾನಕ್ಕೆ ೩೩ ಬಿಲಿಯನ್ ಡಾಲರ್ (ಸುಮಾರು ೨೩೧೦೦೦ ಕೋಟಿ ರೂಪಾಯಿ) ಧನಸಹಾಯ ಮಾಡಿದೆ. ಆ ದೇಶದ ಸರಕಾರವನ್ನು ಮೂಲಭೂತವಾದಿ, ಭಯೋತ್ಪಾದಕ ಶಕ್ತಿಗಳ ಕೈಗೊಪ್ಪಿಸಿದ್ದೇ ಅಮೆರಿಕಾ. ಇಂದು ನಮ್ಮ ದೇಶದ ಸರಕಾರದ ಆಡಳಿತ ಪಕ್ಷ ಪಾಕಿಸ್ತಾನದ ಕುರಿತು ಮಾತನಾಡುತ್ತದೆ. ಅಮೆರಿಕದ ಗುಲಾಮನಾಗಲು ಬಯಸುತ್ತದೆ. ಭಾರತದಲ್ಲಿಯೂ ಹಸಿವು, ನಿರುದ್ಯೋಗ, ಬಡತನ ಈ ಪ್ರಶ್ನೆಗಳನ್ನು ಮರೆಮಾಚಲು ಯುದ್ಧದ ಮಾತನಾಡಲಾಗುತ್ತದೆ. ಕಾಶ್ಮೀರದಲ್ಲಿ ಘಟಿಸಿದ ಸೈನಿಕರ ಸಾವನ್ನು ರಾಜಕೀಯಕ್ಕೆ ಬಳಸಿಕೊಳ್ಳಲಾಗುತ್ತಿದೆ. ಒಟ್ಟಿನಲ್ಲಿ ಭಾರತವನ್ನು ತೋರಿಸಿ ಪಾಕಿಸ್ತಾನ ಸರಕಾರ, ಪಾಕಿಸ್ತಾನವನ್ನು ತೋರಿಸಿ ಭಾರತ ಸರಕಾರ ತಮ್ಮ ಆಡಳಿತವನ್ನು ಸುಭದ್ರಗೊಳಿಸಿಕೊಳ್ಳುವ ಸಂಚಿನಲ್ಲಿ ಮುಳುಗಿವೆ.

ಗಡಿಯಲ್ಲಿ ಸಂಘರ್ಷ, ನಿರಂತರವಾದ ಸೈನಿಕರ ಸಾವು ನಿಲ್ಲಬೇಕಾದರೆ, ಸೌಹಾರ್ದ ವಾತಾವರಣ ಉಂಟಾಗಬೇಕಾದರೆ ಎರಡೂ ದೇಶಗಳ ಸರಕಾರಗಳು ರಾಜಕೀಯ ಪರಿಹಾರಗಳನ್ನು ಹುಡುಕಬೇಕು. ಕಾಶ್ಮೀರದ ಜನ ಬೇರೆ, ಪ್ರತ್ಯೇಕವಾದಿಗಳು ಬೇರೆ. ಜನರ ಮನಪರಿವರ್ತನೆಯ ಮೂಲಕ ಪ್ರತ್ಯೇಕವಾದಿಗಳಿಂದ ಜನರನ್ನು ರಕ್ಷಿಸಬೇಕಾದ ಜವಾಬ್ದಾರಿ ನಮ್ಮ ಸರಕಾರ, ದೇಶದ ಜನರ ಮೇಲಿದೆ.

ಪಾಕಿಸ್ತಾನದಲ್ಲಿ ಇಸ್ಲಾಂ ಪ್ರಭುತ್ವ ಇರುವಂತೆ ಭಾರತದಲ್ಲಿ ಹಿಂದೂತ್ವ ಪ್ರಭುತ್ವ ತರಬೇಕೆಂದು ನಮ್ಮ ದೇಶದ ಮತಾಂಧ ಶಕ್ತಿಗಳು ಯತ್ನಿಸುತ್ತಿವೆ. ಎರಡೂ ದೇಶಗಳ ಮತಾಂಧ ಶಕ್ತಿಗಳು ಯುದ್ಧದ ಮಾತನಾಡುತ್ತಿವೆ. ಯುದ್ಧ ಅನ್ನುವುದು ಕ್ರಿಕೆಟ್ ಮ್ಯಾಚಲ್ಲ. ಎರಡೂ ದೇಶಗಳಲ್ಲಿ ಅಣುಬಾಂಬ್‌ಗಳಿವೆ. ಅಣುಬಾಂಬ್ ಪ್ರಯೋಗವಾಗದಿದ್ದರೂ ಯುದ್ಧ ಭಯೋತ್ಪಾದನೆ ತಡೆಯುವ ಮಾರ್ಗವಲ್ಲ. ಯುದ್ಧದಿಂದ ನಮ್ಮ ಇನ್ನಷ್ಟು ಸೈನಿಕರು, ಮತ್ತಷ್ಟು ಅವರ ಸೈನಿಕರು ಸಾಯುತ್ತಾರೆ. ಎರಡೂ ದೇಶಗಳ ಸೈನಿಕರು ರೈತರ, ಬಡವರ ಮಕ್ಕಳು, ದೇಶದ ಯಾವ ಶಾಸಕನ, ಸಂಸದನ ಮಕ್ಕಳೂ ಸೈನಿಕರಾಗಿಲ್ಲ. ಹೀಗಾಗಿ ಅವರು ಯುದ್ಧೋನ್ಮಾದದ ಮಾತನಾಡುತ್ತಾರೆ. ಪಾಕಿಸ್ತಾನದ ಜನ ಮತ್ತು ಭಾರತದ ಜನ ತಮ್ಮ ಸರಕಾರಗಳ ಮೇಲೆ ಒತ್ತಡ ತಂದು ಯುದ್ಧಗಳನ್ನು ತಡೆಯಬೇಕು. ಮತದವರು ಮತಾಂಧರಿಂದ ದೂರವಿರಬೇಕು.

ಭಯೋತ್ಪಾದನೆ ಅಳಿಯಲಿ ಪ್ರೀತಿ, ಸ್ನೇಹ ಬೆಳೆಯಲಿ. ಯುದ್ಧ ತೊಲಗಲಿ, ಶಾಂತಿ ನೆಲೆಸಲಿ ಎಂಬುದು ನಮ್ಮೆಲ್ಲರ ಘೋಷಣೆಯಾಗಲಿ.

ಸಿದ್ದನಗೌಡ ಪಾಟೀಲ

*(೩ನೇ ಪುಟದಿಂದ ಈ ತಿಂಗಳು)*

ಹುದ್ದೆ ನೀಡಿ ಉತ್ತರಪ್ರದೇಶದ ಜವಾಬ್ದಾರಿ ನೀಡಲಾಗಿದೆ. ಈಗಾಗಲೇ ಅಲ್ಲಿ ಅಖಿಲೇಶ್ ಯಾದವ್ ಮತ್ತು ಮಾಯಾವತಿ ಜೋಡಿ ಸಿದ್ಧವಾಗಿದೆ. ಪ್ರತಿಪಕ್ಷಗಳು ಒಂದುಗೂಡಿ ಕನಿಷ್ಠ ಕಾರ್ಯಕ್ರಮವೊಂದನ್ನು ರೂಪಿಸಿ ಚುನಾವಣೆಯನ್ನು ಎದುರಿಸದಿದ್ದರೆ ಮತ್ತೆ ಭಾಜಪದ ಹಾದಿ ಸುಗಮವಾಗುವುದರಲ್ಲಿ ಸಂಶಯವಿಲ್ಲ. ಎತ್ತು ಏರಿಗೆ ಎಳೆದರೆ ಎಮ್ಮೆ ನೀರಿಗೆಳೆಯಿತು ಎಂಬಂತೆ ಒಬ್ಬೊಬ್ಬರೂ ಒಂದೊಂದು ಜಾಡು ಹಿಡಿದರೆ ದಾರಿಕಾಣದಾಗುತ್ತದೆ, ಗೊಂದಲ ಉಂಟಾಗುತ್ತದೆ.

✶ ✶ ✶

ರಫೇಲ್ ಯುದ್ಧ ವಿಮಾನಗಳ ಖರೀದಿ ಇನ್ನೊಂದು ಬೊಫೋರ್ಸ್ ಪ್ರಕರಣವಾಗಿ ಆಡಳಿತ ಮತ್ತು ಪ್ರತಿ ಪಕ್ಷಗಳ ಹಗ್ಗ ಜಗ್ಗಾಟಕ್ಕೆ ಎಡೆಕೊಡುವ ಎಲ್ಲ ಸಾಧ್ಯತೆಯೂ ಇದೆ. ಈಗಾಗಲೇ ಲೋಕಸಭೆಯ ಕಲಾಪವನ್ನು ರಫೇಲ್ ಪ್ರಕರಣ ನುಂಗಿಹಾಕಿದೆ. ಬಜೆಟ್ ಅಧಿವೇಶನದ ಕೊನೆಯ ದಿನ ಲೋಕಸಭೆಯಲ್ಲಿ ಮಂಡನೆಯಾದ ಸಿಎಜಿ ವರದಿ ಮಂಡನೆಯಾಯಿತು. ಅದರ ಬಗ್ಗೆ ಚರ್ಚೆಗೆ ಅವಕಾಶ ಇರಲಿಲ್ಲ. ಈ ವರದಿ ಮೇಲ್ನೋಟಕ್ಕೆ ಸರಕಾರಕ್ಕೆ ಅನುಕೂಲಕರವಾಗಿದ್ದಂತೆ ತೋರುತ್ತದೆ. ಹಲವು ವಿವಾದಿತ ವಿಷಯಗಳನ್ನು, ಪ್ರಶ್ನೆಗಳನ್ನು ವರದಿ ಮುಚ್ಚಿಹಾಕಿದೆ ಎಂದು ಹೇಳಲಾಗುತ್ತಿದೆ. ಅದು ನಿಜವೂ ಹೌದು. ಮೊದಲನೆಯದಾಗಿ ವರದಿ ತಯಾರಿಕೆಯೇ ಸಾಕಷ್ಟು ವಿಳಂಬ ವಾಗಿದೆ. ಫ್ರಾನ್ಸ್‌ಗೆ ಭೇಟಿ ನೀಡಿದ್ದ ಪ್ರಧಾನಿ ಮೋದಿ ರಕ್ಷಣಾ ಸಚಿವಾಲಯ, ವಾಯುಸೇನೆಯ ಅಧಿಕಾರಿಗಳ ಜೊತೆ ಸಮಾಲೋಚನೆ ನಡೆಸದೆಯೇ ವೈಯಕ್ತಿಕವಾಗಿ ಯುದ್ಧ ವಿಮಾನ ಖರೀದಿ ಒಪ್ಪಂದವನ್ನು ಮಾಡಿಕೊಂಡಿದ್ದಾರೆ ಎನ್ನುವುದು ಪ್ರಮುಖ ಆರೋಪ. ಇದರಲ್ಲಿ ಸತ್ಯವೂ ಇದೆ. ಯುಪಿಎ ಸರಕಾರ ಈ ಹಿಂದೆ ೧೨೬ ಯುದ್ಧ ವಿಮಾನಗಳನ್ನು ಕೊಳ್ಳಲು ತೀರ್ಮಾನಿಸಿತ್ತು. ಮೋದಿ ಸರಕಾರ ಅದನ್ನು ೩೬ಕ್ಕೆ ಇಳಿಸಿದೆ. ಬೆಲೆಯೂ ದುಬಾರಿಯೇ. ಹಾಗಾಗಿ ಪ್ರತಿಪಕ್ಷಗಳು ಮುಖ್ಯ ವಾಗಿ ಕಾಂಗ್ರೆಸ್ ಚುನಾವಣೆಯಲ್ಲಿ ಇದನ್ನು ಪ್ರಮುಖ ಅಸ್ತ್ರ ವಾಗಿ ಬಳಸಿಕೊಳ್ಳುತ್ತಿದೆ. ಬೆಂಗಳೂರಿನಲ್ಲಿ ನಡೆಯುತ್ತಿರುವ ಏರ್‌ಶೋನಲ್ಲಿ ಭಾಗವಹಿಸಲು ರಫೇಲ್ ಯುದ್ಧ ವಿಮಾನ ಗಳು ಬಂದಿಳಿದಿವೆ. ಬೆಂಗಳೂರಿನಲ್ಲಿ ಈ ವೈಮಾನಿಕ ಪ್ರದರ್ಶನ ನಡೆಯುವ ಕುರಿತು ಕೆಲತಿಂಗಳ ಹಿಂದೆ ಅನುಮಾನ ವಿತ್ತು. ಉತ್ತರ ಪ್ರದೇಶಕ್ಕೆ ವರ್ಗಾಯಿಸುವ ಯೋಜನೆ ಇತ್ತು ಸರಕಾರಕ್ಕೆ. ಸ್ಥಳಾಂತರವಾಗದೇ ಉಳಿದದ್ದು ಬೆಂಗಳೂರಿಗರ ಪುಣ್ಯ. ಪ್ರದರ್ಶನದ ಪ್ರಾರಂಭದಲ್ಲೇ, ಹಿಂದಿನ ದಿನ ತಯಾರಿಯಲ್ಲಿ ತೊಡಗಿದ್ದಾಗಲೇ ಸೂರ್ಯಕಿರಣ ವಿಮಾನ ದುರಂತ ಸಂಭವಿಸಿದ್ದು ಶುಭ ಸೂಚನೆ ಎನಿಸಲಿಲ್ಲ. ಅಂತೂ ಹಗರಣಗಳ ನಡುವೆಯೇ ವೈಮಾನಿಕ ಪ್ರದರ್ಶನ ನಡೆಯುತ್ತಿದೆ.




✶ ✶ ✶

ಸಂಗೀತ ಕ್ಷೇತ್ರದಲ್ಲಿ ಹೆಸರು ಮಾಡಿರುವ ಭೂಪೇನ ಹಜಾರಿಕಾ ಅಸ್ಸಾಮಿನ ನಾಗರಿಕ ಮಸೂದೆಯನ್ನು ವಿರೋಧಿಸಿ ಈಚೆಗೆ ಮೋದಿ ಸರಕಾರ ನೀಡಿದ ಭಾರತರತ್ನ ಪ್ರಶಸ್ತಿಯನ್ನೂ ತಿರಸ್ಕರಿಸಿದ್ದರು. ಅಸ್ಸಾಮಿನ ಜನರ ಆಕ್ರೋಶ ಮತ್ತು ಹಿಂಸಾಚಾರ ಗಳಿಗೆ ಗುರಿಯಾಗಿದ್ದ, ಹೆಚ್ಚು ಕಡಿಮೆ ಅರ್ಧಕ್ಕರ್ಧದಷ್ಟು ನಾಗರಿಕರಿಗೆ ಪೌರತ್ವ ದೊರಕದಿದ್ದ ವಿವಾದಿತ ಮಸೂದೆ ಅದು. ೨೦೧೪ರ ಡಿಸೆಂಬರ್ ೩೧ಕ್ಕೆ ಹಿಂದೆ ವಲಸೆ ಬಂದಿದ್ದವರಿಗೆ ಪೌರತ್ವ ನೀಡಬಯಸಿದ್ದ ಈ ಮಸೂದೆ ೧೯೮೫ರ ಅಸ್ಸಾಮ್ ಒಪ್ಪಂದದ ಉಲ್ಲಂಘನೆಯಾಗಿದೆ ಎನ್ನುವುದು ನಾಗರಿಕರ ಪ್ರತಿಭಟನೆಗೆ ಕಾರಣ. ಬಹುವಿವಾದಿತ ಈ ಮಸೂದೆಯನ್ನು ವಿರೋಧ ಪಕ್ಷಗಳೂ ಆಕ್ಷೇಪಿಸಿದ್ದುವು. ಮೋದಿ ಸರಕಾರ ನಾಜೂಕಾಗಿ ಈ ಮಸೂದೆಯು ಕಾಲಮೀರಿ ರದ್ದಾಗುವಂತೆ ಮಾಡಿದೆ. ಹಾಗೆಯೇ ಮುಸ್ಲಿಮ್ ಸಮುದಾಯದ ಮಹಿಳೆಯರ ತ್ರಿವಳಿ ತಲಾಕ್ ಮಸೂದೆಯೂ ರದ್ದುಗೊಂಡಿದೆ. ಇದೂ ಕೂಡ ಸಾಕಷ್ಟು ವಿವಾದಕ್ಕೆಡೆಕೊಟ್ಟಿತ್ತು. ಮುಖ್ಯವಾಗಿ ತ್ರಿವಳಿ ತಲಾಕ್ ನೀಡಿದ ಗಂಡನಿಗೆ, ಅದನ್ನು ಶಿಕ್ಷಾರ್ಹ ಅಪರಾಧವೆಂದು ಪರಿಗಣಿಸಿ ಜೈಲು ಶಿಕ್ಷೆ ನೀಡುವುದು ಭಿನ್ನಾಭಿಪ್ರಾಯಗಳಿಗೆ ಕಾರಣವಾಗಿತ್ತು.

✶ ✶ ✶

ವಿಜಯವಾಡದಿಂದ ಪ್ರಕಟವಾಗುವ 'ಪ್ರಜಾಸಾಹಿತಿ' ಎಂಬ ತೆಲುಗು ಮಾಸ ಪತ್ರಿಕೆಯ ಮುಖಪುಟದ ವ್ಯಂಗ್ಯಚಿತ್ರವನ್ನು ಇಲ್ಲಿ ಮುದ್ರಿಸಿಕೊಳ್ಳಲಾಗಿದೆ. ವಿಜ್ಞಾನದ ಹೆಸರಿನಲ್ಲಿ ಕೆಲವು ಸ್ವಯಂಘೋಷಿತ ವಿಜ್ಞಾನಿಗಳು ಈಚಿನ ವರ್ಷಗಳಲ್ಲಿ ಪೂರ್ತಿ ಹಾಸ್ಯಾಸ್ಪದವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿರುವುದು ಎಷ್ಟು ಶೋಚನೀಯ ಎಂಬ ವಿಚಾರವನ್ನು ಅದು ವ್ಯಂಜಿಸುತ್ತದೆ. "ಪ್ರಜಾಸಾಹಿತಿ" ಪತ್ರಿಕೆಯು ಆ ಬಗ್ಗೆ ತನ್ನ ಫೆಬ್ರವರಿ ಸಂಚಿಕೆಯಲ್ಲಿ ಮೌಲಿಕವಾದ ಸಂಪಾದಕೀಯವನ್ನು ಬರೆದಿದೆ; 'ಹೊಸತು' ಪತ್ರಿಕೆಯು ಮೊದಲಿನಿಂದ ಅಂತಹುದೇ ಧೋರಣೆಯನ್ನು ತಾಳುತ್ತಾ ಬಂದಿದೆ. ಸಮಾಜವು ಸ್ಥಗಿತವಲ್ಲ, ಬದಲಾಗಿ ಅದು ಚಲನಶೀಲವಾದ್ದು. ಇಷ್ಟು ಸರಳ ಸತ್ಯವನ್ನು ಗಮನಿಸದಿದ್ದರೆ ವಿಜ್ಞಾನವು ತನ್ನ ಹೆಸರಿಗೆ ಅಪಚಾರ ಮಾಡಿದಂತೆಯೇ ಸರಿ. ಮಾನವ ಸಮಾಜದ ಚಲನಾಕ್ರಮದಲ್ಲಿ ಮೂವರು ನಿರ್ಮಾತೃಗಳಿರುತ್ತಾರೆ: ಶಾಸ್ತ್ರವೇತ್ತರು, ಕಲಾವಿದರು ಮತ್ತು ಶ್ರಮಿಕರು. ಹೊಸ ಸೃಷ್ಟಿಗೆ ಕಾರಣವಾಗುವಂತಹ ಚಿಂತನೆಯನ್ನು ಮಾಡುವುದು ಶಾಸ್ತ್ರವೇತ್ತರ ಕೆಲಸ. 'ನಾಗರಿಕತೆ'ಯ ಲಕ್ಷಣಗಳಲ್ಲಿ 'ಹೊಸ ಆವಿಷ್ಕಾರಗಳನ್ನು ಕುರಿತ ಚಿಂತನೆ'ಯು ಪ್ರಮುಖವಾದೊಂದು ಅಂಗ. ಅಂತಹ ಆಲೋಚನೆಗಳಿಗೆ ಆಕರ್ಷಣೀಯ ಸೃಜನಾತ್ಮಕ ರೂಪ ಕೊಡುವವನು ಕಲಾವಿದ. ಅದರ ಭೌತಿಕ ಆಚರಣೆಯನ್ನು ವಾಸ್ತವಗೊಳಿಸುವುದು ಶ್ರಮಿಕನ ಕೊಡುಗೆ. ಪ್ರಕೃತಿಯೊಡನೆ ಮಾನವನದು ಐಕ್ಯತೆ ಹಾಗೂ ಸಂಘರ್ಷದ ಹಾದಿ. ಬೌದ್ಧಿಕ ಮತ್ತು ದೈಹಿಕ ಶ್ರಮಗಳೆರಡೂ ಹೊಸ ಆವಿಷ್ಕಾರಗಳಿಗೆ ಮತ್ತು ಸಾಮಾಜಿಕ ವಿಕಾಸಕ್ಕೆ ಅಗತ್ಯ. ಇದರ ಪರಿವೆಯೇ ಇಲ್ಲದೆ ಶುಷ್ಕ ತೀರ್ಮಾನಗಳನ್ನು ಕೈಗೊಳ್ಳುವುದು ಮತ್ತು ಪ್ರಕಟಿಸುವುದು ವಿಜ್ಞಾನ ಎನಿಸಿಕೊಳ್ಳದು. ಇದೇ ಜನವರಿ ೩ರಿಂದ ೭ರವರೆಗೆ ಅಖಿಲ ಭಾರತ ವಿಜ್ಞಾನ ಸಮ್ಮೇಳನದ ೧೦೬ನೆಯ ಅಧಿವೇಶನವು ಜಲಂಧರ್‌ನಲ್ಲಿ ಜರುಗಿತು. ಅಧಿವೇಶನದ ಈ ವರ್ಷದ ಪ್ರಧಾನ ವಿಷಯ "ಭವಿಷ್ಯತ್ತಿನ ಭಾರತದಲ್ಲಿ ವಿಜ್ಞಾನ" ಎಂಬುದಾಗಿತ್ತು. ಅಂದರೆ, ನಮ್ಮ ದೇಶದ ಆರ್ಥಿಕ ಮತ್ತು ಸಾಮಾಜಿಕ ಅವಶ್ಯಕತೆಗಳಿಗೆ ಅನುಗುಣವಾಗಿ ಎಂತಹ ವೈಜ್ಞಾನಿಕ ಸಂಶೋಧನಾ ಪ್ರಕ್ರಿಯೆ ಮತ್ತು ಅಳವಡಿಕೆಗಳಿಗೆ ಗಮನಕೊಡಬೇಕೆಂದು ಚರ್ಚೆ ಮಾಡುವುದಿತ್ತು. ಅನೇಕ ಖ್ಯಾತ ಮತ್ತು ನೂತನ ವಿಜ್ಞಾನಿಗಳು ತಮ್ಮ ವಿಚಾರಗಳನ್ನು ಪ್ರಖರವಾಗಿ ಮಂಡಿಸಿದರು. ನಮ್ಮಲ್ಲಿ ಅಜ್ಜಿಯರು ಮಕ್ಕಳಿಗೆ 'ದೃಷ್ಟಿ ನೀವಾಳಿಸುವುದು' ಎಂದು ಪೊರಕೆಕಡ್ಡಿಗಳನ್ನು ಸುಟ್ಟು ಮುಖದ ಮೇಲೆ ಬೂದಿ ಹಚ್ಚುತ್ತಿದ್ದುದುಂಟು. ಅಂತಹ ಕೆಲಸವನ್ನು ಮಾಡುತ್ತಿರುವಂತೆ ವಿಜ್ಞಾನ ಸಮ್ಮೇಳನದಲ್ಲಿ ವಿಜ್ಞಾನವನ್ನೇ ಪೊರಕೆಕಡ್ಡಿಗಳಂತೆ ಸುಟ್ಟು ಅದರ ಬೂದಿಯನ್ನು ತಮ್ಮ ನೊಸಲಿನಲ್ಲಿ ಧರಿಸಿಬಿಟ್ಟರು! ಬೇರೆ ವಿಜ್ಞಾನಿಗಳ ವಿಷಯ ಮಂಡನೆಯ ದೃಷ್ಟಿಯನ್ನು ಸುಟ್ಟುಹಾಕುವುದರ ಪ್ರತೀಕ ಇದಾಯಿತು. ಇದನ್ನು ಮಾಡಿದವರು ಆಂಧ್ರ ವಿಶ್ವವಿದ್ಯಾನಿಲಯದ ಉಪಕುಲಪತಿ ಜಿ. ನಾಗೇಶ್ವರರಾವ್; ಅವರ ಸ್ಥಾನಕ್ಕೆ ತಾವು ತೀರಾ ಅನರ್ಹರೆಂಬುದನ್ನು ಅವರು ಸಾಬೀತುಪಡಿಸಿದ್ದಾರೆ. ಈ ಮಹಾವಿಜ್ಞಾನಿಯ ಪ್ರಕಾರ ರಾವಣನ ಬಳಿ ೨೪ ವಿಧದ ವಿಮಾನಗಳಿದ್ದವು, ವಿಮಾನ ನೆಲೆಗಳಿದ್ದವು. (ಅವುಗಳ ಇಂಧನವೇನಾಗಿತ್ತೆಂದು ಇವರು ತಿಳಿಸಲಿಲ್ಲ). ಕೌರವರು ನೂರು ಮಂದಿಯಾಗಲು ಮೂಲಕಣಗಳ ವೈದ್ಯಕೀಯ ಪ್ರಯೋಗವಿದ್ದಿತಂತೆ; ಅದು 'ಟೆಸ್ಟ್ ಟ್ಯೂಬ್ ಬೇಬಿ'ಗಳ ಆವಿಷ್ಕಾರ! ಇಂತಹ ಹತ್ತಾರು ಪ್ರತಿಪಾದನೆಗಳನ್ನು ವಿಜ್ಞಾನ ಸಮ್ಮೇಳನದಲ್ಲಿ ಮಂಡಿಸಲಾಯಿತೆಂದು ನಂಬುವುದು ಕಷ್ಟ, ಆದರೆ ನಡೆದಿದ್ದು ನಿಜ. ಆರು ನೊಬೆಲ್ ಪ್ರಶಸ್ತಿ ವಿಜೇತರ ಸಮ್ಮುಖದಲ್ಲಿ ಈ ಘನಂದಾರಿ ಸಂಶೋಧನೆಯನ್ನು ಮಂಡಿಸಲಾಯಿತು! ಕಾಲ್ಪನಿಕ ಸಾಹಿತ್ಯದ ಭಾಗಗಳನ್ನು ವೈಜ್ಞಾನಿಕ ಸಂಗತಿಗಳೆಂದು ಹೇಳುವ ಎದೆಗಾರಿಕೆ ಪ್ರಶಂಸನೀಯವೇ ಇರಬಹುದು, ಆದರೆ ಅದು ವಿಜ್ಞಾನಕ್ಕೆ ಅವರು ಎಸಗಿದ ಕ್ರೂರ ಅಪಚಾರ. ಆದ್ದರಿಂದಲೇ ಐನ್‌ಸ್ಟೈನರ $E=Mc^2$ ಎಂಬುದು ಇ=ಓಂಸಿ$^2$ ಆಗಿಬಿಟ್ಟಿದೆ. ಹಸುವಿನ ಗಂಜಳವು ಕ್ಯಾನ್ಸರ್‌ಗೆ ಪರಮೌಷಧಿ ಎನ್ನುವ ವಿಜ್ಞಾನವೀರರು ಅಮೆರಿಕಾಕ್ಕೆ ಹೋಗಿ ಚಿಕಿತ್ಸೆ ಪಡೆಯುತ್ತಾರೆಯೇ ವಿನಾ ಗಂಜಳದ ರಾಸಾಯನಿಕ ಸಾಮರ್ಥ್ಯದ ಬಗೆಗಿನ ಸಂಶೋಧನೆಯನ್ನು ಆಯೋಜಿಸುವುದಿಲ್ಲ. ಇದು ಅಸಹ್ಯಕರವಾದ ನೈಜಜ್ಞಾನ ವಿರೋಧಿ ಮನಸ್ಸಿನ ಭೂತಾಕಾರ. ಇದನ್ನು ಜನಸಮುದಾಯವು ಸಹಿಸಬೇಕೆ ಅಥವಾ ಖಂಡಿಸಬೇಕೆ? ವಿಜ್ಞಾನವು ಸಾಮಾಜಿಕ ಚೈತನ್ಯವಾಗಬೇಕು, ಭೌತಿಕ ಶಕ್ತಿಯಾಗಬೇಕು. ವಿಜ್ಞಾನದ ಅಧಿವೇಶನಗಳ ದಿಕ್ಕು ಇದಾಗಬೇಕೇ ಹೊರತು ನಾಗೇಶ್ವರರಾವ್ ಮೂಢಪುರಾಣವಾಗಕೂಡದು. ●




ನವಕರ್ನಾಟಕ ಪ್ರಕಾಶನದ 'ಹೊಸತು' ಪತ್ರಿಕೆಗೆ ಅದರದೇ ಆದ ಘನತೆ ಇದೆ. ವೈಚಾರಿಕ ಕೃತಿಗಳನ್ನು ಹಾಗೂ ಸಮಾಜಮುಖಿ ಚಿಂತನೆಗಳನ್ನು ಪ್ರಚುರ ಪಡಿಸುವ ನವಕರ್ನಾಟಕವು ಈ ನಾಡಿನ ಅಗ್ರಮಾನ್ಯ ಕೊಡುಗೆ. ನಾನು ಇದೇ ಮೊದಲ ಬಾರಿಗೆ ಇಂಥ ದೊಡ್ಡ ಪತ್ರಿಕೆಗೆ ಕವಿತೆಯನ್ನು ಕಳಿಸಿರುವೆ. ಬಹುಶಃ ತಮ್ಮ ಪ್ರಕಾಶನದಿಂದ ಗೌರವಧನವನ್ನು ಕೊಡುತ್ತೀರೆನಿಸುತ್ತದೆ. ಆದರೆ ನಾನು ವೈಯಕ್ತಿಕವಾಗಿ ಹಣದ ರೂಪದ ಗೌರವ ಸಂಭಾವನೆ ಬದಲಾಗಿ ತಮ್ಮ ಪ್ರಕಾಶನ ಕೃತಿಗಳನ್ನು ನಿರೀಕ್ಷಿಸುತ್ತೇನೆ. ನನ್ನ ಹೊತ್ತಿಗೆಗಳ ಸಂಚಯದಲ್ಲಿ ಈಗಾಗಲೇ ಸಾಕಷ್ಟು ಕೃತಿಗಳಿವೆ. ತಮ್ಮ ಪ್ರಕಾಶನದ ಕೃತಿಗಳ ಸಂಖ್ಯೆಯೂ ವಿಪುಲವಾಗಿದೆ. ಈಗಾಗಲೇ ನಾನು ಕೊಂಡು ಓದಿರುವ ಕೃತಿಯನ್ನು ತಾವು ಮತ್ತೊಮ್ಮೆ ಕಳುಹಿಸಿದರೂ ತೊಂದರೆ ಏನಿಲ್ಲ. ಗೆಳೆಯ/ಗೆಳತಿಯರಿಗೆ, ಸೋದರ ಸೋದರಿಯರಿಗೆ, ನನ್ನ ವಿದ್ಯಾರ್ಥಿಗಳಿಗೆ ಹಾಗೂ ನನ್ನ ಸಂಪರ್ಕಕ್ಕೆ ಬರುವ ಉತ್ತಮ ಓದುಗರಿಗೆ ಕೃತಿಯನ್ನು ಉಡುಗೊರೆಯಾಗಿ ಕೊಟ್ಟು ಪುಸ್ತಕ ಸಂಸ್ಕೃತಿಯನ್ನು ಬೆಳೆಸಲು ಅವಕಾಶ ಮಾಡಿಕೊಳ್ಳುವೆ. ತಾವು ನನ್ನ ಈ ಆಶಯಕ್ಕೆ ಸಮ್ಮತಿಸುತ್ತೀರೆಂಬ ಭರವಸೆಯಿಂದ ವಿನಂತಿಸಿಕೊಳ್ಳುತ್ತಿರುವೆ.

ವಿಜಯಪುರ **ದಾಕ್ಷಾಯಿಣಿ ವೀ ಹುಡೇದ**

ಅಹಿಂಸೆ ಎಂಬ ಆಯುಧವನ್ನು ಹಿಡಿದು ಶಬ್ದವಿಲ್ಲದ ಯುದ್ಧದ ಮೂಲಕ ಜಯ ಸಾಧಿಸಿದ ರಾಷ್ಟ್ರಪಿತನಿಗೆ ಕೆಲವು ದಿನಗಳ (ಜ.೩೦) ಹಿಂದೆ ಹಿಂದೂ ಮಹಾಸಭಾದ ಮುಖ್ಯಸ್ಥೆಯೊಬ್ಬಳು ಮಹಾತ್ಮನ ಪ್ರತಿಕೃತಿಗೆ ಗುಂಡು ಹಾರಿಸಿ ಗೊಡ್ಸೆ ಪ್ರತಿಗೆ ಹೂಗುಚ್ಛ ನೀಡಿ ಸಿಹಿ ಹಂಚಿರುವುದನ್ನು ನೋಡಿ ನನಗೆ ಕಳವಳವಾಯಿತು. ಭಾರತವನ್ನು ಒಂದು ಸೆಕ್ಯುಲರ್ (ಜಾತ್ಯತೀತ) ರಾಷ್ಟ್ರವನ್ನಾಗಿ ಮಾಡಲು ಹಂಬಲಿಸಿದ ವಿಚಾರವಾದಿಗೆ, ನಮ್ಮ ನಾಡಿನ ಎಷ್ಟೋ ಮಂದಿಗೆ ತೊಡಲು ಬಟ್ಟೆ ಇಲ್ಲವೆಂಬ ಕಾರಣಕ್ಕೆ ತಾನು ಅರೆಬರೆ ಫಕೀರನಾಗಲು ನಿಂತ ಜೀವನಿಗೆ, ಜಗತ್ತಿಗೆ ಶಾಂತಿದೂತನಾದ ಬುದ್ಧನಂಥವನಿಗೆ, ತನ್ನದೆ ಧರ್ಮದ ಜನರಿಂದ ಹತ್ಯೆಯಾದ ಏಸುವಿನಂಥ ಗಾಂಧಿಗೆ ಆ ಮಹಿಳೆ ಮಾಡಿದ ಅಗೌರವ ಭಾರತೀಯರೆಲ್ಲಾ ತಲೆ ತಗ್ಗಿಸುವಂತಹ ಹೀನಕಾರ್ಯವಾಗಿದೆ. ಇಂದಿನ ಸಂಘ ಸಂಸ್ಥೆಗಳು ಕೇವಲ ರಾಮಮಂದಿರ ನಿರ್ಮಾಣದಿಂದ ರಾಷ್ಟ್ರಕಟ್ಟಲು ರಥಯಾತ್ರೆಗಳನ್ನು ನಡೆಸುತ್ತಿದ್ದಾರೆ. ಆದರೆ ಗಾಂಧಿ ಬಯಸಿದ್ದು ಭಾರತೀಯರೆದೆಯಲ್ಲಿ ರಾಮರಾಜ್ಯ, ಗ್ರಾಮರಾಜ್ಯವನ್ನ. ದುರದೃಷ್ಟವೆಂದರೆ ಇಂದು ಮಹಾತ್ಮರ ವಿಚಾರಗಳನ್ನು ಕೇವಲ ಜಯಂತಿಯ ದಿನದಂದು ಭಾಷಣ ಬಿಗಿದು ನಂತರ ಅವರ ಸಂದೇಶಗಳನ್ನು, ಆದರ್ಶಗಳನ್ನು ಸರ್ಕಾರಿ ಕಛೇರಿ ಗೋಡೆಗಳಿಗೆ ಮೊಳೆ ಹೊಡೆದು ಸಿಲುಬೆಗೇರಿಸಿ 'ಭಕ್ತಿ ಎಂಬುದು ತೋರೆಂಬ ಲಾಭ' ಎಂಬಂತೆ ಕೆಲವು ಮತಾಂಧರು ಪ್ರಚಾರ ರಾಯಭಾರಿಗಳಂತೆ ಮಹಾತ್ಮರ ಹೆಸರನ್ನು ತಮಗೆ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಿದ್ದಾರೆ. ಸ್ವಚ್ಛ ಭಾರತವೆಂಬುದು ಕೇವಲ ದೇಶದ ಬಾಹ್ಯ ಸ್ವಚ್ಛತೆಯಲ್ಲ, ಅದು ಮೊದಲು ಜನರ ದೇಹದ ಅಂತರಾಳದಲ್ಲಿರುವ ಕೊಳಕು ಮನಸ್ಸನ್ನು ತೊಡೆದಾಗ ಮಾತ್ರ ದೇಶ ಸುಂದರವಾಗಿ ಬೆಳೆಯಲು ಹಾಗೂ ಅಮಾಯಕ ಜನರು ಶುದ್ಧ ಗಾಳಿಯಲ್ಲಿ ಉಸಿರಾಡಲು ಸಾಧ್ಯ. ಆದರೆ ಇಂದು ಗಾಂಧೀ ಕ್ಲಾಸ್, ಗಾಂಧೀ ಲೆಕ್ಕ, ಮಹಾತ್ಮ ಗಾಂಧಿ ರಸ್ತೆ (ಮೋಜು, ಮಸ್ತಿಗೆ ಹೆಸರಾದ ರಸ್ತೆ) ಎಂದು ಗಾಂಧಿ ನಾಮವನ್ನು ವ್ಯಂಗ್ಯಾರ್ಥವಾಗಿ ರೂಪಾಂತರಗೊಳಿಸುತ್ತಿರುವುದನ್ನು ಕಂಡ ಆ ದಶರಥ ಕುಮಾರನು ಸಹ ಹೇ ರಾಮ್...! ಎಂದು ಹೇಳುವಂತಾಗಿದೆ.

ಮಂಡ್ಯ **ಪ್ರದೀಪ ಆರ್. ಎನ್.**




## ನಮನಗಳು

ವ್ಯಂಗ್ಯಚಿತ್ರಕಾರರಾದ ಅರುಣ್ ನಂದಗಿರಿ ಅವರ ಬಗ್ಗೆ ಫೆಬ್ರವರಿ ೨೦೧೯ರ ಸಂಚಿಕೆಯಲ್ಲಿ 'ಅಂಗವೈಕಲ್ಯತೆಗೆ ಅಂಜದ ಅರುಣ್' ಎಂಬ ಲೇಖನ ಪ್ರಕಟವಾಗಿತ್ತು. ಅನಾರೋಗ್ಯದ ಕಾರಣದಿಂದ ಅರುಣ್ ನಂದಗಿರಿ ಅವರು ನಮ್ಮನ್ನು ಅಗಲಿದ್ದಾರೆ ಎಂದು ತಿಳಿದುಬಂದಿದೆ. ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ'ದ ಅಂತಿಮ ನಮನಗಳು.

'ಷ' ಬದಲು 'ಶ' ಬಳಸಿರುವ, 'ೞ' ಮತ್ತು 'ಱ' ಬಳಸದಿರುವ ಕುರಿತು.

'ಹೊಸತು' ಮಾಸಿಕದ ಫೆಬ್ರವರಿ ೨೦೧೯ರ ಸಂಚಿಕೆಯಲ್ಲಿ ಶ್ರೀ. ಮಲ್ಲಿಕಾರ್ಜುನ ಮೇಟಿಯವರು ತಮ್ಮ "ಗುಣವಿರದ ಕವಿತೆ ಸಿಂಹಾಸನದಿ ಮೆರೆಯುತಿದೆ" ಪ್ರೌಢ ಲೇಖನದಲ್ಲಿ ಇಂಗ್ಲಿಷ್ ಭಾಷೆ ಮತ್ತು ಮಾಧ್ಯಮದ ಕುರಿತು ಬೇರೆ ಬೇರೆ ಆಯಾಮಗಳಿಂದ ಚರ್ಚಿಸಿದ್ದಾರೆ. ಈ ಲೇಖನ ಸಾಕಷ್ಟು ಹೊಸ ಹೊಳಹುಗಳನ್ನು ನೀಡುತ್ತದೆ. ಆದರೆ ಲೇಖನದಲ್ಲಿ ಬಳಕೆಯಾಗಿರುವ ಕೆಲವು ಪದ ಪ್ರಯೋಗಗಳು ನನ್ನನ್ನು ಚಿಂತನೆಗೆ ಹಚ್ಚಿವೆ. ಆ ವಿಶೇಷ ಪದ ಪ್ರಯೋಗಗಳೆಂದರೆ – 'ಷ' ಸ್ಥಾನದಲ್ಲಿ 'ಶ' ಬಳಸಿರುವುದು, ಅರ್ಕಾವತ್ತು (ೞ) ಮತ್ತು ವಟ್ರಸುಳಿ (ಱ) ಬಳಸದಿರುವುದು. ನಾವು ಮೊದಲಿನಿಂದ ಕಲಿತು ಬಳಸುತ್ತಿರುವ ಹಾಗೂ ಎಲ್ಲ ಕಡೆ ಪ್ರಯೋಗವಾಗುತ್ತಿರುವ ಪದಗಳು ಈ ಲೇಖನದಲ್ಲಿ ಮಾತ್ರ ಬೇರೆ ರೂಪದಲ್ಲಿ ಪ್ರಯೋಗವಾಗಿರುವುದನ್ನು ನೋಡಿದರೆ ತಪ್ಪು ಯಾರಲ್ಲಿದೆ? ಎಂದು ಯೋಚಿಸುವಂತಾಗುತ್ತದೆ. ಹಾಗಾಗಿ ನನ್ನ ಪ್ರಶ್ನೆ ಏನೆಂದರೆ – ಇಲ್ಲಿಯವರೆಗೆ ನಾವು ಬಳಸುತ್ತ ಬಂದಿರುವ 'ಷ', 'ೞ' ಮತ್ತು 'ಱ' ಇವುಗಳನ್ನು ನಿವಾರಿಸಿಕೊಂಡು, ಕನ್ನಡ ಭಾಷೆಯನ್ನು ಸರಳೀಕರಿಸಿಕೊಂಡು ಹೋಗುವ ಸಾಧ್ಯತೆಯ ಬಗ್ಗೆ ಯೋಚಿಸಲಾಗಿದೆಯೇ? ಅಥವಾ ಬೇರೇನಾದರು ವ್ಯಾಕರಣ ವಿಶೇಷತೆ ಇದೆಯೇ? ಸಂಬಂಧಿಸಿದವರು ತಿಳಿಸಿದರೆ ಆ ಕುರಿತು ನನ್ನ ಮನಸ್ಸಿನಲ್ಲಿ ಎದ್ದಿರುವ ಗೊಂದಲ, ಅನುಮಾನ ನಿವಾರಣೆಯಾಗುತ್ತದೆ.

ಬೆಂಗಳೂರು **ಸಿ. ಚಿಕ್ಕತಿಮ್ಮಯ್ಯ, ಹಂದನಕೆರೆ**

# 'ಸಾರ್ವಜನಿಕ ಹಿಂಸೆ' ಸಾರ್ವತ್ರಿಕ ಸಂಸ್ಕೃತಿಯಾಗದಿರಲಿ



ದೇಶದ ಪ್ರಮುಖ ಚಿಂತಕರು ಸೇರಿದಂತೆ ನಾಡಿನ ಗಣ್ಯರು, ಸಾಹಿತ್ಯಾಸಕ್ತರು ತುಂಬಿದ ಧಾರವಾಡದ ಸಾಹಿತ್ಯ ಸಂಭ್ರಮದ ವೇದಿಕೆಯ ಮೇಲೆ ಯುವಕರ ಗುಂಪು ನಡೆಸಿದ ದಾಳಿಯ ಕುರಿತು ಕನ್ನಡದ ವಿದ್ವತ್ ವಲಯದಿಂದ ಪರ/ವಿರೋಧ ಅಭಿಪ್ರಾಯಗಳು ಮಂಡಿತವಾಗುತ್ತಿವೆ. ಕೆಲವರು ಆ ಹುಡುಗರ ವರ್ತನೆ ತಪ್ಪು ಎನ್ನುತ್ತಿದ್ದರೆ, ಕೆಲವರು ಶಿವ ವಿಶ್ವನಾಥನ್ ಹಾಗೆ ಮಾತನಾಡಬಾರದಿತ್ತು ಎಂಬ ಧೋರಣೆಯಲ್ಲಿ ಪ್ರತಿಕ್ರಿಯಿಸುತ್ತಿದ್ದಾರೆ. ಜಗತ್ತಿನಲ್ಲಿ ಘಟಿಸುವ ಎಲ್ಲಾ ಸಂಗತಿಗಳನ್ನು ಕಪ್ಪು-ಬಿಳುಪು, ಒಳಿತು-ಕೆಡುಕು, ಸರಿ-ತಪ್ಪು, ನ್ಯಾಯ-ಅನ್ಯಾಯ ಎಂಬ ಎರಡು ಬಗೆಯಲ್ಲಿ ಮಾತ್ರವೇ ವಿವರಿಸಿಕೊಳ್ಳುವ, ವಿಶ್ಲೇಷಿಸುವ ಆಧುನಿಕ ಜಗತ್ತಿನ ತಾರ್ಕಿಕತೆ ಧಾರವಾಡದಲ್ಲಿ ನಡೆದ ದಾಳಿಯ ಕುರಿತಾದ ಚರ್ಚೆಯಲ್ಲಿಯೂ ಕಾಣುತ್ತಿದೆ.

ಹಿಂಸಾತ್ಮಕ ಮನೋಧರ್ಮ ಎಂಬುದು ಇಂದು ನಾವು ಬಳಸುವ ಪದವಷ್ಟೆ ಆಗಿ ಉಳಿಯದೇ ನಮ್ಮ ಕಾಲದಲ್ಲಿ ರೂಪುಗೊಳ್ಳುತ್ತಿರುವ ಸಾಮಾಜಿಕತೆಯ ಸೂಚಕ ಪರಿಭಾಷೆಯಾಗಿ ಬದಲಾಗಿದೆ ಎಂಬ ಸಂಗತಿಯ ಹಿನ್ನೆಲೆಯಲ್ಲಿ ನೋಡಿದರೆ ಇಂದು ಆ ಹುಡುಗರ ದಾಳಿ ನೈತಿಕವಾಗಿ ಮತ್ತು ಕಾನೂನಾತ್ಮಕವಾಗಿ ಸರಿಯೋ, ತಪ್ಪೋ ಎಂಬ ಪ್ರಶ್ನೆಗಳು ಮಾತ್ರ ಮುಖ್ಯವಾಗುವುದಿಲ್ಲ ! ಅದರಾಚೆಗೂ ನಾವು ಯೋಚಿಸಬೇಕಿದೆ. ಏಕೆಂದರೆ ಇದು ಧಾರವಾಡಕ್ಕೆ ಸೀಮಿತವಾದ ಘಟನೆಯಲ್ಲ. ಇಂದು ದೇಶದ ಬಹುತೇಕ ಕಡೆ ೨೫-೩೦ ವರ್ಷ ವಯಸ್ಸಿನ ಹುಡುಗರು ಧರ್ಮದ ಹೆಸರಿನಲ್ಲಿ, ದೇಶಭಕ್ತಿಯ ಹೆಸರಿನಲ್ಲಿ, ಜಾತಿಯ ಹೆಸರಿನಲ್ಲಿ, ಆಹಾರದ ಹೆಸರಿನಲ್ಲಿ, ಸಿದ್ಧಾಂತಗಳ ಹೆಸರಿನಲ್ಲಿ ನಡೆಸುತ್ತಿರುವ ಈ ಮಾದರಿಯ ಭಯರಹಿತ ಸಾರ್ವಜನಿಕ ದಾಳಿ, ಅದು ಸೃಷ್ಟಿಸುತ್ತಿರುವ ಹಿಂಸೆಯನ್ನು ಅರ್ಥಮಾಡಿಕೊಳ್ಳುವ ಬಗೆ ಯಾವುದು? ಎಂಬ ಪ್ರಶ್ನೆ ನಮ್ಮನ್ನು ಕಾಡಬೇಕಿದೆ.

ವಾಸ್ತವದಲ್ಲಿ ಸಾಹಿತ್ಯ ಚರ್ಚೆ ಮನುಷ್ಯನಲ್ಲಿ ತನ್ನ ಸಮಾಜ ತಲುಪಿದ ದುಸ್ಥಿತಿಯ ಕುರಿತು, ಇಲ್ಲಿ ಸೃಷ್ಟಿಯಾಗಿರುವ ಅಸಮಾನತೆಗಳ ಕುರಿತು ಪಾಪಪ್ರಜ್ಞೆಯನ್ನು ಹುಟ್ಟಿಸಿ ಆತನನ್ನು ಹೆಚ್ಚು ಸಮಾಜಮುಖಿಯಾಗಿ ಯೋಚಿಸುವಂತೆ ಪ್ರೇರೇಪಿಸಬೇಕು, ಆದರೆ ಬದಲಾದ ಕಾಲದಲ್ಲಿ ಆಳುವವರ ಮರ್ಜಿಗೆ ಅಥವಾ ಆಳುವ ಶಕ್ತಿಗಳನ್ನು ಸಮರ್ಥಿಸುವ ನಿಟ್ಟಿನ ಸಂಕುಚಿತ ಸಾಹಿತ್ಯಿಕ ಚರ್ಚೆಗಳು ಹಿಂಸೆ, ದ್ವೇಷದ ಪ್ರಜ್ಞೆಯನ್ನು ಯುವಕರಲ್ಲಿ ತುಂಬುತ್ತಿವೆ. ಅದರ ಪರಿಣಾಮವೇ ಈ ಮಾದರಿಯ ನಿರ್ಭಿಡೆಯ ದಾಳಿಗಳು...!

ಇದು ನಿಜಕ್ಕೂ ಅಪಾಯಕಾರಿಯಾದ ಬೆಳವಣಿಗೆ. ಬ್ರಿಯಾನ್ ಈಸ್ಲೇ ಬರೆದಿರುವ "ಫಾದರಿಂಗ್ ಆಫ್ ಅನ್ ಥಿಂಕಬಲ್" ಪುಸ್ತಕದಲ್ಲಿ ಈ ಮಾದರಿಯ ಹಿಂಸೆ ಪ್ರಬಲವಾದ ಗಂಡುಲಕ್ಷಣಗಳಿಂದ ಕೂಡಿರುವ ಮನೋರೋಗ ಎಂದು ಗುರುತಿಸುತ್ತಾರೆ. ಪುರುಷಾಧಿಪತ್ಯ ಮೌಲ್ಯವನ್ನು ಹೊಂದಿರುವ ಸಮಾಜಗಳು ಗಂಡು ಮಕ್ಕಳಲ್ಲಿ ತುಂಬಿರುವ ಅನೈಸರ್ಗಿಕ ಮನೋವಿಕಾರಗಳ ಕಾರಣಕ್ಕೆ ಅವರುಗಳು ಇಂತಹ ಕೃತ್ಯಗಳಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುವ ಸ್ಥಿತಿಗೆ ತಲುಪುತ್ತಾರೆ. ತಮ್ಮ ಹಿಂಸಾತ್ಮಕ ಧೋರಣೆಯನ್ನು ಸಮರ್ಥಿಸಲು ರಾಷ್ಟ್ರೀಯತೆ, ಧರ್ಮ ಇತ್ಯಾದಿ ಇತ್ಯಾದಿ ಅಂಶಗಳನ್ನು ಬಳಸಿಕೊಳ್ಳುತ್ತಾರೆ ಎಂಬ ಅಂಶವನ್ನು ದಾಖಲಿಸುತ್ತಾರೆ. ಈ ಕುರಿತು ಹೆಚ್ಚು ವ್ಯಾಪಕವಾಗಿ ಚರ್ಚಿಸಿರುವ ಪ್ರಮುಖ ರಾಜಕೀಯ ಶಾಸ್ತ್ರಜ್ಞೆ ಹಾನಾ ಆರೆಂಟ್ ೧೯೬೩ರಲ್ಲಿ ಬರೆದ "ಐಕ್ ಮನ್ ಇನ್ ಜೆರುಸಲೇಮ್" ಎಂಬ ಪ್ರಬಂಧದಲ್ಲಿ ಈ ಮಾದರಿಯ ಹಿಂಸಾತ್ಮಕ ಮನೋಭೂಮಿಕೆಯ ಮತ್ತೊಂದು ಗುಣ ಅದು ನಿಧಾನವಾಗಿ ಪ್ರಜಾತಾಂತ್ರಿಕವಲ್ಲದ ರಾಜಕೀಯ ವಲಯವೊಂದನ್ನು ಸೃಷ್ಟಿಸಿಕೊಂಡು ಈ ಜಾಡ್ಯವನ್ನು ಸಾರ್ವಜನಿಕ ಪ್ರಜ್ಞೆಯಾಗಿ ರೂಪಿಸಲು ಪ್ರಯತ್ನಿಸುತ್ತದೆ.

ಈ ವ್ಯವಸ್ಥೆ ಜನರೆಲ್ಲರೂ ಸದಾ ಒಂದಲ್ಲ ಒಂದು (ಧರ್ಮ, ಯುದ್ಧ, ಅತ್ಯಾಚಾರ ಇತ್ಯಾದಿ ಇತ್ಯಾದಿ) ಭಯದಿಂದ ಬದುಕುವ ಒತ್ತಡವನ್ನು ನಿರ್ಮಿಸುತ್ತದೆ. ಅಂತಹ ಸ್ಥಿತಿಯಲ್ಲಿ ಮೇಲ್ನೋಟಕ್ಕೆ ಜನರು ಮುಖ್ಯವಾಗಿ ಯುವಕರು ಸಹಜ ಬದುಕನ್ನು ರೂಢಿಸಿಕೊಂಡಂತೆ ಕಂಡರೂ, ಅವರ ಮನಸ್ಸಿನ ಆಳದಲ್ಲಿ ಬದುಕಿನ ಅಭದ್ರತೆ ಕಾಡುತ್ತಿರುತ್ತದೆ. ತನ್ನ ಇಡೀ ಸಮಾಜವೇ ಸಮೂಹಹತ್ಯೆಗೆ ಒಳಗಾಗುವ ಆತಂಕ ಅವರ ಮನಸ್ಸಿನಲ್ಲಿ ಉಳಿದಿರುತ್ತದೆ. ಇಂತಹ ಸ್ಥಿತಿಯಲ್ಲಿ ಸ್ವತಃ ಹಿಂಸೆಯು ಅಪಾಯಕಾರಿಯಲ್ಲದ ವೇಷ ಧರಿಸಿ ಮಾಧ್ಯಮಗಳ ಮೂಲಕ ಸಾರ್ವಜನಿಕ ಒಪ್ಪಿಗೆಯನ್ನು ಉತ್ಪಾದಿಸಿಕೊಳ್ಳುವ ಜೊತೆಗೆ ಆಡಳಿತದ ನೀತಿಗಳ ಭಾಗವಾಗಿಯೇ ಕಾಣಿಸಿಕೊಳ್ಳುತ್ತದೆ ಎಂಬ ಸಂಗತಿಯನ್ನು ಆರೆಂಟ್ ನಮ್ಮ ಮುಂದಿಡುತ್ತಾರೆ.

ಸುಮ್ಮನೆ ನಮ್ಮ ಸುತ್ತಲಿನ ಘಟನೆಗಳನ್ನು ವಿಶ್ಲೇಷಿಸಿ ನೋಡಿದರೆ ನಮ್ಮ ನಡುವೆ ಮತೀಯ ಹಿಂಸೆಯ ಸಮರ್ಥನೆಯಲ್ಲಿ ತೊಡಗಿರುವ ಮುಖ್ಯವಾಗಿ ಕರ್ನಾಟಕದ ಕಲ್ಬುರ್ಗಿ, ಗೌರಿ ಹತ್ಯೆಯ ಆರೋಪ ಹೊತ್ತಿರುವ, ಸಾಮಾಜಿಕ ಜಾಲತಾಣಗಳಲ್ಲಿ ಕೊಲ್ಲುತ್ತೇನೆ, ಅತ್ಯಾಚಾರ ಮಾಡುತ್ತೇವೆ ಎಂದು ಬಡಬಡಿಸುವ, ಬೀದಿಗಳಲ್ಲಿ ಜಾತಿ ಮತ್ತು ಧರ್ಮದ ಕಾರಣಕ್ಕೆ ಗುದ್ದಾಡುವ, ಧಾರವಾಡದ ಸಾಹಿತ್ಯ ಚರ್ಚೆಯ ವೇದಿಕೆಗೆ ನುಗ್ಗಿ ದೊಂಬಿಮಾಡುವ ಯುವಕರಿಗೂ ಸಹಜವಾದ ಬದುಕು, ಕುಟುಂಬ ಎಲ್ಲವೂ ಇವೆ...! ಹಾಗಿದ್ದಾಗಿಯೂ ಅವರು ಈ ಕೃತ್ಯಗಳನ್ನು ನಡೆಸಿದ್ದಾರೆ, ನಡೆಸುತ್ತಿದ್ದಾರೆ ಮತ್ತು ಬೇರೆ ಬೇರೆ ಹಂತಗಳಲ್ಲಿ ಸಮರ್ಥಿಸಿಕೊಳ್ಳುತ್ತಿದ್ದಾರೆ. ಇದಕ್ಕೆ ಕಾರಣ ಆನಾ ಆರೆಂಟ್ ಗುರುತಿಸಿದಂತೆ ನಮ್ಮ ಜನಾಂಗವೇ ಸಮೂಹ ಹತ್ಯೆಗೆ ಒಳಗಾಗುತ್ತದೆ ಎಂಬ ಕಲ್ಪಿತ ಭಯ ಮತ್ತು ಅವರ ಭಯಕ್ಕೆ ನೀರೆರೆಯುವ ಮತೀಯ ರಾಜಕಾರಣ ಎಂಬುದನ್ನು ನಾವು ಗುರುತಿಸಿ ಯುವಕರಿಗೆ ತಿಳಿಹೇಳಬೇಕಿದೆ.

ಜಗತ್ತಿನ ಮಹಾಯುದ್ಧಗಳು ಸೃಷ್ಟಿಸಿದ ಹಿಂಸೆ ಮತ್ತು ಅದರ ಪರಿಣಾಮಗಳ ಕುರಿತು ಪ್ರಕಟವಾಗಿರುವ ನೂರಾರು ಪುಸ್ತಕಗಳನ್ನು ಧರ್ಮ, ರಾಷ್ಟ್ರೀಯತೆಯ ಹೆಸರಿನ "ಸಾರ್ವಜನಿಕ ಹಿಂಸೆಯನ್ನು" ಸ್ಪಷ್ಟವಾಗಿ ಗಂಡುಧೋರಣೆಯನ್ನು ಹೊಂದಿದ ಮನೋರೋಗ ಎಂದು ಗುರುತಿಸಿವೆ. ಆ ಕಾರಣಕ್ಕೆ ನಾವು ಧಾರವಾಡದ ವೇದಿಕೆಯ ಮೇಲೆ ನಡೆದ ದಾಳಿಯನ್ನು ಯಾವುದೋ ಪಕ್ಷ, ಸಿದ್ಧಾಂತ, ನಂಬಿಕೆಗಳ ಕಾರಣಕ್ಕೆ ನಡೆದ ದಾಳಿ ಎಂಬ ಅರ್ಥದಲ್ಲೊ ಅಥವಾ ಸರಿ-ತಪ್ಪು ಎಂಬ ಶುಷ್ಕ ವಿಂಗಡಣೆಯಾಗಿ ಮಾತ್ರ ವಿಶ್ಲೇಷಿಸದೆ ನಮ್ಮ ಯುವ ತಲೆಮಾರು ಚಲಿಸುತ್ತಿರುವ ಹಿಂಸಾತ್ಮಕ ಸಾಮಾಜಿಕತೆ ಮತ್ತು ಅದನ್ನು ಪ್ರಜಾತಂತ್ರದ ಹೆಸರಿನಲ್ಲಿ ಪೋಷಿಸುತ್ತಿರುವ ಮತೀಯ ರಾಜಕೀಯದ ಭಾಗವಾಗಿಯೂ ನೋಡಬೇಕಿದೆ. ಇಲ್ಲವಾದರೆ ಮುಂಬರುವ ದಿನಗಳಲ್ಲಿ ಸಾಮರಸ್ಯದ ಈ ನೆಲದಲ್ಲಿ "ಸಾರ್ವಜನಿಕ ಹಿಂಸೆ" ಸಾರ್ವತ್ರಿಕ ಸಂಸ್ಕೃತಿಯಾಗಿಬಿಡುವ ಅಪಾಯವಿದೆ.

ಈ ಹಿನ್ನೆಲೆಯಲ್ಲಿ ನಾಡಿನ ಪ್ರಭುತ್ವ ಪಕ್ಷ ರಾಜಕೀಯದ ಆಚೆ ನಾವು ಒಪ್ಪಿರುವ ಸಾಂವಿಧಾನಿಕ ಮೌಲ್ಯಗಳನ್ನೂ, ಈ ನೆಲದ ಸೌಹಾರ್ದ ಪರಂಪರೆಯನ್ನೂ, ನಮ್ಮ ಮಣ್ಣು ರೂಢಿಸಿಕೊಂಡ ಸಾಮುದಾಯಿಕ ಬದುಕಿನ ಮಹತ್ವವನ್ನು ಸಾರುವ ಚರ್ಚೆಗಳ ಕುರಿತು ಔಪಚಾರಿಕ ಮತ್ತು ಅನೌಪಚಾರಿಕ ಪಠ್ಯಗಳನ್ನು ರೂಪಿಸಿ ಯುವಜನರಿಗೆ ತಲುಪಿಸುವ ಕೆಲಸವನ್ನು ಪರಿಣಾಮಕಾರಿಯಾಗಿ ಮಾಡಬೇಕಿದೆ. ಈ ಕ್ರಮ ಸಮಾಜದಲ್ಲಿ ಹೆಚ್ಚುತ್ತಿರುವ ಸಾರ್ವಜನಿಕ ಹಿಂಸಾತ್ಮಕ ಧೋರಣೆ ಮತ್ತು ಅಸಹಿಷ್ಣುತೆಯನ್ನು ಎದುರಿಸುವ ಮಹತ್ವದ ದಾರಿಯಾಗಲಿದೆ ಅನ್ನಿಸುತ್ತಿದೆ.

**ಡಾ|| ಕಿರಣ್ ಎಂ. ಗಾಜನೂರು,** ರಾಜ್ಯಶಾಸ್ತ್ರ ವಿಭಾಗ, ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯ




# ಮನುಸ್ಮೃತಿಯ ಪರಿಚಯ – ೩

**ಗೃಹಸ್ಥಾಶ್ರಮವನ್ನು ಪ್ರವೇಶ ಮಾಡಿದ ವ್ಯಕ್ತಿಯು ಸಮುದಾಯದ ಬೇರೆಲ್ಲರಿಗೂ ಆಧಾರವಾಗುತ್ತಾನಾದ್ದರಿಂದ ಅವನ ನಡವಳಿಕೆಯು ನಿಗದಿತವಾಗಿರಬೇಕು, ಉತ್ತಮ ಮಟ್ಟದ್ದಾಗಿರಬೇಕು. ಸ್ನಾತಕ, ಗುರು, ಅಳಿಯ, ಮುಂತಾದವರು ಅತಿಥಿಗಳಾಗಿ ಬಂದಾಗ ಅವರಿಗೆ ಮಧುಪರ್ಕ ನೀಡಿ ಸ್ವಾಗತಿಸಬೇಕು. ಆ ಮಧುಪರ್ಕದಲ್ಲಿ ಮಾಂಸದ ಭಾಗವೂ ಇರುತ್ತದೆ. ಶ್ರಾದ್ಧಾದಿ ಕರ್ಮಗಳು ನಡೆಯುವಾಗಲೂ ಮಾಂಸದೂಟ ಅನಿವಾರ್ಯ. ಸ್ನೇಹಿತರಿಗೆ ಶ್ರಾದ್ಧದೂಟದ ಭಾಗ್ಯವಿಲ್ಲ; ನಾಸ್ತಿಕರಿಗಂತೂ ದೇವ-ಪಿತೃಕರ್ಮಗಳಲ್ಲಿ ಭೋಜನ ಮಾಡಿಸಬಾರದು. ಅಷ್ಟೇ ಅಲ್ಲ, ಯಾವ ಒಕ್ಕಣ್ಣಿನವರನ್ನೂ ಅದಕ್ಕೆ ಆಹ್ವಾನಿಸಬಾರದು. ಇಂತಹ ಹತ್ತಾರು ವಿಧಿಗಳನ್ನು ಮನುವು ಉತ್ಕೃಷ್ಟವೆಂದು ದಾಖಲಿಸಿದ್ದಾನೆ (೩.೧೧೯ ಇತ್ಯಾದಿ).**

**ಮೂ**ರನೆಯ ಅಧ್ಯಾಯದಲ್ಲಿ ಎಂಟು ವಿಧವಾದ ವಿವಾಹಗಳನ್ನು ಮನು ಪ್ರಸ್ತಾಪಿಸಿದ್ದಾನೆ (೩.೨೧ ಇತ್ಯಾದಿ). ಅವನ್ನು ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚವೆಂದು ವಿಂಗಡಿಸಲಾಗಿದೆ. ಅವುಗಳಲ್ಲಿ ಮೊದಲ ಆರು ಬ್ರಾಹ್ಮಣನಿಗೆ, ಕಡೆಯ ನಾಲ್ಕು ಕ್ಷತ್ರಿಯನಿಗೆ ಲಭ್ಯ. ವೈಶ್ಯ ಮತ್ತು ಶೂದ್ರರಿಗೆ ಆಸುರ, ಗಾಂಧರ್ವ ಮತ್ತು ಪೈಶಾಚ ವಿಧಗಳು ಮಾತ್ರ ಲಭ್ಯ. ಅಂದರೆ, ರಾಕ್ಷಸ ವಿಧದ್ದು ಕ್ಷತ್ರಿಯರಿಗೆ ಮಾತ್ರ ಲಭ್ಯವೆಂದಾಯಿತು. ಈ ಎಂಟು ವಿಧಗಳ ಲಕ್ಷಣಗಳನ್ನು ಮನುವು ವಿಸ್ತಾರವಾಗಿ ಹೇಳಿದ್ದಾನೆ (೩.೨೭ ಇತ್ಯಾದಿ). ನಂತರ ಸಂಭೋಗವು ಯಾವಾಗ ಸರಿ ಮತ್ತು ಯಾವಾಗ ಕೂಡದು ಎಂಬ ಪ್ರಸ್ತಾಪವಿದೆ (೩.೪೫ ಇತ್ಯಾದಿ). ಮೌಢ್ಯದ ಸುಳಿವು ಈ ವಿವರಗಳಲಿ ಹೇರಳವಾಗಿದೆ. ಯಾವ ದಿನ ಸಂಭೋಗವೆಂಬುದನ್ನು ಅನುಸರಿಸಿ ಗಂಡು ಅಥವಾ ಹೆಣ್ಣು ಮಗು ಜನಿಸುತ್ತದಂತೆ. ಪತ್ನಿಯ ಋತು ಸಮಯದ ನಂತರದ ಮೊದಲ ನಾಲ್ಕು ದಿನ, ಹಾಗೂ ಹನ್ನೊಂದು ಮತ್ತು ಹದಿಮೂರನೆಯ ದಿನಗಳು ಸಂಭೋಗಕ್ಕೆ ಯೋಗ್ಯವಲ್ಲವೆಂದು ಹೇಳುವ ಮನು (೩.೪೭) ಅದಕ್ಕೆ ಯಾವ ಕಾರಣವನ್ನೂ ಗುರುತಿಸಿಲ್ಲ. ಈ ಆರು ದಿನಗಳನ್ನು ಬಿಟ್ಟು ಉಳಿದ ದಿನಗಳಲ್ಲಿ ಯಾವ ದಿನ ಸಮಾಗಮವೆಂಬುದು ಗಂಡು ಇಲ್ಲವೇ ಹೆಣ್ಣು ಮಗು ಜನಿಸಲು ಕಾರಣವಾಗುತ್ತದೆ. (೩.೪೮). ಸಂಭೋಗಕ್ಕೆ ಅನರ್ಹವೆಂದು ಹೇಳಿದ ಆರು ರಾತ್ರಿಗಳನ್ನು ಬಿಟ್ಟು ಮನುವು ಹೇಳುವ ಎರಡು ರಾತ್ರಿಗಳಲ್ಲಿ ಮಾತ್ರ ಸ್ತ್ರೀ ಸಂಪರ್ಕ ಮಾಡಿದರೆ ಗೃಹಸ್ಥನನ್ನು ಬ್ರಹ್ಮಚಾರಿಯೆಂದೇ ಭಾವಿಸಲಾಗುತ್ತದಂತೆ (೩.೫೦). ಇಂತಹ ಯಾವ ಪ್ರತಿಪಾದನೆಗೂ ಅನುಭವಜನ್ಯ ಕಾರಣಗಳಿರಲು ಸಾಧ್ಯವಿಲ್ಲವೆಂಬುದು ಖಚಿತ.

ವಧುವಿನ ತಂದೆಯು ಯೋಗ್ಯನಾದರೆ ವಿವಾಹದಲ್ಲಿ ಕನ್ಯಾಶುಲ್ಕ ಪಡೆಯುವುದಿಲ್ಲ (೩.೫೧). ವರನ ತಂದೆ ಪಡೆದರೆ ಅವನು ಅಯೋಗ್ಯನೆಂದೇನೂ ಹೇಳಿಲ್ಲ! ಕನ್ಯೆಗಂತೂ ಶುಲ್ಕವಿಲ್ಲ, ಆದರೆ ಪ್ರೀತಿಪೂರ್ವಕವಾಗಿ ಏನಾದರೂ ದ್ರವ್ಯವನ್ನು ಅವರಿಗೆ ಕೊಟ್ಟರೆ ಅದು ವಿಕ್ರಯವೆನಿಸಿಕೊಳ್ಳುವುದಿಲ್ಲ (೩.೫೪).

**ಜಿ. ರಾಮಕೃಷ್ಣ**

ಇದನ್ನಿಷ್ಟು ದೀರ್ಘವಾಗಿ ಪ್ರಸ್ತಾಪಿಸಲು ಒಂದು ಕಾರಣವಿದೆ. ಮನುವು ಮಹಿಳೆಗೆ ಅಪಾರ ಉನ್ನತಸ್ಥಾನ ಕಲ್ಪಿಸಿಕೊಟ್ಟಿದ್ದಾನೆಂದು ಶ್ಲಾಘಿಸಲು "ನಾರಿಯರು ಎಲ್ಲಿ ಗೌರವಾನ್ವಿತರಾಗುತ್ತಾರೋ ಅಲ್ಲಿ ದೇವತೆಗಳು ಸಂತೋಷಿಸುತ್ತಾರೆ" (೩.೫೬ : ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ) ಎಂಬ ಮಾತನ್ನು ಭಾವುಕರಾಗಿ ಉದ್ಧರಿಸುವ 'ವಿದ್ವಾಂಸರು' ನಮ್ಮಲ್ಲಿದ್ದಾರೆ. ನಿಜಕ್ಕೂ ಆ ಮಾತು ನಾರಿಯ ಸಾಮಾಜಿಕ ಗೌರವದ ಸಂದರ್ಭದಲ್ಲಿ ಹೇಳಿದ್ದೇ ಅಲ್ಲ. ಶುಭವನ್ನು ಬಯಸುವ ತಂದೆ–ತಾಯಿ, ಸೋದರ, ಇತ್ಯಾದಿಗಳು ಮದುವೆಯ ಸಂದರ್ಭದಲ್ಲಿ ವಧುವಿಗೆ ಗೌರವ–ಸನ್ಮಾನಗಳನ್ನು ನೀಡುತ್ತಾರೆ (೩.೫೫). ಹೀಗೆ ಸ್ತ್ರೀಯರಿಗೆ ಎಲ್ಲಿ ಸನ್ಮಾನಗಳು ದೊರೆಯುತ್ತವೆಯೋ ಅಲ್ಲಿ ದೇವತೆಗಳು ಪ್ರಸನ್ನರಾಗುತ್ತಾರೆ (೩.೫೬). ಇದನ್ನು ಸ್ತ್ರೀಯರಿಗೆ ಸಾಮಾಜಿಕ ಸ್ಥಾನಮಾನ ನೀಡುವ ಉತ್ಕೃಷ್ಟ ಸಂಪ್ರದಾಯವೆಂಬಂತೆ ವ್ಯಾಖ್ಯಾನಿಸುವುದು ತೀರಾ ಅಸಂಬದ್ಧ. ಮದುವೆಯಾಗಿ ಬರುವ ಸೊಸೆಗೆ ಸನ್ಮಾನವು ಉಚಿತವೆಂದಷ್ಟೇ ಮನು ಹೇಳುತ್ತಿರುವುದು. ಮುಂದಿನ ಶ್ಲೋಕದಲ್ಲಿ (೩.೫೭) ಸೊಸೆಯು

ಮಾವನ ಮನೆಯಲ್ಲಿ ದುಃಖಿತಪ್ತಳಾದರೆ ಅಂಥವನ ಕುಲವು ನಾಶವಾಗುತ್ತದೆ, ಅವಳು ಹರ್ಷಚಿತ್ತಳಾಗಿ ಉಳಿಯುವಂತಿದ್ದರೆ ವಂಶವು ಏಳಿಗೆ ಹೊಂದುತ್ತದೆ ಎಂದು ಹೇಳಿರುವುದು ಹೆಚ್ಚು ಪ್ರಸ್ತುತ (ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ಕುಲಂ। ನ ಶೋಚಂತಿ ತು ಯತ್ರೈತಾ ವರ್ಧತೇ ತದ್ಧಿ ಸರ್ವದಾ॥). ಅಂದರೆ, ಅವಳಿಗೆ ಕಿರುಕುಳ, ಹಿಂಸೆ, ಅಪಮಾನ, ಇವೆಲ್ಲಾ ಯೋಗ್ಯವಲ್ಲವೆಂದರ್ಥ. ವರದಕ್ಷಿಣೆ ಸಾಕಷ್ಟು ತರಲಿಲ್ಲವೆಂಬ ಕಾರಣಕ್ಕೆ ಹೆಣ್ಣುಮಗಳನ್ನು ಕೊಲ್ಲಬೇಡಿರೆಂದು ಮಾವನ ಕುಟುಂಬದವರಿಗೆ ಇದೊಂದು ಸದುಪದೇಶ. ಅದನ್ನು ಪಾಲಿಸಲು ಆಗ್ರಹಿಸದೆ ಮನು ಹೇಳಿಲ್ಲದ ಸ್ತ್ರೀಯ ಸಾಮಾಜಿಕ ಗೌರವಸ್ಥಾನದ ಬಗ್ಗೆ ಪ್ರಶಂಸೆ ನೀಡುವುದು ಶುದ್ಧ ಕುಚೋದ್ಯವೇ ಸರಿ.

ಉಳಿದಂತೆ, ಮುಂದಿನ ಹಲವು ಶ್ಲೋಕಗಳಲ್ಲಿ ಗೃಹಸ್ಥ ಬ್ರಾಹ್ಮಣನ ಕರ್ಮಗಳನ್ನು ಹೇಳಲಾಗಿದೆ: ಅವನು ಪಂಚ ಮಹಾಯಜ್ಞ (ವೇದೋಪದೇಶ, ಬ್ರಹ್ಮಯಜ್ಞ, ಪಿತೃಯಜ್ಞ, ದೈವಯಜ್ಞ ಮತ್ತು ಭೂತಯಜ್ಞ) ಮಾಡುತ್ತಿರಬೇಕು, ಅತಿಥಿ ಸತ್ಕಾರ ಮಾಡಬೇಕು, ಇತ್ಯಾದಿ. ದೈವಯಜ್ಞವೆಂದರೆ ಹೋಮಾದಿಗಳು. ಭಗವದ್ಗೀತೆಯಲ್ಲಿ ಯಜ್ಞದಿಂದ ಮಳೆ, ಮತ್ತು ಮಳೆಯಿಂದ ಬೆಳೆ ಆಗುತ್ತವೆಂದು ಹೇಳಲಾಗಿದೆ (೩.೧೪ : ... ಪರ್ಜನ್ಯಾದನ್ನಸಂಭವಃ / ಯಜ್ಞಾದ್ಭವತಿ ಪರ್ಜನ್ಯಃ...). ಎರಡನೆಯದು ಪರಮ ಸತ್ಯ, ಆದರೆ ಮೊದಲನೆಯದಕ್ಕೆ ಯಾವ ಪುರಾವೆಯೂ ಇಲ್ಲ. ಗೀತಾಚಾರ್ಯನು ತನಗಿಂತಲೂ ಮುಂಚಿನ ಮನುವಿನ ಉಕ್ತಿಯನ್ನು ಎತ್ತಿಹಾಕಿಕೊಂಡಿದ್ದಾನೆ. ಮನುವಿನ ಪ್ರಕಾರ ಯಜ್ಞದಲ್ಲಿ ಅಗ್ನಿಮುಖೇನ ನೀಡಲಾಗುವ ಆಹುತಿಯು ಆದಿತ್ಯನನ್ನು ಸೇರಿಕೊಳ್ಳುತ್ತದೆ ಮತ್ತು ಆದಿತ್ಯನಿಂದಾಗಿ ಮಳೆಯಾಗುತ್ತದೆ (೩.೭೬) ಹಾಗೂ ಮಳೆಯಿಂದ ಬೆಳೆಯಾಗುತ್ತದೆ.

ಗೃಹಸ್ಥನ ನಡವಳಿಕೆಯನ್ನು ಹೇಳುವಾಗ ಮಧುಪರ್ಕದ ಪ್ರಸ್ತಾಪ ಬರುತ್ತದೆ (೩.೧೧೯). ರಾಜ, ಋತ್ವಿಕ್, ಸ್ನಾತಕ, ಗುರು, ಅಳಿಯ, ಮಾವ ಮತ್ತು ಸೋದರಮಾವ ಅತಿಥಿಗಳಾಗಿ ಬಂದಾಗ ಅವರನ್ನು ಮಧುಪರ್ಕ ನೀಡಿ ಸ್ವಾಗತಿಸಬೇಕು. ಮಧುಪರ್ಕದ ಐದು ಸಾಮಗ್ರಿಗಳಲ್ಲಿ ಮಾಂಸವು ಅನಿವಾರ್ಯ ಎಂದು ಶಾಸ್ತ್ರಗ್ರಂಥಗಳ ಆಧಾರದ ಮೇಲೆ ಭಾರತರತ್ನ ಪಿ. ವಿ. ಕಾಣೆಯವರು ತಮ್ಮ 'ಧರ್ಮಶಾಸ್ತ್ರದ ಇತಿಹಾಸ' ಎಂಬ ಗ್ರಂಥದಲ್ಲಿ ತೋರಿಸಿ ಕೊಟ್ಟಿದ್ದಾರೆ. ಶ್ರಾದ್ಧದೂಟದಲ್ಲೂ ಅದು ಅನಿವಾರ್ಯ (೩.೧೨೩ : ...ತಚ್ಚ ಆಮಿಷೇಣ ಕರ್ತವ್ಯಂ...; 'ಆಮಿಷ'ವೆಂದರೆ ಮಾಂಸ).

ಮುಂದುವರಿದು ಹೇಳುತ್ತಾ ಮನುವು ನಿಯೋಗದ ಸೂತ್ರವನ್ನು ಮಂಡಿಸುತ್ತಾನೆ: ಮೃತನಾದ ಅಣ್ಣನ ಪತ್ನಿಯಲ್ಲಿ ಧರ್ಮದ ಪ್ರಕಾರ ಕೇವಲ ಸಂತತಿಗಾಗಿ ಸಂಸರ್ಗ ಹೊಂದುವುದಕ್ಕೆ 'ನಿಯೋಗ'ವೆಂಬ ಹೆಸರಿದೆ; ಕೇವಲ ಕಾಮಾತುರನಾಗಿ ಸಂಭೋಗ ಮಾಡುವುದು ಯೋಗ್ಯವಲ್ಲ. ಹಾಗೆ ಮಾಡಿದವನನ್ನು 'ದಿಧಿಷೂ ಪತಿ' ಎನ್ನಲಾಗುತ್ತದೆ (೩.೧೭೩). ಮದುವೆಯಾದ ಮಹಿಳೆಯು ಗಂಡನಲ್ಲದವನಿಂದ ಮಕ್ಕಳನ್ನು ಪಡೆದರೆ ಅಂತಹ ಮಕ್ಕಳನ್ನು 'ಕುಂಡ' ಎಂದೂ, ವಿಧವೆಯಾದನಂತರ ಪಡೆದ ಮಕ್ಕಳನ್ನು 'ಗೋಲಕ'ರೆಂದೂ ಕರೆಯಲಾಗಿದೆ (೩.೧೭೪).







ನೈತಿಕಾನೈತಿಕತೆಯ ಹಗ್ಗವ ದೇಹಕೆ ಬಿಗಿದು
ಮಡಿಹುಡಿಯ ಗಂಧವ ಬಟ್ಟೆಗಂಟಿಸಿ
ಶುದ್ಧಾಶುದ್ಧತೆಯ ಭಾರವ ಹೇರಿ
ಮನವ ತುಂಬಿದರು
ಧರ್ಮ ಸಂಕಟ
ಮನವೊಂದು ನಂಬಿಕೆಗಳ ಗುಡಾಣ

ತನುವೊಂದು ತುಂಬು ಬಿಂದಿಗೆ
ಪವಿತ್ರವೇ ಆಗಿರಬೇಕು ಪೂಜೆಗೆ
ಮುಕ್ಕಾಗುವಂತಿಲ್ಲ
ಮುಟ್ಟುವಂತೆಯು ಇಲ್ಲ ಹಾಳ್ಗೀಗೆ

ಅಬ್ಬಾ! ಭೀಕರ ಮಾನಸಿಕ ಸಂಕೋಲಿ
'ಮುಟ್ಟಾಟ'ದಲಿ 'ಆಕೆ' ಎಂದೂ ಔಟೇ..

ದೇವರು ಮಾತನಾಡಿದನೆ!
ಮೈಲಿಗೆಯಲ್ಲದ ನೈವೇದ್ಯವೆಂದು
ನಾಲಿಗೆ ಹಚ್ಚಿ ರುಚಿಸಿದನೆ
ದೇವರು ಕುರುಡನೆ
ವ್ರತತಪಜಪದಿ ಮಾಡಿ ತಂದ
ಮೀಸಲು ತುಪ್ಪವ ಗುಟುಕರಿಸಿಲ್ಲ

ಅಯ್ಯಯ್ಯಪ್ಪ! ದೇವಾ ಕಿವುಡನೆ
ತಪ್ಪೇ ಮಾಡದೆ ಪಟ್ಟ ಪಾಡನೂ ಕೇಳನು
ಶಾಂತಂ ಪಾಪಂ..ಕುರುಡನಲ್ಲನಾತ

ರೆಪ್ಪೆಗಳನೆಂದೂ ಕೂಡಿಸುವುದೇ ಇಲ್ಲನಾತ
ಪ್ರವಾಹಕೆ ಕೊಚ್ಚಿಹೋದವರ ಕೈ ಹಿಡಿಯಲೂ ಇಲ್ಲಾ

ಮುನಿಸಿಕೊಂಡಿರುವನೆ
ನಮ್ಮದಲ್ಲದ ನಮ್ಮ ಮೈಲಿಗೆಗೆ
ಅವನ ಧ್ಯಾನದಿ ರಕ್ತ ಹರಿದರೂ
ಅಲುಗಾಡಲೊಲ್ಲ
ಹೃದಯ ತೆರೆದು ಬರಸೆಳೆಯಲೊಲ್ಲ

ಮುಟ್ಟು ಮುಟ್ಟೆಂದು ಗುಟ್ಟಾಗಿ
ಗುಣುಗುವವರ ಹೊಟ್ಟೆಯಿಂದಲೇ
ಹುಟ್ಟಿಲ್ಲವೆ ನಾವು-ನೀವು-ಅವರು
ಆದರವನು!?

**ಪರಿಮಳ ಜಿ. ಕಮಟರ್**
ರಿಸರ್ಚ್ ಸ್ಕಾಲರ್ (ಪಿಎಚ್.ಡಿ.), ಇಂಗ್ಲಿಷ್ ವಿಭಾಗ
ಭಾಷಾಶಾಸ್ತ್ರ / ಮಾನವಶಾಸ್ತ್ರ ಶಾಲೆ, ಕರ್ನಾಟಕ ಕೇಂದ್ರೀಯ ವಿದ್ಯಾಲಯ, ಕಲಬುರಗಿ – ೫೮೫ ೩೬೭

ಅವರ ತಪ್ಪೇನೂ ಇಲ್ಲದಿದ್ದರೂ ಈ ಮಕ್ಕಳು ಇಹ ಮತ್ತು ಪರದಲ್ಲಿ ಅನರ್ಹರಾಗಿಯೇ ಉಳಿಯುತ್ತಾರಂತೆ (೩.೧೭೫). ಮುಂದೆ ಪಿತೃಗಳ ಯಾದಿ ಮತ್ತು ಶ್ರಾದ್ಧಕ್ಕೆ ಯೋಗ್ಯ ಸ್ಥಾನ ಮುಂತಾದವನ್ನು ನೀಡಲಾಗಿದೆ. ಮನುವಿಗೆ ಎಂತೆಂತಹ ಬೀಭತ್ಸ ಕಲ್ಪನೆಗಳು ಸಾಧ್ಯವೆಂಬುದಕ್ಕೆ ಒಂದು ಉದಾಹರಣೆ : (ಅ) ಶ್ರಾದ್ಧ ಭೋಜನದ ನಂತರ ಉಳಿದ ಅನ್ನವನ್ನು ಶೂದ್ರನಿಗೆ ಕೊಟ್ಟರೆ ಅಂಥವನು ಕಾಲಸೂತ್ರವೆಂಬ ನರಕದಲ್ಲಿ ತಲೆಕೆಳಗಾಗಿ ನಿಲ್ಲುತ್ತಾನೆ; (ಆ) ಶ್ರಾದ್ಧ ಭೋಜನ ಮಾಡಿದ ಬ್ರಾಹ್ಮಣನು ಅಂದು ಸ್ತ್ರೀಸಂಗ ಮಾಡಿದರೆ ಅವನ ಪಿತೃಗಳು ಒಂದು ತಿಂಗಳವರೆಗೆ ಆ ಸ್ತ್ರೀಯ ಮಲದಲ್ಲಿ ಬಿದ್ದಿರುತ್ತಾರೆ (೩.೨೪೯-೨೫೦). ಇದು ನಮ್ಮ ದೇಶದ ಸಂವಿಧಾನವಾಗಬೇಕಂತೆ!

ಮೂರನೆಯ ಅಧ್ಯಾಯದ ಕೊನೆಯ ಭಾಗದಲ್ಲಿ ಮಾಂಸವನ್ನು ಕುರಿತ ಹಲವು ಮಾತುಗಳಿವೆ: (ಅ) ನೀವಾರವೆಂಬ ಧಾನ್ಯ, ಹಾಲು, ಸೋಮರಸ, ಮಾಂಸ, ಸೈಂಧವ ಲವಣ, ಉಪ್ಪು, ಇವು ಹವಿಸ್ಸುಗಳು (೩.೨೫೭); (ಆ) ಯಾವ ಮಾಂಸದಿಂದ ಪಿತೃಗಳು ಎಷ್ಟು ಕಾಲ ತೃಪ್ತಿ ಹೊಂದಿರುತ್ತಾರೆಂದರೆ ಮೀನಿನ ಮಾಂಸದಿಂದ ಎರಡು ತಿಂಗಳು, ಜಿಂಕೆ = ಮೂರು ತಿಂಗಳು, ಕುರಿ = ನಾಲ್ಕು, ಪಕ್ಷಿ = ಐದು, ಆಡು = ಆರು, ಚಿತ್ರಮೃಗ = ಏಳು, ಕೃಷ್ಣ ಮೃಗ = ಎಂಟು, ಸಾರಂಗ = ಒಂಭತ್ತು, ಕಾಡುಹಂದಿ - ಕಾಡುಕೋಣ = ಹತ್ತು, ಮೊಲ - ಆಮೆ = ಹನ್ನೊಂದು, ಖಡ್ಗಮೃಗ = ೧೨ ವರ್ಷ! ಮಾಂಸವನ್ನು ತಿನ್ನುವ ಅಭ್ಯಾಸ ತಪ್ಪಿಹೋದಾಗ ಮಾಷವನ್ನು ತಿನ್ನಲಾರಂಭಿಸಿದ್ದಾರೆಂದು ತೋರುತ್ತದೆ; ಆದ್ದರಿಂದ ಈಗ ಮಾಂಸದ ಬದಲು ಮಾಷ (ಉದ್ದಿನಬೇಳೆ)ದ ವಡೆ ಜಾರಿಗೆ ಬಂದಿದೆ. ಆದರೆ ಮನು ಬಹಳ ಮುಕ್ತವಾದಿ: ಪಶುಯಾಗ ಮಾಡದೆ ಮಾಂಸ ತಿನ್ನಬಾರದು, ಎನ್ನುತ್ತಾನವನು (೪.೨೭).

ಮನುಸ್ಮೃತಿಯ ನಾಲ್ಕನೆಯ ಅಧ್ಯಾಯವು ಬ್ರಾಹ್ಮಣನ ಜೀವನೋಪಾಯ, ಆಚಾರ ಮತ್ತು ವಿಚಾರಗಳಿಗೆ ಸಂಬಂಧಿಸಿದ್ದು. ತನ್ನ ಸಂಸಾರಕ್ಕೆ ಬೇಕಾಗುವಷ್ಟನ್ನು ಲೇಶಮಾತ್ರವೂ ಕ್ಲೇಶವಿಲ್ಲದೆ, ಅಂದರೆ ಶಾರೀರಿಕ ಶ್ರಮವಿಲ್ಲದೆ, ಅರ್ಜಿಸಬೇಕು (೪.೩ : ...ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಂ). ದಾನ-ದಕ್ಷಿಣೆಗಳನ್ನು ಯಥಾಶಕ್ತಿ ಪಡೆಯುತ್ತಿರುವುದು ಆಯಾಸವಿಲ್ಲದ ಶ್ರಮ ಅವನದು. ಇದೇ ಅವನ ತಥಾಕಥಿತ 'ಒಳ್ಳೆಯ' ರೀತಿಯ ದ್ರವ್ಯಾರ್ಜನೆ (೪.೧೨). ಅವನು ನೃತ್ಯ, ಗಾಯನ, ನಟನೆ, ಇವೇ ಮೊದಲಾದ ಕಲೆಗಳಿಂದ, ವೇದ ವಿರುದ್ಧವಾದ ಕರ್ಮಗಳಿಂದ, ಹಣ ಗಳಿಸಬಾರದು; ಪತಿತರಿಂದ ಮತ್ತು ಕೀಳುಜನರಿಂದ ಎಂತಹ ಕಷ್ಟವಿದ್ದರೂ ಹಣ ಬೇಡಬಾರದು (೪.೧೫). ಒಂದರ್ಥದಲ್ಲಿ ಇದು ಯಜ್ಞ ವಿಧಿಯ ಒಂದು ಸೂತ್ರವನ್ನು ತಲೆಕೆಳಗು ಮಾಡಿದೆ. ಕೆಲವು ಯಜ್ಞಗಳಲ್ಲಿ ವಿವಿಧ ಪುರೋಹಿತರು ಬೇರೆ ಬೇರೆ ಪಾತ್ರಧಾರಿಗಳಂತೆ ಸಂಭಾಷಣೆಗಳಲ್ಲಿ ತೊಡಗುವುದಿದೆ. ಅದನ್ನು ಸಂಸ್ಕೃತ ನಾಟಕದ ಆದಿಮೂಲವೆಂದು ಪರಿಗಣಿಸಲಾಗಿದೆ, ಆದರೆ ಮನುವು ನಟನೆಯನ್ನು ನಿಷೇಧಿಸಿಬಿಟ್ಟಿದ್ದಾನೆ. ಇದೇ ಅಧ್ಯಾಯದ ಬೇರೊಂದು ಸಂದರ್ಭದಲ್ಲಿ ಅವನೆನ್ನುತ್ತಾನೆ: "ಹಿಂದೆಂದೋ ಮಾನ್ಯವಾಗಿದ್ದ ಧರ್ಮವನ್ನು ಎರಡು ಕಾರಣಗಳಿಗಾಗಿ ತ್ಯಜಿಸಬಹುದು; ಅಸುಖ ಉಂಟುಮಾಡಿದ್ದರೆ ಇಲ್ಲವೇ ಜನರಿಗೆ ಬಾಧೆ ಉಂಟುಮಾಡುವಂತಿದ್ದರೆ" (೪.೧೭೬ : ... ಅಸ್ವರ್ಗ್ಯಂ ಲೋಕವಿದ್ವಿಷ್ಟಂ ಧರ್ಮಮಪಿ ಆಚರೇನ್ನ ತು). ನಟನೆಯನ್ನು ಇದರಡಿ ತರುವುದು ಔಚಿತ್ಯಪೂರ್ಣವೆ?

"ಸಚ್ಚಾರಿತ್ರ್ಯ" ಉಳ್ಳ ಬ್ರಾಹ್ಮಣನು ಧರ್ಮಶಾಸ್ತ್ರಕಾರ ಮನುವಿನ ಆದೇಶವನ್ನು ಪಾಲಿಸುವುದಾದರೆ ಅವನು "ವೇದವಿರೋಧಿಗಳಾದ ಪಾಷಂಡಿಗಳನ್ನು, ಶಾಸ್ತ್ರ ವಿರೋಧಿ ಕರ್ಮಗಳನ್ನು ಎಸಗುವವರನ್ನು, ಡಾಂಭಿಕವಾಗಿ ವ್ರತಾಚರಣೆ ಮಾಡುವವರನ್ನು, ಮೋಸಗಾರರನ್ನು ಹಾಗೂ ಎಲ್ಲಕ್ಕಿಂತಲೂ ಮುಖ್ಯವಾಗಿ ತಾರ್ಕಿಕ ವಿಚಾರವಂತರನ್ನು ಎಂದೆಂದೂ ಗೌರವಿಸಬಾರದು, ಮಾತನಾಡಿಸಬಾರದು" (೪.೩೦: ಪಾಷಂಡಿನೋ ವಿಕರ್ಮಸ್ಥಾನ್ ಬೈಡಾಲವ್ರತಿಕಾನ್ ಶಠಾನ್। ಹೈತುಕಾನ್ ಬಕವೃತ್ತೀಂಶ್ಚ ವಾಙ್ಮಾತ್ರೇಣಾಪಿ ನಾರ್ಚಯೇತ್॥). ಹೈತುಕರೆಂದರೆ ಎಲ್ಲದಕ್ಕೂ ಕಾರಣ ಗಳನ್ನು ಅರಸುವ ವಿಚಾರವಂತರು. ಅವರನ್ನು ನೆನೆಸಿದರೆ ಮನುವಿಗೆ ಮಾನಸಿಕ ಮೈಲಿಗೆಯಾಗಿ ಬಿಡುತ್ತದೆ! ನಮ್ಮ ದೇಶದ ತತ್ತ್ವಶಾಸ್ತ್ರ ಪರಂಪರೆಯಲ್ಲಿ ಶಂಕರನೂ ಸೇರಿದಂತೆ ಹಲವರು ಮನುವಿನ ಈ ಆದೇಶವನ್ನು ಪಾಲಿಸುವಂತಹ "ಬೈಡಾಲ ತತ್ತ್ವಶಾಸ್ತ್ರಜ್ಞರು." ಬೈಡಾಲ ಎಂದರೆ ಬೆಕ್ಕಿನಂತೆ ಕಣ್ಣುಮುಚ್ಚಿ ಹಾಲು ಕುಡಿಯುವಂತಹ ಖೋಟಾ ತತ್ತ್ವಜ್ಞಾನಿಗಳು.



ಜನಸಮುದಾಯದ ಬಹುಭಾಗವನ್ನು ಸ್ವಚ್ಛ ಮನಸ್ಸಿನಿಂದ ಕಾಣಲು ಹೇಸುವ ಮನುವು ಪರಿಸರ ಹಾನಿಯ ವಿರುದ್ಧವಿದ್ದಾನೆಂಬುದು ಸಮಾಧಾನಕರ. ಜಲಾಶಯಗಳಲ್ಲಿ ಮೂತ್ರ, ಮಲ, ಕಫ, ಉಗುಳು, ರಕ್ತ, ವಿಷ ಹಾಕಬಾರದು ಎನ್ನುತ್ತಾನೆ (೪.೫೬). ಕ್ಷತ್ರಿಯನ ಆಳ್ವಿಕೆ ಇರುವೆಡೆ ಬ್ರಾಹ್ಮಣನು ವಾಸಿಸ ಬಹುದು, ಆದರೆ ಶೂದ್ರರಾಜ್ಯದಲ್ಲಿ, ಅಧಾರ್ಮಿಕತೆ ಇರುವೆಡೆ, ಅಂತ್ಯಜರ ಜೊತೆ, ಪಾಷಂಡಿಗಳಿರುವೆಡೆ ವಾಸಿಸಬಾರದು (೪.೬೧). ಇದನ್ನು ನಮ್ಮ ಸಂವಿಧಾನದಲ್ಲಿ ಅಳವಡಿಸಬೇಕೇನು? ಬ್ರಾಹ್ಮಣನು ಈಜಿ ನದಿ ದಾಟಬಾರದಂತೆ (೪.೭೭), ಆದರೆ ಲಾಲ್ ಬಹದ್ದೂರ್ ಶಾಸ್ತ್ರಿ ಪ್ರತಿದಿನ ಗಂಗಾನದಿಯ ಒಂದು ದಡದಿಂದ ಇನ್ನೊಂದು ದಡಕ್ಕೆ ಈಜಿ ಬಂದು ಕಾಲೇಜಿಗೆ ಹೋಗುತ್ತಿದ್ದರಂತೆ. ಬ್ರಾಹ್ಮಣನ ನೀರಸ ಜೀವನಕ್ಕೆ ಒಂದು ಉದಾಹರಣೆ : ಅವನು ನೃತ್ಯ, ಗಾಯನ, ವಾದ್ಯ ನುಡಿಸುವುದು, ತೋಳು ತಟ್ಟುವುದು, ಹಲ್ಲು ಕಡಿಯುವುದು, ಪಶು-ಪಕ್ಷಿಗಳ ಧ್ವನಿಯನ್ನು ಅನುಕರಿಸುವುದು, ಯಾವುದೂ ಮಾಡಬಾರದಂತೆ (೪.೬೪). ಸಿಳ್ಳು ಹೊಡೆಯುತ್ತಾ ಹಾದಿ ಸವೆಸಬಾರದೆಂದು ಹೇಳಿದಂತಾಯಿತು, ಅಷ್ಟೆ. - ಶೂದ್ರನ ಬಗ್ಗೆ ಅವನಿಗೆ ಗರಿಷ್ಠ ಅಸಹನೆ ಇರಬೇಕು, ಏಕೆಂದರೆ ಅವನಿಗೆ ಜ್ಞಾನ ದಾನ ಮಾಡಬಾರದು, ಬುದ್ಧಿ ಹೇಳಬಾರದು, ಹವಿಸ್ಸಿನ ಶೇಷವನ್ನು ನೀಡಬಾರದು, ಉಳಿದುಹೋದ ಊಟ ಉಣಿಸಬಾರದು ಮತ್ತು ವ್ರತಾಚರಣೆಯನ್ನು ಹೇಳಿ ಕೊಡಬಾರದು (೪.೮೦). ಇಂತಹ ಕ್ರೂರ ಮನಸ್ಸಿದ್ದರೂ ಅವನು ಅಂಗವಿಕಲರನ್ನು, ಹೆಚ್ಚು ಅಂಗಾಂಗ ಇರುವವರನ್ನು (ಆರು ಬೆರಳಿರುವುದು, ಇತ್ಯಾದಿ), ಅವಿದ್ಯಾವಂತರನ್ನು, ಇಳಿವಯಸ್ಸಿನವರನ್ನು, ಕುರೂಪಿ - ಬಡವ - ಹೀನಜಾತಿಯವರನ್ನು ಅವಮಾನಿಸಬಾರದೆಂದು ಹೇಳುವ ಮನುವಿಗೂ ಸ್ವಲ್ಪ ಮಾನವತೆಯ ಸೋಂಕಿದೆ (೪.೧೪೧). ಪ್ರಾಣಿಗಳಿಗೆ ವಾತ್ಸಲ್ಯ ತೋರಬೇಕೆಂದು ಹೇಳಿ, ಅದರಿಂದ ಪೂರ್ವಜನ್ಮ ಸ್ಮರಣೆಯಾಗುತ್ತದೆ ಎನ್ನುತ್ತಾನೆ ಮನು (೪.೧೪೮).

ಆಹಾರದ ಸ್ವೀಕಾರ ಮತ್ತು ನಿರಾಕರಣೆಯು ನಮ್ಮ ಸಮಾಜದಲ್ಲಿ 'ತನ್ನ' ಮತ್ತು 'ಪರರ' ಎಂಬ ಭಾವವನ್ನು ಬಿತ್ತಿರುವುದು ಸರಿಯಷ್ಟೆ. ಯಾರು ಕೊಡುವ ಆಹಾರವನ್ನು ತಿನ್ನಬಾರದೆಂಬುದನ್ನು ಮನು ಸಾಕಷ್ಟು ವಿಸ್ತಾರವಾಗಿ ನಿರ್ದೇಶಿಸಿದ್ದಾನೆ (೪.೨೦೫-೨೨೦). ಅಹಂಕಾರಿ, ಕೋಪಿಷ್ಠ, ರೋಗಿ, ಇವರಿತ್ತ ಆಹಾರ ಮತ್ತು ಕೂದಲು - ಕೀಟಗಳಿಂದ ಕೂಡಿದ ಅನ್ನ, ಇವು ವರ್ಜ್ಯ (೪.೨೦೭). ಕಳ್ಳ, ಗಾಯಕ, ಬಡಗಿ, ಶೂದ್ರ, ವೇಶ್ಯೆ, ಲೋಭಿ, ಮುಂತಾದವರು ನೀಡುವ ಅನ್ನವನ್ನು ತಿನ್ನಬಾರದು; ಅಂತೆಯೇ, ಬಡ್ಡಿ ಹಣದಿಂದ ಬದುಕುವವನು ನೀಡಿದ್ದನ್ನೂ ಸೇವಿಸಬಾರದು (೪.೨೧೦). ಬಡಗಿ ಮತ್ತು ಶೂದ್ರರು ನೀಡಿದ್ದನ್ನು ಬ್ರಾಹ್ಮಣನು ಹೇಗೂ ತಿನ್ನುತ್ತಿಲ್ಲದಿದ್ದುದರಿಂದ ಈ ಹೊಸ ಸೂಚನೆಯು ಅನವಶ್ಯಕವೇ ಸರಿ. ವಿಶೇಷವೆಂದರೆ ವೈದ್ಯನು ನೀಡುವ ಅನ್ನವನ್ನು ತಿನ್ನಬಾರದೆಂದು ಮನು ವಿಧಿಸಿದ್ದಾನೆ. ಅವನು ಯಾವ ವರ್ಣದವನಾದರೂ ಸರಿಯೇ, ಅವನು ನೀಡುವ ಅನ್ನವು ವರ್ಜ್ಯ

(೪.೨೧೨). ಬಹುಶಃ ಅವನು ಕೊಡುವ ಔಷಧಿಗೆ ದೋಷವಿಲ್ಲ. ವೈದ್ಯರ ಬಗೆಗಿನ ತಿರಸ್ಕಾರ ಭಾವವು ಮನುವಿಗಿಂತ ಮುಂಚಿನಿಂದಲೂ ಇದ್ದ ಭಾವನೆ. ತೈತ್ತಿರೀಯ ಸಂಹಿತೆಯಷ್ಟು ಹಿಂದೆಯೇ ಅವರ ನಿಂದೆಯು ಆರಂಭವಾಗಿತ್ತು. ದೇವತೆಗಳಾದ ಮತ್ತು ದೇವತೆಗಳ ವೈದ್ಯರಾದ ಅಶ್ವಿನಿಗಳಿಗೇ ಬಹಿಷ್ಕಾರ ಘೋಷಿಸಲಾಗಿತ್ತು. ಅದಕ್ಕೆ ಕಾರಣ ವೈದ್ಯರು ವರ್ಣ ವಿಭಜನೆಯ ಕಟ್ಟಳೆಯನ್ನು ಮೀರಿ ನಡೆಯುತ್ತಾರೆ ಎಂಬುದು. ಮೂಲಿಕೆಗಳನ್ನರಸಿ ಅವರು ಬೆಟ್ಟಗುಡ್ಡಗಳಿಗೆ ಹೋಗಿ ಅಲ್ಲಿಯ ಅ–ಬ್ರಾಹ್ಮಣರೊಡನೆ ಬೆರೆಯುತ್ತಾರೆ ಮತ್ತು ಕರ್ಮ ಸಿದ್ಧಾಂತವನ್ನು ಧಿಕ್ಕರಿಸುತ್ತಾರೆ. ಆದ್ದರಿಂದ ದೇವ ವೈದ್ಯರು ಮತ್ತು ಮರ್ತ್ಯ ವೈದ್ಯರು, ಇಬ್ಬರೂ ಕಳಂಕಿತರೇ. ವೈದ್ಯರ ನಿಂದೆ ಯಾವ ಮಟ್ಟಕ್ಕೆ ಹೋಯಿತೆಂದರೆ "ಅವರು ನೀಡುವ ಆಹಾರವು ಗಾಯದ ಕೀವಿದ್ದಂತೆ" ಎಂದು ಮನು ಅಸಹ್ಯವಾದ ಮಾತನಾಡುವವರೆಗೆ (೪.೨೨೦ : ಪೂಯಂ ಚಿಕಿತ್ಸಕಸ್ಯ ಅನ್ನಂ...).

## ವಾಹನ ಚಾಲಕರೇ...!

ಸ್ವಲ್ಪ ತಡವಾದರೆ ಯಾರಾದರೂ
ಸುಲಿಯುವರೇನು ತೊಗಲು?!
ಧಾವಂತಕ್ಕಿಂತ ಸಾವಧಾನ
ಸಮಾಧಾನವೇ ಮಿಗಿಲು ।
ಅವಸರದಿಂದ ಅಪಘಾತವಾಗಿ
ಆಸ್ಪತ್ರೆ ಸೇರುವ ಬದಲು ।
ನಿಧಾನವಾಗಿ ತೆರಳಿ ಮನೆಯ
ಕ್ಷೇಮದಿ ಸೇರಿಕೊಳ್ಳಿರಿ ಮೊದಲು ।

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೫೬೦ ೦೯೪

ನಾಲ್ಕನೆಯ ಅಧ್ಯಾಯದ ಕಡೆಯ ಭಾಗವು ದಾನಗಳಿಂದ ಎಂತಹ ಫಲಪ್ರಾಪ್ತಿ ಉಂಟಾಗುತ್ತದೆಂಬುದರ ಪಟ್ಟಿ ಮಾಡಿದೆ. ಆಶ್ಚರ್ಯವೆಂದರೆ ಭೂದಾನ ಮಾಡಿದವನಿಗೆ ಭೂಮಿ ಹೆಚ್ಚುತ್ತದೆಂದು (೪.೨೩೦) ಮತ್ತು ಗೋದಾನ ಮಾಡಿದರೆ ಸೂರ್ಯಲೋಕ ಪ್ರಾಪ್ತಿಯಾಗುತ್ತದೆಂದು ಹೇಳಿರುವುದು (೪.೨೩೧). "ದಾನಗಳೆಲ್ಲಕ್ಕಿಂತ ವೇದಜ್ಞಾನವು ಶ್ರೇಷ್ಠ; ಆದ್ದರಿಂದ ನೀರು, ಅನ್ನ, ಗೋವು, ಭೂಮಿ, ವಸ್ತ್ರ, ಎಳ್ಳು, ಬಂಗಾರ, ತುಪ್ಪ, ಇತ್ಯಾದಿ ವಸ್ತುಗಳ ದಾನಕ್ಕಿಂತಲೂ ಬ್ರಹ್ಮಜ್ಞಾನ ರೂಪಿಯಾದ ಜ್ಞಾನದಾನವು ಉತ್ತಮ" (೪.೨೩೩) ಎನ್ನುತ್ತಾನೆ ಮನು. ಧರ್ಮಸಂಗ್ರಹ ಎಂಬುದು ಕಠಿಣವಾದ ಪ್ರಕ್ರಿಯೆ; ಗೆದ್ದಲು ಹುಳುವು ಹುತ್ತವನ್ನು ಕಟ್ಟುವಂತೆ ನಿಧಾನವಾಗಿ ಮತ್ತು ಜಾಗರೂಕತೆಯಿಂದ ಧರ್ಮವನ್ನು ಸಂಗ್ರಹಿಸಬೇಕು (೪.೨೩೮ : ಧರ್ಮಂ ಶನ್ಯೆಃ ಸಂಚಿನುಯಾತ್ ವಲ್ಮೀಕಮಿವ ಪುತ್ತಿಕಾಃ); ಮರಣದ ನಂತರ ಸಹಾಯಕ್ಕೆ ಉಳಿಯುವುದು ಅದೊಂದೇ (೪.೨೩೯) ಎನ್ನುತ್ತಾನೆ ಮನು. "ಬಾಂಧವರೆಲ್ಲ ಮೃತನ ಶರೀರವನ್ನು ಕಲ್ಲು–ಮಣ್ಣಿನಂತೆ ಬಿಸುಟು ಹೋಗುವರು, ಧರ್ಮವೊಂದೇ ಅವನನ್ನು ಹಿಂಬಾಲಿಸುತ್ತದೆ"(೪.೨೪೧) ಎನ್ನುವಾಗ ಮನು ಗದ್ಗತಿತನಾಗುತ್ತಾನೆ, ಧರ್ಮವು ಸದಾ ಕಾಪು ನೀಡುತ್ತದೆಂದು ಭರವಸೆ ಪಡೆಯುತ್ತಾನೆ; ಆದರೆ ಅವನ 'ಧರ್ಮ'ದಲ್ಲಿ ವರ್ಣಧರ್ಮವು ಅಗ್ರಸ್ಥಾನ ಪಡೆದಿದೆಯೆಂಬುದನ್ನು ಮರೆಯಲಾಗದು.

ಐದನೆಯ ಅಧ್ಯಾಯವು 'ತಿನ್ನುವ ಪ್ರಸಂಗ'ವನ್ನು ಮುಂದುವರಿಸಿದೆ. ಯಾವ ದೋಷಗಳು ದ್ವಿಜರಿಗೆ ಪ್ರಾಣಹಾನಿ ಉಂಟುಮಾಡುತ್ತವೆ ಮತ್ತು ವಿಪ್ರನು ಏನೆಲ್ಲಾ ತಿನ್ನಬಹುದು ಇಲ್ಲವೇ ತಿನ್ನಬಾರದು ಎಂಬುದು ಇಲ್ಲಿಯ ವಸ್ತು. ತಿನ್ನಬಾರದ್ದರಲ್ಲಿ ಈಗ ಹೇರಳವಾಗಿ ನಾವೆಲ್ಲಾ ತಿನ್ನುವ ಈರುಳ್ಳಿ, ಅಣಬೆ, ಎಲ್ಲಾ ಸೇರಿವೆ. ಕಶ್ಮಲದಲ್ಲಿ ಹುಟ್ಟುವುದರಿಂದ ಅವು ವರ್ಜ್ಯ (೫.೫ : ... ಅಭಕ್ಷ್ಯಾಣಿ ದ್ವಿಜಾತೀನಾಂ ಅಮೇಧ್ಯ ಪ್ರಭವಾಣಿ ಚ). ಮನುವಿನ ಒಂದು ಸೂಚನೆಯು ಮುಖ್ಯವೆನಿಸುತ್ತದೆ: ಎಳ್ಳು – ಅಕ್ಕಿ ಬೆರೆಸಿ ಬೇಯಿಸಿದ ಅನ್ನ ಮತ್ತು ಇನ್ನು ಕೆಲವು ವಿಧದ ಅನ್ನ ವರ್ಜ್ಯ (೫.೭) ಎಂದು ಹೇಳುತ್ತಾ "ಯಜ್ಞದಲ್ಲಿ ಮಂತ್ರದಿಂದ ಪವಿತ್ರವಾಗದ ಪಶುವಿನ ಮಾಂಸವನ್ನು" (ಅನುಪಾಕೃತ ಮಾಂಸಾನಿ) ತಿನ್ನಬಾರದೆಂದು ಹೇಳಿದ್ದಾನೆ. ಅಂತೆಯೇ, ಹಸಿಮಾಂಸವನ್ನು ತಿನ್ನುವ ಹದ್ದು ಮೊದಲಾದ ಪಕ್ಷಿಗಳು, ಪಾರಿವಾಳ ಮುಂತಾದ ಊರ ಹಕ್ಕಿಗಳು, ಕತ್ತೆ ಮೊದಲಾದ ಮೃಗಗಳು ಮತ್ತು ಟಿಟ್ಟಿಭ ಎಂಬ ಹಕ್ಕಿ, ಇವೆಲ್ಲಾ ವರ್ಜ್ಯ (೫.೧೧). ಪ್ರಪಂಚದ ಎಲ್ಲ ಜೀವ ಜಂತುಗಳನ್ನೂ ದೇವರು ಸೃಷ್ಟಿಸಿರುವುದೇ ತಿನ್ನುವುದಕ್ಕಾಗಿ (೫.೨೮ : ಪ್ರಾಣಸ್ಯಾನ್ನಮಿದಂ ಸರ್ವಂ.... ಸರ್ವಂ ಪ್ರಾಣಸ್ಯ ಭೋಜನಂ) ಎನ್ನುವ ಮನು ಮಾಂಸದ ಎರಡು ಪ್ರಕಾರಗಳನ್ನು ತಿನ್ನಬಹುದೆಂದು ಹೆಸರಿಸಿದ್ದಾನೆ : ಯಜ್ಞದಲ್ಲಿ ಮಂತ್ರಜಲದಿಂದ ಪವಿತ್ರ ಮಾಡಿದ ಮಾಂಸ ಮತ್ತು ಶ್ರಾದ್ಧದೂಟದ ಮಾಂಸ; ಸಂಕಟದ ಸಮಯದಲ್ಲಿ ಯಾವ ಮಾಂಸವನ್ನಾದರೂ ತಿನ್ನಬಹುದು (೫.೨೭). ತಿನ್ನಲು ಯೋಗ್ಯವಾದ ಪ್ರಾಣಿಗಳನ್ನು ಕೊಂದು ತಿಂದರೆ ಬಾಧಕವಿಲ್ಲ, ಏಕೆಂದರೆ ಪ್ರಾಣಿಗಳನ್ನು ಹಾಗೂ ಅವನ್ನು ತಿನ್ನುವ ಮನುಷ್ಯರನ್ನು ದೇವರೇ ಸೃಷ್ಟಿಸಿದ್ದಾನೆ (೫.೩೦)! ದೇವ–ಪಿತೃ ಕಾರ್ಯಗಳನ್ನು ಹೊರತುಪಡಿಸಿ ಅನಗತ್ಯವಾಗಿ ಮಾಂಸ ತಿನ್ನಬಾರದು; ಆದರೆ ಅಂತಹ ಕಾರ್ಯಗಳಲ್ಲಿ ಮಾಂಸವನ್ನು ತಿನ್ನದಿದ್ದರೆ ವ್ಯಕ್ತಿಯು ಗತಿಸಿದ ನಂತರ ಇಪ್ಪತ್ತೊಂದು ಜನ್ಮಗಳಲ್ಲಿ ಪಶುವಾಗಿ ಹುಟ್ಟಬೇಕಾಗುತ್ತದೆ (೫.೩೩ ಮತ್ತು ೩೫). ಯಜ್ಞ–ಶ್ರಾದ್ಧಗಳಲ್ಲಿ ಅಲ್ಲದಿದ್ದರೆ ಪಶುವನ್ನು ತಿನ್ನಬೇಕೆನಿಸಿದಾಗ ಹಿಟ್ಟು ಮತ್ತು ತುಪ್ಪ ಬೆರೆಸಿ ಅದಕ್ಕೆ ಪಶುರೂಪ ಕೊಟ್ಟು ತಿನ್ನಬಹುದು (೫.೩೭ : .... ಕುರ್ಯಾತ್ ಪಿಷ್ಟಪಶುಂ...). ಯಜ್ಞದಲ್ಲಿ ಕೊಲ್ಲಲ್ಪಡಬೇಕೆಂದು ಸೃಷ್ಟಿಸಲ್ಪಟ್ಟಿರುವ ಪಶುಗಳನ್ನು ಕೊಲ್ಲುವುದು 'ವಧೆ' ಎನಿಸಿಕೊಳ್ಳುವುದಿಲ್ಲ. ಅದು ವೇದವಿಹಿತವಾದ ಹಿಂಸೆಯಾದ್ದರಿಂದ ಅದನ್ನು ಅಹಿಂಸೆಯೆಂದು ತಿಳಿಯಬೇಕು (೫.೩೯ ಮತ್ತು ೫.೪೪ : ಯಜ್ಞಾರ್ಥಂ ಪಶವಃ ಸೃಷ್ಟಾಃ ... ತಸ್ಮಾತ್ ಯಜ್ಞೇ ವಧೋಽವಧಃ॥ ನ ವೇದವಿಹಿತಾ ಹಿಂಸಾ ನಿಯತಾಸ್ಮಿಂಶ್ಚರಾಚರೇ। ಅಹಿಂಸಾಮೇವ ತಾಂ ವಿದ್ಯಾತ್ ವೇದಾತ್ ಧರ್ಮೋ ಹಿ ನಿರ್ಬಭೌ॥). ಬುದ್ಧನು ತೀವ್ರವಾಗಿ ಆಕ್ಷೇಪಿಸಿದ್ದುದು ಇದೇ ತರ್ಕವನ್ನು. ಲೋಕಾಯತರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ "ಯಜ್ಞದಲ್ಲಿ ವಧಿಸಲ್ಪಟ್ಟ ಪ್ರಾಣಿಯು ಸ್ವರ್ಗಕ್ಕೆ ಹೋಗುತ್ತದೆಂದಾದರೆ ಯಜ್ಞಕರ್ತೃವು ತನ್ನಪ್ಪನನ್ನು ಬಲಿಕೊಟ್ಟು ಅವನನ್ನೇಕೆ ಸ್ವರ್ಗಕ್ಕೆ ಕಳಿಸಿಬಿಡಬಾರದು" ಎಂದು ಕಾಲೆಳೆದರು. ಮನುವಿನ ಕಾಲಕ್ಕೆ ಬುದ್ಧ ಮತ್ತು ಲೋಕಾಯತರ ಟೀಕೆಗಳು ಇನ್ನೂ ಹೆಚ್ಚು ಪ್ರಬಲವಾಗಿದ್ದವು; ಆದ್ದರಿಂದ ಮನು ಒಂದು ಜಿಜ್ಞಾಸೆಯಲ್ಲಿ ತೊಡಗುತ್ತಾನೆ: "ಹಿಂಸೆ ಮಾಡದೆ ಮಾಂಸವು ದೊರೆಯದು; ಮಾಂಸದ ಆಸೆಗಾಗಿ ಪ್ರಾಣಿವಧೆ ಮಾಡಿದರೆ ಪ್ರಾಣಿಗೆ ಸ್ವರ್ಗವಿಲ್ಲ, ವಧಿಸಿದವನಿಗೂ ಸ್ವರ್ಗವಿಲ್ಲ. ಆದ್ದರಿಂದ ಮಾಂಸಭಕ್ಷಣೆಯನ್ನು ಬಿಡಬೇಕು. ಹೀಗೆ, ಮಾಂಸದ ಉತ್ಪತ್ತಿಯು ವಧೆಯಿಂದ; ಇದು ಬೇರೆ ಬಂಧನಗಳಿಗೂ ಕಾರಣವಾಗುತ್ತದೆ. ಇಂತಹ ಪರಿಣಾಮಗಳನ್ನು ಪರ್ಯಾಲೋಚನೆ ಮಾಡಿ ಮಾಂಸಭಕ್ಷಣವನ್ನು ಬಿಟ್ಟುಬಿಡಬೇಕು" (೫.೪೮ – ೪೯). ಹಾಗಿದ್ದರೆ, ಹಿಂದಿನ ಅಧ್ಯಾಯದಲ್ಲಿ ಎಂತೆಂತಹ ಮಾಂಸಗಳನ್ನು ತಿನ್ನಬಹುದೆಂದು ಪಟ್ಟಿ ಮಾಡಿದ್ದೇಕೆ? ಇದೊಂದು ತಾಕಲಾಟ : ಪ್ರಾಣಿಗಳ ಮಾಂಸ ತಿನ್ನಬಹುದೇ ಅಥವಾ ತಿನ್ನಕೂಡದೆ? "ಶಾಸ್ತ್ರ ವಿಧಿಯನ್ನು ತಿರಸ್ಕರಿಸಿ, ಪಿಶಾಚಿಯಂತೆ ದುರಾಸೆಗೊಳಗಾಗಿ ಮಾಂಸವನ್ನು ಯಾರು ತಿನ್ನುವುದಿಲ್ಲವೋ ಅವರು ಎಲ್ಲರಿಗೂ ಪ್ರೀತಿಪಾತ್ರರು, ಯಾವ ವ್ಯಾಧಿಗಳಿಂದಲೂ ಪೀಡಿತರಾಗುವುದಿಲ್ಲ" (೫.೫೦). ಹೀಗೆನ್ನುವ ಮನು ಹಿಂದಿನ ಅಧ್ಯಾಯದಲ್ಲಿ ಇದಕ್ಕೆ ವ್ಯತಿರಿಕ್ತವಾದ ಅಭಿಪ್ರಾಯವನ್ನು ಮಂಡಿಸಿದ್ದಾನೆ. ಪ್ರಸ್ತುತ ಅಧ್ಯಾಯದಲ್ಲಿ ಅವನ ಮುಂದಿನ ವಿಚಾರ ಪ್ರತಿಪಾದನೆಯು ಸ್ವಾರಸ್ಯಕರವಾಗಿದೆ: ಪ್ರಾಣಿಘಾತುಕರು ಯಾರು? ಅದರ ವಧೆಗೆ ಅನುಮತಿ ನೀಡುವವನು, ಅದರ ಅಂಗಾಂಗಗಳನ್ನು ಕತ್ತರಿಸುವವನು, ಪಶುಗಳನ್ನು ಕೊಲ್ಲುವವನು, ಮಾಂಸ ಮಾರುವವನು, ಮಾಂಸದ ಅಡಿಗೆ ಮಾಡುವವನು, ಅತಿಥಿಗೆ ಅದನ್ನು ನೀಡುವವನು, ಮತ್ತು ಕಡೆಗೆ ಅದನ್ನು ತಿನ್ನುವವನು, ಇವರೆಲ್ಲಾ ಪ್ರಾಣಿಘಾತುಕರೇ. ಪಿತೃಗಳನ್ನು ಮತ್ತು ದೇವತೆಗಳನ್ನು ಮಾಂಸ ನೀಡಿ ತಣಿಸುವುದು ಸರಿ; ಆದರೆ ಪಶು ಮಾಂಸದಿಂದ ತನ್ನ ಮಾಂಸವನ್ನು ಪುಷ್ಕಲಗೊಳಿಸಿಕೊಳ್ಳುವ ಇಚ್ಛೆಯುಳ್ಳವನು ಮಹಾಪಾಪಿ! (೫.೫೧ – ೫೨). ಅಂದರೆ, ಮನುವಿನ ಕಾಲದಲ್ಲಿ ಹಿಂದಿನ ಪರಂಪರೆಗೆ ವ್ಯತಿರಿಕ್ತವಾಗಿ ಅದರ ಭಾಗಶಃ ನಿರಾಕರಣೆಯು ನೆಲೆಗೊಳ್ಳುತ್ತಿದೆ, ಆದರೆ ಹಿಂದಿನ ಪದ್ಧತಿಯನ್ನು ಪೂರ್ತಿಯಾಗಿ ಕೈಬಿಡಲಾಗಿಲ್ಲ. ಆದ್ದರಿಂದ ಅವನ ನಿರ್ದೇಶವು ಪ್ರವೃತ್ತಿ ಮತ್ತು ನಿವೃತ್ತಿಗಳ ನಡುವೆ ಹೊಯ್ದಾಡುತ್ತದೆ: "ಮಾಂಸಭಕ್ಷಣೆ, ಸುರಾಪಾನ, ಮೈಥುನ, ಇವುಗಳಲ್ಲಿ ದೋಷವಿಲ್ಲ; ಏಕೆಂದರೆ ಅವು ಮಾನವ ಸಹಜವಾದುವು. ಆದರೆ ಇವುಗಳಲ್ಲಿ ಪ್ರವೃತ್ತಿಗಿಂತಲೂ ನಿವೃತ್ತಿಯು ಹೆಚ್ಚು ಫಲದಾಯಕ" (೫.೫೬ : ನ ಮಾಂಸಭಕ್ಷಣೇ ದೋಷೋ ನ ಮದ್ಯೇ ನ ಚ ಮೈಥುನೇ । ಪ್ರವೃತ್ತಿರೇಷಾ ಭೂತಾನಾಂ ನಿವೃತ್ತಿಸ್ತು ಮಹಾಫಲಾ॥). ಸಂಕ್ರಮಣ ಕಾಲದ ದ್ವಂದ್ವವು ಇಲ್ಲಿ ಪ್ರತಿಫಲಿತವಾಗಿದೆಯೆನ್ನಬಹುದು.

ಮುಂದಿನ ಭಾಗವು ಅಶೌಚ (ಸೂತಕ), ದೇಹಶುದ್ಧಿ, ದ್ರವ್ಯಶುದ್ಧಿ, ಇತ್ಯಾದಿಗಳನ್ನು ಪ್ರತಿಪಾದಿಸುತ್ತದೆ. ಅದನ್ನು ಪಕ್ಕಕ್ಕಿಟ್ಟು ಸ್ತ್ರೀ ಧರ್ಮವನ್ನು ಕುರಿತ ವ್ಯಾಖ್ಯೆಯತ್ತ ಗಮನ ಹರಿಸೋಣ. ಐದನೆಯ ಅಧ್ಯಾಯದ ಉಳಿದ ಭಾಗ ಮತ್ತು ಸ್ತ್ರೀ – ಪುರುಷ ಸಂಬಂಧವನ್ನು ಕುರಿತಾದ ಒಂಭತ್ತನೆಯ ಅಧ್ಯಾಯ, ಇವೆರಡನ್ನೂ ಜೊತೆಯಾಗಿ ಪರಿಶೀಲಿಸುವುದು ಅದಕ್ಕೆ ಉತ್ತಮ ಹಾದಿ. ಪುರುಷ ಪಾರಮ್ಯವು ಭಾರತೀಯ ಸಮಾಜದಲ್ಲಾಗಲಿ, ಬೇರಾವುದೇ ಸಮಾಜದಲ್ಲಾಗಲಿ ಥಟಕ್ಕನೆ ಕಾಣಿಸಿಕೊಂಡ ವಿದ್ಯಮಾನವಲ್ಲ. ಮಾನವಶಾಸ್ತ್ರವು ತಿಳಿಸುವಂತೆ ಎಲ್ಲ ದೇಶಗಳ ಪ್ರಾಚೀನ ಇತಿಹಾಸದಲ್ಲೂ ಮಾತೃಪ್ರಾಧಾನ್ಯವಿದ್ದ ಹಂತವು ಪುರುಷ ಪಾರಮ್ಯಕ್ಕಿಂತಲೂ ಮುಂಚೆ ಇದ್ದ ವ್ಯವಸ್ಥೆಯೇ. ಉತ್ಪಾದನಾ ವಿಧಾನಗಳು ಅನೂಚಾನವಾಗಿ ಬದಲಾಗುತ್ತಾ ಬಂದು ಮುಂದಿನ ಒಂದು ಹಂತದಲ್ಲಿ ಪಿತೃಪ್ರಾಧಾನ್ಯವು ಉದ್ಭವಗೊಂಡಿದೆ. ಪ್ರಾಚೀನ ಸಮಾಜಗಳ ಹಾಗೂ ಆದಿ ಮಾತೃದೇವತೆಗಳ ಅಧ್ಯಯನದಿಂದ ಇದು ಸ್ಥಿರವಾಗಿದೆ. ಪುರುಷರ ಪೌರುಷವು ಮನುಸ್ಮೃತಿಯಲ್ಲಿ ಗಾಢವಾಗಿ ಪ್ರತಿಫಲಿತವಾಗಿದೆ. "ಮಹಿಳೆಯು ಬಾಲ್ಯದಲ್ಲಿ ತಂದೆಯ, ಯೌವನದಲ್ಲಿ ಗಂಡನ, ಮುಪ್ಪಿನಲ್ಲಿ ಮಕ್ಕಳ, ರಕ್ಷಣೆಯಲ್ಲಿ ಇರುತ್ತಾಳೆ; ಹೀಗಾಗಿ ಅವಳು ಸ್ವತಂತ್ರವಾಗಿರಲು ಅರ್ಹಳಲ್ಲ" ಎಂಬ ಮನುವಾಕ್ಯವು ಹಳಸಲಾಗುವಷ್ಟು ಪ್ರಸಿದ್ಧವಾಗಿದೆ (೯.೩ : ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ । ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ॥). ಮುಪ್ಪಿನಲ್ಲಿ ಹೆಣ್ಣುಮಕ್ಕಳು ತಾಯಿಯ ಸೇವೆ ಮಾಡಬಹುದೆಂಬ ಕಲ್ಪನೆಯು ಮನುಯುಗಕ್ಕೆ ತಿಳಿಯುವಂತಿರಲಿಲ್ಲ. ಸದಾ ಯಾರದಾದರೂ ರಕ್ಷಣೆಯಲ್ಲಿ ಇರಬೇಕಾದ್ದರಿಂದ ಸ್ತ್ರೀಗೆ ಒಂದು ರೀತಿಯ ಪಾರತಂತ್ರ್ಯವು ಅನಿವಾರ್ಯವೆಂದು ಮನುವಿನ ಕಾಲದ ಧರ್ಮಶಾಸ್ತ್ರಕಾರರೆಲ್ಲರ ಅಭಿಪ್ರಾಯ. ಮಹಿಳೆಯು ಜಗನ್ಮಾತೆಯ ಪ್ರತೀಕವಾದ್ದರಿಂದ ಭಾರತೀಯ ಸಂಸ್ಕೃತಿಯಲ್ಲಿ ಆಕೆಗೆ ಸದಾ ಅಗ್ರಸ್ಥಾನವಿದೆ, ಅವಳಿಗೆ ಅನನ್ಯ ಗೌರವವಿದೆ, ಅವಳೆಂದೂ ಅವಗಣನೆಗೆ ಗುರಿಯಾಗಿರಲಿಲ್ಲವೆಂದು ಹೇಳುತ್ತಾ ಆಧುನಿಕ ಮನುವಾದಿಗಳು ತಮ್ಮ ಮುಜುಗರವನ್ನು ಮುಚ್ಚಿಕೊಳ್ಳಲು ಯತ್ನಿಸುತ್ತಾರೆ. ಪ್ರಾಚೀನ ಸಮಾಜದ ಒಂದು ಹಂತದಲ್ಲಿನ ವಿದ್ಯಮಾನದಿಂದ ಇವರೇಕೆ ಕೊರಗಬೇಕೋ ತಿಳಿಯದು. ಆ ಕೊರಗನ್ನು ಮುಚ್ಚಿಕೊಳ್ಳಲು ನೂತನ ವ್ಯಾಖ್ಯಾನವನ್ನು ಸೃಷ್ಟಿಸಲಾಗಿದೆ, ಆದರೆ ಅದು ಮೇಧಾತಿಥಿ ಮತ್ತು ಕುಲ್ಲೂಕಭಟ್ಟ ಮುಂತಾದವರ ವ್ಯಾಖ್ಯಾನಕ್ಕೆ ಹೊಂದುವುದಿಲ್ಲ. ಆಧುನಿಕ ಮನುವಾದಿಗಳು "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂದರೆ ಅವಳಿಗೆ ಸದಾ ರಕ್ಷಣೆ ಉಂಟೆಂದು ಅರ್ಥವೇ ವಿನಾ ಅವಳ ಸಾಮಾಜಿಕ ದರ್ಜೆಗೆ ಕುಂದುಂಟಾಗಿತ್ತೆಂದು ಅರ್ಥವಲ್ಲವೆಂದು ಇತಿಹಾಸದ ನೈಜಪ್ರಸಂಗವನ್ನು ತಿರುಚಲು ಹಾತೊರೆಯುತ್ತಾರೆ. ಈ ಒಂದು ಶ್ಲೋಕದ ಆಧಾರದ ಮೇಲೆ ಯಾವ ಬಣದವರೂ ಅಂತಿಮ ತೀರ್ಮಾನ ಕೈಗೊಳ್ಳಬೇಕಾಗಿಲ್ಲ. ಮುಜುಗರವಂತೂ ಸರ್ವಥಾ ಅನವಶ್ಯಕ. ಸಮಾಜ ವಿಕಾಸದ ಹಾದಿಯಲ್ಲಿ ಅಂಥದೊಂದು ಸನ್ನಿವೇಶ ಉದ್ಭವವಾಗಿದ್ದರೆ ಇಂದು ಅದಕ್ಕೆ ನಾವು ಬಾಧ್ಯರಲ್ಲ; ಬದಲಾಗಿ, ಅಂತಹ ಸನ್ನಿವೇಶವನ್ನು ಪ್ರಕೃತದ ಭಾರತ ಸಂವಿಧಾನದಡಿಯೂ ಮುಂದುವರಿಸುತ್ತಿರುವುದಕ್ಕೆ ತಲೆ ತಗ್ಗಿಸಬೇಕು, ಪರ್ಯಾಯ ವ್ಯವಸ್ಥೆಯನ್ನು ರಚಿಸಿಕೊಂಡು ಲಿಂಗಸಮಾನತೆಯನ್ನು ದಿನನಿತ್ಯದ ವ್ಯವಹಾರದಲ್ಲಿ ವಾಸ್ತವವಾಗುವಂತೆ ಶ್ರಮಿಸಬೇಕು. ಮನುವಿನ ವಾಕ್ಯಕ್ಕೆ ಇಲ್ಲದ ಮತ್ತು ಸಲ್ಲದ ಅರ್ಥ ನೀಡುತ್ತಾ ಎಲ್ಲವೂ ರಂಜನೀಯವಾಗಿತ್ತು ಮತ್ತು ಆಗಿದೆಯೆಂದು ಬೀಗುವುದು ದುರುಳತನವಾಗುತ್ತದೆ.

ನಿಜಕ್ಕೂ ಮನುವಿನ ಕಾಲದ ವ್ಯವಹಾರವು ಹೇಗಿತ್ತು, ಅವನ ಹಾಗೂ ಅವನಂತಹ ಧರ್ಮಶಾಸ್ತ್ರಕಾರರ ನಿಲುವೇನಿತ್ತೆಂದು ತಿಳಿಯಲು ಆಯಾಗ್ರಂಥಗಳ ಎಲ್ಲ ಭಾಗಗಳನ್ನೂ ಏಕತ್ರ ತಂದು ಅರ್ಥೈಸಿಕೊಳ್ಳಬೇಕು. ಅವೆಲ್ಲಾ ಸ್ತ್ರೀಯ ರಕ್ಷಣೆ ಮತ್ತು ಪೋಷಣೆಯ ಮಾತನ್ನಾಡುವುದಿಲ್ಲ; ಅವಳ ಕೌಟುಂಬಿಕ ಮತ್ತು ಸಾಮಾಜಿಕ ಸ್ಥಾನಮಾನದ ನಿರ್ದೇಶನಗಳನ್ನು ಕೊಡುತ್ತವೆ. ಹೇಗೆಂಬುದನ್ನು ನೋಡೋಣ: ನಾಲ್ಕು ವರ್ಣಗಳವರ ದೇಹಶುದ್ಧಿ ಮತ್ತು ದ್ರವ್ಯಶುದ್ಧಿಗಳ ಪ್ರಸಂಗದ ನಂತರದ ಶ್ಲೋಕದಲ್ಲಿ "ಬಾಲ್ಯದಲ್ಲಿ, ಯುವತಿಯಾಗಿದ್ದಾಗ ಮತ್ತು ವೃದ್ಧಾವಸ್ಥೆಯಲ್ಲಿ, ಮನೆಯಲ್ಲೇ ಇದ್ದಾಗಲೂ, ತಾನೇ ಸ್ವತಂತ್ರವಾಗಿ ಯಾವ ಕಾರ್ಯವನ್ನೂ ಮಾಡಬಾರದು" ಎಂದು ಹೇಳಲಾಗಿದೆ (೫.೧೪೭ : ಬಾಲ್ಯಾ ವಾ ಯುವತ್ಯಾ ವಾ ವೃದ್ಧಯಾ ವಾऽಪಿ ಯೋಷಿತಾ। ನ ಸ್ವಾತಂತ್ರ್ಯೇಣ ಕರ್ತವ್ಯಂ ಕಿಂಚಿತ್ಕಾರ್ಯಂ ಗೃಹೇಷ್ವಪಿ॥). ಇದು ಸಾಮಾಜಿಕ ಸ್ಥಾನದ ಪ್ರಶ್ನೆಯಲ್ಲ, ಬದಲಾಗಿ ಕುಟುಂಬದಲ್ಲಿನ ಕಾರ್ಯ ನಿರ್ವಹಣೆಯ ಪ್ರಶ್ನೆ. ಇಲ್ಲಿ ರಕ್ಷಣೆ ಮತ್ತು ಪೋಷಣೆಯ ಮಾತೂ ಇಲ್ಲ. ಅವಳು ಸ್ವತಂತ್ರವಾಗಿ ಏನೂ ಮಾಡುವಂತಿಲ್ಲವೆಂಬುದಷ್ಟೇ ಇಲ್ಲಿನ ತಾತ್ಪರ್ಯ. ಮುಂದಿನ ಶ್ಲೋಕವು ತಂದೆ, ಗಂಡ ಮತ್ತು ಮಕ್ಕಳು ಸ್ತ್ರೀಗೆ ಬಾಲ್ಯ, ಯೌವನ ಮತ್ತು ಮುಪ್ಪಿನಲ್ಲಿ 'ರಕ್ಷಣೆ' ಕೊಡುತ್ತಾರೆಂಬುದನ್ನು ಸ್ವಲ್ಪ ಒರಟಾಗಿ ಹೇಳಿದೆ. ಮನುವಿನ ಪದ ಪ್ರಯೋಗವು ಗಮನಾರ್ಹ: ಬಾಲ್ಯೇ ಪಿತುರ್ವಶೇ ತಿಷ್ಠೇತ್ ಪಾಣಿಗ್ರಾಹಸ್ಯ ಯೌವನೇ । ಪುತ್ರಾಣಾಂ ಭರ್ತರಿ ಪ್ರೇತೇ ನ ಭಜೇತ್ ಸ್ತ್ರೀ ಸ್ವತಂತ್ರತಾಂ॥ (೫.೧೪೮). ತಂದೆಯ ವಶದಲ್ಲಿ, ಗಂಡನ ವಶದಲ್ಲಿ ಮತ್ತು ಗಂಡನು ಗತಿಸಿದಾಗ ಮಕ್ಕಳ ವಶದಲ್ಲಿ ಅವಳಿರುತ್ತಾಳೆ; ಹೀಗೆ ಅಧೀನದಲ್ಲಿ ಬಾಳಬೇಕೇ ಹೊರತು ತಾನೇ ಸ್ವತಂತ್ರವಾಗಿ ವ್ಯವಹರಿಸಬಾರದು. 'ಬಾರದು' ಎಂದರೆ 'ಕೂಡದು' ಎಂದರ್ಥ. ತಂದೆ, ಗಂಡ ಮತ್ತು ಮಕ್ಕಳನ್ನು ಬಿಟ್ಟು ಒಬ್ಬಳೇ ಇರಬಾರದು; ಹಾಗೇನಾದರೂ ಮಾಡಿದರೆ ತಂದೆ ಮತ್ತು ಗಂಡನ ಕುಲಗಳಿಗೆ ಅಪಖ್ಯಾತಿ ತರುತ್ತಾಳೆ (೫.೧೪೯). ಕಣ್ವರು ಶಕುಂತಲೆಗೆ ಆಶೀರ್ವಚನ ನೀಡುವಾಗಲೂ ಕುಲದ ಅಪಖ್ಯಾತಿಯನ್ನು ಕುರಿತು ಹೇಳುತ್ತಾರೆ, ಕಾಲಿದಾಸನ ನಾಟಕದಲ್ಲಿ (...ವಾಮಾ ಕುಲಸ್ಯಾಧಯಃ). ಆಧುನಿಕ ಮನುಗಳು ಇದನ್ನೆಲ್ಲಾ ಹೇಗೆ ಯಥಾರ್ಥವಾಗಿ ಅರ್ಥೈಸಿಯಾರು? ಸುಮ್ಮನೆ ಇತಿಹಾಸದ ಒಂದು ಹಂತದ ಸನ್ನಿವೇಶವನ್ನು ಅದಿದ್ದಂತೆ ಗ್ರಹಿಸುವುದು ಯೋಗ್ಯ. ಇನ್ನೊಂದು ಆಣತಿ ನೋಡಿ: "ಸದಾ ಸಂತೋಷದಿಂದಿರುತ್ತಾ ಸ್ತ್ರೀಯು ತನ್ನ ಗೃಹಕಾರ್ಯಗಳನ್ನು ದಕ್ಷತೆಯಿಂದ ನಿರ್ವಹಿಸಬೇಕು; ಪಾತ್ರೆಗಳನ್ನು ಚೆನ್ನಾಗಿ ತೊಳೆದು ಶುದ್ಧವಾಗಿರಿಸಬೇಕು; ಮಿತವ್ಯಯ ಮಾಡುವವಳಾಗಿರಬೇಕು" (೫.೧೫೦). ಪುರುಷನಿಗೆ ಇಂತಹ ಜವಾಬ್ದಾರಿಗಳಿಲ್ಲ, ಅವನು ದುರ್ವ್ಯಯ ಮಾಡಬಹುದೇನೋ! ಮದುವೆಯಲ್ಲಿ ಸ್ವಸ್ತಿವಾಚನ, ಪ್ರಜಾಪತಿ ಹೋಮ ಇತ್ಯಾದಿ ವಿಧಿಗಳ ನಂತರ ಕನ್ಯಾದಾನ ಮಾಡಲಾಗಿದೆ. ಅದು "ಅವನಿಗೆ ಅವಳ ಮೇಲೆ ಒಡೆತನವನ್ನು ನೀಡುವುದಾಗಿದೆ" (೫.೧೫೨ : ... ಪ್ರದಾನಂ ಸ್ವಾಮ್ಯಕಾರಣಂ). ಇಲ್ಲಿ ಸಮಾನತೆಯ ಲವಲೇಶದಷ್ಟು ಚಿಂತನೆಯೂ ಇಲ್ಲವೆಂಬುದು ಶತಸ್ಸಿದ್ಧ. ಇನ್ನೂ ಬೇಕೆ? ಇಗೋ ಇಲ್ಲಿದೆ : "ಪತಿಯು ನೀತಿವಂತನಾಗಿರದಿದ್ದರೂ, ಕಾಮಾತುರನಾಗಿ ಬೇರೆಯವರಲ್ಲಿ ಮನಸ್ಸಿಟ್ಟರೂ, ದುರ್ನಡತೆಯವನಾಗಿದ್ದರೂ, ಪತಿವ್ರತೆಯಾದ ಪತ್ನಿಯು ಗಂಡನನ್ನು ದೇವರೆಂದು ಭಾವಿಸಿ ಸೇವೆ ಮಾಡಬೇಕು" (೫.೧೫೪ : ... ಉಪಚರ್ಯಃ ಸ್ತ್ರಿಯಾ ಸಾಧ್ವ್ಯಾ ಸತತಂ ದೇವವತ್ಪತಿಃ). ಅವನಿಗೆ ಅವಳ ಬಗ್ಗೆ ಇಂತಹ ಯಾವ ವಿಧಿ–ನಿಷೇಧಗಳನ್ನೂ ಧರ್ಮಶಾಸ್ತ್ರಕಾರರು ಹೇಳಿಲ್ಲ. "ಪತಿಯ ಸೇವೆಯನ್ನುಳಿದು ಸ್ತ್ರೀಗೆ ಬೇರಾವ ಯಜ್ಞ ವಿಧಿಗಳೂ ಇಲ್ಲ. ಪತಿ ಶುಶ್ರೂಷೆಯಿಂದಲೇ ಅವಳು ಸ್ವರ್ಗದಲ್ಲಿ ಗೌರವಾರ್ಹಳಾಗುತ್ತಾಳೆ" (೫.೧೫೫ : ... ಪತಿಂ ಶುಶ್ರೂಷತೇ ಯೇನ ತೇನ ಸ್ವರ್ಗೇ ಮಹೀಯತೇ). ಕುಡುಕ ಗಂಡನು ಕೊಳಚೆ ಪ್ರದೇಶದ ಗುಡಿಸಲಿನಲ್ಲಿ ಹೆಂಡತಿಯನ್ನು ಸೌದೆಯಿಂದ ಚಚ್ಚಿದಾಗ ಸಮಾಜವು ಅವಳಿಗೆ ನೀಡುವ ಸಾಂತ್ವನ ಇದು! ಇದನ್ನೇ ನಮ್ಮ ಆಧುನಿಕ ಮನುವಾದಿಗಳು ಭಾರತದ ಸಂವಿಧಾನವಾಗಬೇಕೆಂದು ಬಯಸುತ್ತಾರೇನು? ಇಂತಹ ಮನುವು ಋಗ್ವೇದವು ಉಚ್ಚಕಂಠದಿಂದ ಮೂರುಸಾವಿರ ವರ್ಷಗಳ ಹಿಂದೆ ಹೇಳಿದ್ದುದನ್ನು ಪುನರುಚ್ಚರಿಸಿಯಾನೆ? ಅಲ್ಲಿ ವಿಧವೆಗೆ ಋಗ್ವೇದದ ಕವಿ ಹೇಳುತ್ತಾನೆ: "ಅವಿಧವೆಯರಾದ ಈ ನಾರಿಯರು ಸುಪತ್ನಿಯರಾಗಿದ್ದವರು. ಅವರ ಪತಿಗಳೂ ಒಳ್ಳೆಯ ಬಾಳುವೆ ನಡೆಸಿದವರೇ. ಈ ನಾರಿಯರು ತಮ್ಮ ತಮ್ಮ ಮನೆಗಳಿಗೆ ತೆರಳಿ ಗಂಧಾದಿ ದ್ರವ್ಯಗಳನ್ನು ಪೂಸಿಕೊಳ್ಳಲಿ. ಒಳ್ಳೆಯ ಆಭರಣಗಳು, ಕಣ್ಣೀರು ಸುರಿಸದ ಕಣ್ಣುಗಳು, ಪರಿತಾಪ ರಹಿತರು, ಅವರ ಪತಿಯನ್ನಿರಿಸಿರುವ ಜಾಗಕ್ಕೆ ಹೋಗಿಬರಲಿ. ಬಾ, ನಿತ್ಯದ ಜೀವನಕ್ಕೆ ಹಿಂದಿರುಗು. ಅವನೀಗ ನಿರ್ಜೀವಿಯಾಗಿದ್ದಾನೆ. ಈವರೆಗೆ ಅವನೊಡನಿದ್ದುದು ನಿನ್ನ ಜೀವನದ ಒಂದು ಭಾಗ. ಅವನು ನಿನ್ನನ್ನು ಪ್ರೀತಿಸಿ ಮುನ್ನಡೆಸಿದ್ದಾನೆ" (೧೦.೧೮.೭–೮). ಮನುವು ಇದಕ್ಕೆ ಓಗೊಡದಿದ್ದರೂ ಅವನ ಧರ್ಮಶಾಸ್ತ್ರವು ವೇದವನ್ನಾಧರಿಸಿದೆಯೆಂದು ಹೇಳುತ್ತಾ ಬರಲಾಗಿದೆ. ಮನು ಹೇಳುತ್ತಾನೆ, "ಪತ್ನಿಯು ತನಗಿಂತ ಮೊದಲು ಗತಿಸಿದರೆ ಪತಿಯು ಅವಳ ಅಂತ್ಯಕರ್ಮ ಮತ್ತು ಉತ್ತರಕ್ರಿಯೆಗಳನ್ನು ಮಾಡಿ, ಇನ್ನೂ ಯೌವ್ವನವಿದ್ದಲ್ಲಿ ಪುನರ್ವಿವಾಹ ಮಾಡಿಕೊಳ್ಳಬೇಕು, ಮತ್ತೆ ಶ್ರೌತ – ಸ್ಮಾರ್ತಾಗ್ನಿಗಳನ್ನು ಇರಿಸಿಕೊಳ್ಳಬೇಕು" (೫.೧೬೮). ಅದೆಲ್ಲಾ ಪಿತೃಪ್ರಧಾನ ಸಮಾಜದ ನಡವಳಿಕೆಯ ಒಂದು ಭಾಗ.

ಮನುಸ್ಮೃತಿಯ ಒಂಭತ್ತನೆಯ ಅಧ್ಯಾಯದ ಮೂರನೆಯ ಶ್ಲೋಕವನ್ನು ಈಗಾಗಲೆ ನೋಡಿದ್ದೇವೆ. ಎರಡನೆಯ ಪದ್ಯವನ್ನೀಗ ಗಮನಿಸೋಣ: "ಸ್ತ್ರೀಯರನ್ನು ಅಧೀನದಲ್ಲಿಟ್ಟುಕೊಳ್ಳಬೇಕು, ಅಸ್ವತಂತ್ರರನ್ನಾಗಿಸಬೇಕು; ಸುಖ – ಭೋಗಾದಿ ಅಭಿಲಾಷೆಗಳಿಂದ ಪ್ರವರ್ತಿಸುವ ಅವರನ್ನು ಅಂಕೆಯಲ್ಲಿ ಇರಿಸಿ ಕೊಳ್ಳಬೇಕು" (೯.೨ : ಅಸ್ವತಂತ್ರಾಃ ಸ್ತ್ರಿಯಃ ಕಾರ್ಯಾಃ .... ಸಂಸ್ಥಾಪ್ಯಾ ಆತ್ಮನೋ ವಶೇ). "ಸದಾ ಗೌರವಾನ್ವಿತಳು" ಎನ್ನಲಾದ ಸ್ತ್ರೀಗೆ ಇದೇ ಮರ್ಯಾದೆ! "ಆತ್ಮನೋ ವಶೇ" ಎಂದು ಹೇಳಿದ ಮೇಲೆ ಅವಳಿಗೆ ಸ್ವಾತಂತ್ರ್ಯವೆಲ್ಲಿಯದು? ಅವಳು ಸ್ವೈರಿಣಿ, ಇವನಾದರೆ ಬಹಳ ಸಾಧುಪ್ರಾಣಿ !! ಇಡೀ ಅಧ್ಯಾಯವು ಅವಳ ಮೇಲಿನ ಅಂಕೆಯನ್ನು ಹೇಳುತ್ತಿರುವಾಗ ಅವಳ "ಗೌರವಯುತ ಸ್ಥಾನ"ದ ಬಗ್ಗೆ ಹೇಳುವುದಿನ್ನೇನಿದೆ? ಅವಳ ಬಗೆಗಿನ "ಜವಾಬ್ದಾರಿ"ಯನ್ನು ತಂದೆ, ಗಂಡ ಮತ್ತು ಮಗ ಪೂರೈಸದಿದ್ದರೆ ಅವರು ನಿಂದನೀಯರಾಗುತ್ತಾರೆ (೯.೪), ಅವಳನ್ನು "ಸೂಕ್ಷ್ಮವಾದ ಪ್ರಸಂಗಗಳಿಂದ" (ಅಂದರೆ ಜಾರತನ, ಇತ್ಯಾದಿ) ಕಾಪಾಡಬೇಕು (೯.೫). ಈ ವಿಧದ "ಸ್ತ್ರೀ ರಕ್ಷಣೆ"ಯು ಎಲ್ಲಾ ವರ್ಣದವರಿಗೂ ಪರಮ ಧರ್ಮ (೯.೬). ಅದು ವ್ಯಕ್ತಿಯ, ಸಂತಾನದ ಮತ್ತು ಕುಲದ ಚಾರಿತ್ರ್ಯ ಹಾಗೂ ಸ್ವಧರ್ಮದ ರಕ್ಷಣೆ (೯.೭). ಅವಳು ಸ್ವಭಾವತಃ ಸ್ವೈರಿಣಿ; ಆದ್ದರಿಂದ ವಿವಿಧೋಪಾಯಗಳಿಂದ ಅವಳನ್ನು ರಕ್ಷಿಸಬೇಕು (೯.೧೦ : ನ ಕಶ್ಚಿದ್ಯೋಷಿತಃ ಶಕ್ತಃ ಪ್ರಸಹ್ಯ ಪರಿರಕ್ಷಿತುಂ। ಏತೈರುಪಾಯಯೋಗೌಸ್ತು ಶಕ್ಯಾಸ್ತಾಃ ಪರಿರಕ್ಷಿತುಂ ॥)

ಮಹಿಳೆಯು ಚಂಚಲಚಿತ್ತಳಾಗಿ ಹಾದಿ ತಪ್ಪಲು ಮನುವಿನ ಪ್ರಕಾರ ಆರು ಕಾರಣ ಗಳಿವೆ: ಸುರಾಪಾನ, ದುರ್ಜನರ ಸಹವಾಸ, ಗಂಡನಿಂದ ಅಗಲಿ ದೂರವಿರುವುದು (ಗಂಡನು ಅಥವಾ ಅವಳು ಬೇರೆಲ್ಲೋ ಹೋಗಬೇಕಾಗಿ ಬಂದಾಗ), ಅಕಾಲದಲ್ಲಿ ಮಲಗುವುದು, ಅಲೆದಾಡುವುದು ಮತ್ತು ಪರರ ಮನೆಗಳಲ್ಲಿ ತಂಗುವುದು (೯.೧೩). ಇಲ್ಲಿಂದ ಮುಂದೆ ಕೆಲವು ಪದ್ಯಗಳು ಮಹಿಳೆಯು ಏಕೆ ಸದಾ ಅನುಮಾನಾಸ್ಪದಳು ಮತ್ತು ಆ ಕಾರಣದಿಂದ ಅವಳ ಬಗ್ಗೆ ಎಚ್ಚರ ವಹಿಸಬೇಕೆಂಬುದನ್ನು ವಿಸ್ತರಿಸುತ್ತವೆ. ಇದೂ ಸಹ ಅವಳಿಗೆ ಸ್ವಭಾವಜನ್ಯ; ಪ್ರಜಾಪತಿಯು ಅವಳನ್ನು ಹಾಗೆ ಸೃಷ್ಟಿಸಿದ್ದಾನೆ (೯.೧೬). ಮೋಹ, ಅಪ್ರಾಮಾಣಿಕತೆ, ಕಾಮ, ಪತಿದ್ರೋಹ, ಇತ್ಯಾದಿಗಳು ಸಹ ಅವಳ ಸಹಜ ಗುಣಗಳಂತೆ (೯.೧೭). ಪುರುಷನ ಇಂತಹ ಗುಣಗಳನ್ನು ಮನು ಏಕೆ ಪಟ್ಟಿ ಮಾಡಲಿಲ್ಲವೋ ತಿಳಿಯದು. ಇಂದ್ರಿಯ ನಿಗ್ರಹಕ್ಕೆ ಮಹಿಳೆಯರಿಗಾಗಿ ಯಾವ ಮಂತ್ರ ಸಾಧನೆಯನ್ನೂ ಹೇಳಿಲ್ಲವಾದ್ದರಿಂದ ಅವರು ಅಶುದ್ಧರಾಗಿಯೇ ಉಳಿಯುತ್ತಾರಂತೆ (೯.೧೮). ಪುರುಷರಿಗೆ ಈ ವಿಧಿಯನ್ನು ಹೇಳಿದ್ದಾರಾದರೂ ಅವರೇಕೆ ಲಂಪಟರಾಗುತ್ತಾರೆಂಬ ಪ್ರಶ್ನೆಯನ್ನು ಮನುವು ಎತ್ತಿಲ್ಲ; ಅದು ಧರ್ಮಶಾಸ್ತ್ರಕಾರನಿಗೆ ಅಪಥ್ಯ. ಮಹಿಳೆಯು ಚಪಲಚಿತ್ತದವಳು, ವ್ಯಭಿಚಾರ ಮನಸ್ಕಳು ಎಂದು ವೇದವೇ ಹೇಳಿದೆಯಂತೆ. ಅದಾವ ವೇದದಲ್ಲಿ ಮನುವು ಇದನ್ನು ಕಂಡನೋ ತಿಳಿಯದು. ಒಟ್ಟಿನಲ್ಲಿ ಅವಳ ವ್ಯಭಿಚಾರವೆಂಬ ಪಾಪಕ್ಕೆ ಪ್ರಾಯಶ್ಚಿತ್ತವೇ ಇಲ್ಲ. "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬುದರ ನಿಜಾರ್ಥ ವೇನೆಂದು ಮನುವಿನ ಈ ಕೊಳಕು ಮನಸ್ಸಿನಿಂದ ನಾವು ತರ್ಕಿಸಬೇಕು. ಮುಂದಿನ ಐದು ಶ್ಲೋಕಗಳನ್ನು ಉದ್ಧರಿಸಲು ಮನಸ್ಸು ಬಾರದು; ಮನೋವೈಕಲ್ಯದಿಂದ ಮೂಡಿರುವಂತಹ ಮಾತುಗಳವು. ಸ್ತ್ರೀಯ ಕರ್ತವ್ಯಗಳಲ್ಲಿ ಮಕ್ಕಳನ್ನು ಹಡೆಯುವುದು ಪ್ರಧಾನವಾದ್ದು; ಆದ್ದರಿಂದಲೇ ಅವಳು ಮನೆಗೆ ದೀಪವಿದ್ದಂತೆ. ಈ ಅರ್ಥದಲ್ಲಿ ಅವಳು ಮತ್ತು ಐಶ್ವರ್ಯ ಎರಡೂ ಒಂದೇ (೯.೨೬ : ಪ್ರಜನಾರ್ಥೇ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ। ಸ್ತ್ರಿಯಃ ಶ್ರೇಯಶ್ಚ ಗೇಹೇಷು ನ ವಿಶೇಷೋಽಸ್ತಿ ಕಶ್ಚನ). ಒಂದೇ ಮಾತಿನಲ್ಲಿ ಹೇಳುವುದಾದರೆ ಮಹಿಳೆಯು ಕ್ಷೇತ್ರವಾದ್ದರಿಂದ ಗೌಣ ಮತ್ತು ಪುರುಷನು ಬೀಜವಾದ್ದರಿಂದ ಪ್ರಧಾನ. ಭತ್ತ (ವ್ರೀಹಿ), ಶಾಲಿಧಾನ್ಯ (ಅದು ಭತ್ತದ ಇನ್ನೊಂದು ರೂಪ), ಹೆಸರು, ಎಳ್ಳು, ಉದ್ದು, ಜವೆಗೋಧಿ, ಬೆಳ್ಳುಳ್ಳಿ, ಕಬ್ಬು ಹೀಗೆ ಯಾವ ಬೀಜವನ್ನಾದರೂ ಕ್ಷೇತ್ರವಾದ ಮಹಿಳೆಯಲ್ಲಿ ಬಿತ್ತಬಹುದು; ಆ ಬೀಜಗಳಿಗನುಗುಣವಾಗಿ ಬೆಳೆ ಬರುತ್ತದೆ (೯.೩೯). ಈ ಸಂಬಂಧದಲ್ಲಿ ಮನು ನೀಡುವ ಒಂದು ಹೀನೋಪಮೆಯನ್ನು ಗುರುತಿಸುವುದು ಅಷ್ಟೇನೂ ಸಮಾಧಾನ ನೀಡಲಾರದು. ಅನ್ಯರ ಗೋವು, ಕುದುರೆ ಒಂಟೆ, ದಾಸಿ, ಎಮ್ಮೆ, ಆಡು, ಕುರಿ, ಇವುಗಳಲ್ಲಿ ಆ ಪ್ರಕಾರಗಳ ಗಂಡುಗಳು ಬೀಜ ಬಿತ್ತಿದರೆ ಮರಿಗಳು ಒಡೆಯನದಾಗುವುದಿಲ್ಲ; ಹಾಗೆಯೇ ಪರಸ್ತ್ರೀಯಲ್ಲಿ ಜನನ ಹೊಂದಿದ ಮಕ್ಕಳು ಸಹ (೯.೪೭). ಆದ್ದರಿಂದ ಹೊಲದೊಡೆಯನಾಗದೆ ಬೇರೆಯವರ ಹೊಲದಲ್ಲಿ ಬೀಜ ಬಿತ್ತಿದರೆ ಅದರ ಬೆಳೆಯು ಬೀಜ ಬಿತ್ತಿದವನಿಗೆ ದಕ್ಕುವುದಿಲ್ಲ. ಹೊಲವು ತನ್ನದಾಗಿದ್ದಾಗ ಮಾತ್ರ ಬೀಜ ಬಿತ್ತುವುದು ಉತ್ತಮ (೯.೪೯). ಪತ್ನಿ ವ್ರತವು ಮನುವಿನ ಮನಸ್ಸಿಗೆ ಇದರಿಂದಾಚೆ ಹೋಗಲಾರದು.

ಗಂಡನಿಂದ ಮಕ್ಕಳನ್ನು ಪಡೆಯದ ಸ್ತ್ರೀಗೆ ಮನು ಕೆಲವು ಆಪದ್ಧರ್ಮಗಳನ್ನು ಹೇಳಿದ್ದಾನೆ (೯.೫೭–೯೪). ಅವನ್ನಿಲ್ಲಿ ವಿಶದೀಕರಿಸುತ್ತಿಲ್ಲ. ಆಸಕ್ತರು ಅದನ್ನು ಗಮನಿಸುವುದು ಸೂಕ್ತವೆನಿಸುತ್ತದೆ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ,
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

Statement about ownership and other particulars about newspaper

**FORM IV**

| | | |
|---|---|---|
| **1. Place of publication** | **:** | **Bengaluru** |
| **2. Periodicity of its publication** | **:** | **Monthly** |
| **3. Printer's Name** | **:** | **Dr. Siddanagouda Patil** |
| **Nationality** | **:** | **Indian** |
| **Address** | **:** | **Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001** |
| **4. Publisher's Name** | **:** | **Dr. Siddanagouda Patil** |
| **Nationality** | **:** | **Indian** |
| **Address** | **:** | **Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001** |
| **5. Editor's Name** | **:** | **Dr. Siddanagouda Patil** |
| **Nationality** | **:** | **Indian** |
| **Address** | **:** | **Navakarnataka Publications (P) Ltd. Embassy Centre, Crescent Road P. B. No. 5159, Bengaluru - 560 001** |
| **6. Name and address of individuals who own the newspaper and partners and shareholders holding more than one percent of the total capital** | **:** | **Navakarnataka Publications (P) Ltd., Embassy Centre, Crescent Road P. B. No. 5159 Bengaluru - 560 001 (Sole Proprietors)** |

**I, Dr. Siddanagouda Patil, hereby declare that the particulars given above are true to the best of my knowledge and belief.**

28-2-2019

Sd/-
Dr. Siddanagouda Patil
Publisher

# ಪ್ರಜೆಗಳು ಪ್ರಭುಗಳೊಂದಿಗೆ ಕದನಕ್ಕಿಳಿಯುವ ಪ್ರಸಂಗ

ಶಾರದ ಗೋಪಾಲ

**ಪಾ**ದಯಾತ್ರೆಯೊಂದೇ ದಾರಿ ಉಳಿದಿತ್ತು ಅವರಿಗೆ ಇಡೀ ರಾಜ್ಯದ ರಾಜಕೀಯ ಪಕ್ಷಗಳ, ಮಾಧ್ಯಮಗಳ ಮತ್ತು ಇತರ ಜನಸಂಘಟನೆಗಳ ಗಮನ ಸೆಳೆಯಲು. ಯಾಕೆಂದರೆ ಸ್ಥಳೀಯವಾಗಿ ಮಾಡುವುದೆಲ್ಲ ಮಾಡಿಯಾಗಿತ್ತು. ಕುಡಿದ ಅಮಲಿನಲ್ಲಿ ತಾಯಿಯನ್ನೇ ಕಡಿಯಲು ಮಗ ಬೆನ್ನಟ್ಟಿದಾಗ ಅಲ್ಲಿನ ಮಹಿಳೆಯರೆಲ್ಲ ಸೇರಿ ಅಂಗಡಂಗಡಿ ನುಗ್ಗಿ ಮದ್ಯದ ಬಾಟಲುಗಳನ್ನು ಒಡೆದು ಹಾಕಿದ್ದರು. ಯಾರ್ಯಾರು ಮದ್ಯದ ಬಾಟಲಿಗಳನ್ನಿಟ್ಟು ಮಾರುತ್ತಾರೆ ಹಿಡಿದು ಪೊಲೀಸರಿಗೆ ದೂರುಕೊಟ್ಟಿದ್ದರು. ಒಮ್ಮೆ ಹಿಡಿದಿದ್ದಷ್ಟೇ, ಮತ್ತೆ ಬಾಟಲಿಗಳು ಬಂದವು, ಕುಳಿತವು, ಮಾರಾಟವಾದವು. ಸರಕಾರವೇ ಹೆಚ್ಚೆಚ್ಚು ಮದ್ಯ ಮಾರಾಟ ಮಾಡಬೇಕೆಂದು ಟಾರ್ಗೆಟ್ ಕೊಟ್ಟು ಟಾರ್ಗೆಟ್ ತಲುಪದ ಅಬಕಾರಿ ಅಧಿಕಾರಿಗಳಿಗೆ ದಂಡ ವಿಧಿಸುತ್ತಿರುವುದರಿಂದ ಲೈಸೆನ್ಸ್ ಇರದ ಅಂಗಡಿಗಳಲ್ಲೂ ಮದ್ಯವನ್ನು ಇಟ್ಟು ಮಾರಾಟ ಮಾಡಲು ಸರಕಾರದ್ದೇ ಕುಮ್ಮಕ್ಕಿದೆ ಎಂದು ಜನಕ್ಕೆ ಅರಿವಾಗಲು ಬಹಳ ದಿನ ಬೇಕಾಗಲಿಲ್ಲ.

ನಮ್ಮ ಪಂಚಾಯತ್ ರಾಜ್ ಕಾನೂನಿನಲ್ಲಿ ವಿಶೇಷ ಗ್ರಾಮ ಸಭೆಗಳಿಗೆ ಅವಕಾಶಗಳಿವೆ. ಮಹಿಳಾ ಗ್ರಾಮ ಸಭೆಗಳನ್ನು ಮಾಡಬೇಕೆಂದು ೨೦೧೫ರಲ್ಲಿಯೇ ಸರಕಾರ ಆದೇಶ ಮಾಡಿದೆ. ಗ್ರಾಮ ಸಭೆಗಳ ಠರಾವಿಗೆ ಸುಗ್ರೀವಾಜ್ಞೆಗಿರುವಷ್ಟೇ ಮಹತ್ವವಿದೆ ಎಂಬುದನ್ನು ತಿಳಿದುಕೊಂಡ ಜನರು ಅದಕ್ಕೆ ತಯಾರಾದರು. ಜಿಲ್ಲೆ ಜಿಲ್ಲೆಗಳಲ್ಲಿ ವಿಶೇಷ ಮಹಿಳಾ ಗ್ರಾಮ ಸಭೆಗಳಿಗೆ ನೂರಾರು ಜನರ ಸಹಿಯುಳ್ಳ ಮನವಿಗಳು ಹೋದವು. ಆದರೆ ಪಂಚಾಯತಿಗಳು ಆ ಅರ್ಜಿಗಳನ್ನೊಂದೂ ಪರಿಗಣಿಸದೆ ಕಾನೂನನ್ನು ಭಂಗ ಮಾಡಿದವು. ಯಾವೊಂದು ಜಿಲ್ಲೆಯಲ್ಲಿಯೂ ವಿಶೇಷ ಗ್ರಾಮ ಸಭೆಯನ್ನು ಕರೆಯಲೇ ಇಲ್ಲ. ಆ ಮೂಲಕ ಜನರ ಧ್ವನಿ ಹೊರಬಾರದಂತೆ ಬಿಗಿ ಬೀಗವನ್ನೇ ಹಾಕಿ ಜಡಿದು ಬಿಟ್ಟವು. ಬೆಳಗಾವಿ ಜಿಲ್ಲೆಯಲ್ಲಿ ಆದ ಒಂದು ಗ್ರಾಮ ಸಭೆಯಲ್ಲಿ (ಬೀಡಿ ಪಂಚಾಯತಿ, ಖಾನಾಪುರ ತಾಲೂಕು) ಮಾತ್ರ ಸಾವಿರಾರು ಜನರು ಒಂದಾಗಿ ತಮ್ಮ ಪಂಚಾಯತಿಯ ವ್ಯಾಪ್ತಿಯಲ್ಲಿ ಮದ್ಯ ಮಾರಾಟದ ಅಂಗಡಿಗಳನ್ನೆಲ್ಲ ಎತ್ತಂಗಡಿ ಮಾಡಬೇಕೆಂದು ಸರ್ವಾನುಮತದ ನಿರ್ಣಯಕೊಟ್ಟಿದ್ದರ ಪರಿಣಾಮವಾಗಿ ಮದ್ಯದ ಅಂಗಡಿಗಳು ಬೀಗ ಹಾಕಿಸಿಕೊಂಡವು. ಕುಡಿತವನ್ನು ಪ್ರೋತ್ಸಾಹಿಸುವ ಹಿತಾಸಕ್ತಿಗಳ ಸತತ ಪ್ರಯತ್ನದ ಮಧ್ಯೆಯೂ ಗ್ರಾಮ ಸಭೆಯ ಠರಾವು ಮದ್ಯದಂಗಡಿಗಳನ್ನು ದೂರವಿಡುವಲ್ಲಿ ಇಂದಿನವರೆಗೂ ಯಶಸ್ವಿಯಾಗಿವೆ.

ಕುಟುಂಬಗಳನ್ನು ನಾಶ ಮಾಡುವ ಮದ್ಯ ಮಾರಾಟ ಬೇಡವೆಂದು ಮಹಿಳೆಯರೆಲ್ಲ ಒಕ್ಕೊರಲಿನಿಂದ ಕೇಳಿಕೊಳ್ಳುತ್ತಿದ್ದರೂ, ಕಾಯಿದೆಯ ಪ್ರಕಾರ ಅಂಗಡಿಗೆ ಬೀಗ ಹಾಕಿಸಿದರೂ ಮುಚ್ಚು ಮರೆಯಲ್ಲಿ ಮಾರಾಟ ಮಾಡುವ ಧಾರ್ಷ್ಟ್ಯ ಈ ಮದ್ಯದವರದ್ದು. ಚಿಕ್ಕ ಚಿಕ್ಕ ಬೀಡಾ, ಪೆಪ್ಪರ್ ಮಿಂಟ್ ಅಂಗಡಿಗಳಲ್ಲೂ, ಮನೆ ಮನೆಗಳಲ್ಲೂ ಬಾಟಲಿಗಳು ತುಂಬಿಕೊಳ್ಳತೊಡಗಿದಾಗ, ಅದಕ್ಕೆ ಸರಕಾರದ ಕುಮ್ಮಕ್ಕು ಇದೆಯೆಂದು ಗೊತ್ತಾದಾಗ ಇನ್ನುಳಿದದ್ದೊಂದೇ ಮಾರ್ಗ, ಸೀದಾ ಹೋಗಿ ವಿಧಾನಸೌಧದಲ್ಲಿ ಕುಳಿತು ರಾಜ್ಯವಾಳುತ್ತಿರುವ ಅವರನ್ನೇ ಕೇಳಿ ಕೀಲಿ ಹಾಕಿಸುವುದು ಎಂದು ಹೊರಟರು ಮಹಿಳೆಯರು. ಅತ್ತ ರಾಯಚೂರು, ಕೊಪ್ಪಳಗಳಿಂದ, ಬಳ್ಳಾರಿ ಬೀದರಿನಿಂದ, ಇತ್ತ ಬೆಳಗಾವಿ, ಹಾವೇರಿಯಿಂದ, ಧಾರವಾಡದಿಂದ, ಉತ್ತರ ಕರ್ನಾಟಕವೇ ಗುಳೆ ಎದ್ದಂತೆ ಹೊರಟಿತು ಬೆಂಗಳೂರಿನತ್ತ.

ನಡೆದರು ನಡೆದರು ತಾಯಂದಿರು. ಬಿರು ಬಿಸಿಲ ಲೆಕ್ಕಿಸದೆ, ರಾತ್ರಿಯ ಕೊರೆವ ಚಳಿಯ ಲೆಕ್ಕಿಸದೆ. ರಾತ್ರಿ ತಂಗಲು ಭೂಮಿಯೇ ಹಾಸಿಗೆ, ಆಕಾಶವೇ ಹೊದಿಕೆ. ನೀರು ಸಿಕ್ಕಲ್ಲಿ ಜಳಕ, ತಿನ್ನಲು ಸಿಕ್ಕಲ್ಲಿ ಊಟ. ಒಂದು ನೀರು ಕೇಳಲಿಲ್ಲ, ಊಟ ಕೇಳಲಿಲ್ಲ. ಯಾರನ್ನೂ ಏನೂ ಕೇಳಲಿಲ್ಲ. ಅವರಿಗೆ





ಕೇಳುವುದು ಒಂದೇಇತ್ತು, ಕೇಳುವುದು ಒಬ್ಬರಿಗೇ ಇತ್ತು. ನಾಡಪ್ರಭುವಿಗೆ, ನಮ್ಮ ಮಕ್ಕಳೆಲ್ಲ ಮದ್ಯಕ್ಕೆ ಬಲಿಯಾದಾಗ ನೀ ಆಳುವೆ ಯಾರನ್ನು ಎಂದು.

ಇವರನ್ನು ಯಾರೂ ಕೇಳಲಿಲ್ಲ ಸಹಾ. ಯಾಕೆ ಕೇಳುತ್ತಾರೆ? ಕೇಳುವ ನೈತಿಕ ಧೈರ್ಯ ಯಾರಿಗಿದೆ? ಇಂದು ಭಾರತಾಂಬೆಯ ಮಕ್ಕಳ ಪಕ್ಷದವರಿಗೂ ಸಂಜೆಯಾದರೆ ಕುಡಿಯಲು ಬೇಕು. ಗಾಂಧೀಜಿಯ ಮೇಲಾಣೆ ಮಾಡುವವರಿಗೂ ಸಂಜೆಯಾದರೆ ಕುಡಿತ ಬೇಕು, ಹುಲ್ಲು ಹೊತ್ತ ಮಹಿಳೆಯ ಪಕ್ಷದವರಿಗೂ ತೀರ್ಥವಿಲ್ಲದೆ ಸಂಧ್ಯಾವಂದನೆಯಿಲ್ಲ. ಎಡ ಪಕ್ಷಗಳಾದರೂ ಬಂದವೇ? ಯಾವ ಪಕ್ಷದವರೂ ಬರಲಿಲ್ಲ, ಯಾಕೆ ಹೊರಟಿರಿ ತಾಯಿ ಎಂದು ಕೇಳಲು. ಪ್ರಭುವಿಗೆ ಸುದ್ದಿಯನ್ನು ಒಯ್ದು ಮುಟ್ಟಿಸುವ ಹೊಣೆ ಹೊತ್ತವರು? ಅವರೂ ಹತ್ತಿರ ಸುಳಿಯಲಿಲ್ಲ. ಯಾಕೆಂದರೆ ಅವರಿಗೂ ಸಂಜೆಯಾದರೆ ಬೇಕು ಕುಡಿಯಲು. ನಕ್ಕರು. ಯಾಕೆ ಹೋಗ್ತೀರಿ ಬೆಂಗಳೂರಿಗೆ, ಯಾಂವ ಕೇಳ್ತಾನೆ ನಿಮ್ಮ ಅಹವಾಲು? ಯಾರು ಮಾಡ್ತಾರೆ ಮದ್ಯ ನಿಷೇಧ ಎಂದು.

ಇಂದು ಮಧ್ಯಮ ವರ್ಗದ ಕುಟುಂಬಗಳಲ್ಲೂ ಕೂಡ ಮದ್ಯ ಮನೆ ಹೊಕ್ಕಿದೆ. ಹಾಗಾಗಿ ಮದ್ಯ ನಿಷೇಧ ಉಚ್ಚ, ಮಧ್ಯಮ ವರ್ಗಕ್ಕೂ ಬೇಕಾದ್ದಲ್ಲ. ಕೈಯಲ್ಲಿ ಹಣ ಕುಣಿಯತೊಡಗಿದಂತೆ, ಹೆಚ್ಚೆಚ್ಚು ಪಬ್, ಬಾರ್ ರೆಸ್ಟೋರೆಂಟುಗಳಾದಂತೆ ಮದಿರಾಪಾನ ಸಹಜವೆನಿಸುವಷ್ಟು ಹತ್ತಿರವಾಗುತ್ತಿದೆ. ಆದರೆ ಒಳ್ಳೆಯ ಆಹಾರ, ಆರೋಗ್ಯ ಉಳ್ಳವ ಕುಡಿಯುವುದಕ್ಕೂ ಹಸಿವೆಯಲ್ಲಿದ್ದವ ಕುಡಿಯುವುದಕ್ಕೂ ಬಹಳ ವ್ಯತ್ಯಾಸವಿದೆ.

ಈ ನಾರಿಯರಿಗೆ ಮಾತ್ರ ಮದ್ಯ ನಿಷೇಧ ಆಗಲೇಬೇಕು. ಗಂಡ, ಇಬ್ಬರು ಮಕ್ಕಳು ಇಬ್ಬರು ಅಳಿಯಂದಿರನ್ನು ಮದ್ಯಕ್ಕೆ ಬಲಿಗೊಟ್ಟ ಅಜ್ಜಿಗೆ ಮದ್ಯ ನಿಷೇಧ ಬೇಕಾಗಿದೆ. ಎಳೆ ಮಗುವಿಗೂ ಕುಡುಕ ಗಂಡ ಮದ್ಯ ಕುಡಿಸಿ ಮಜಾ ನೋಡುತ್ತಿದ್ದುದನ್ನು ಅತ್ತು ಹಂಚಿಕೊಳ್ಳುವ ತಾಯಿಗೆ ಮದ್ಯ ನಿಷೇಧ ಬೇಕಾಗಿದೆ. ಕುಡುಕ ಮಗನ ಹೊಡೆತ ತಪ್ಪಿಸಿಕೊಳ್ಳಲು ರಾತ್ರಿಯೆಲ್ಲ ಕಬ್ಬಿನ ಗದ್ದೆಯಲ್ಲಿ ಅಡಗಿ ಕುಳಿತಿದ್ದ ತಾಯಿಗೆ ಬೇಕಾಗಿದೆ ಮದ್ಯ ನಿಷೇಧ. ಹಗಲು ರಾತ್ರಿಯೆನ್ನದೆ ಮದ್ಯದ ದಾಸನಾಗಿ ತನ್ನನ್ನು ಸಂಶಯದಿಂದ ನೋಡುವ, ಅವಮಾನಿಸುವ, ದನ ಬಡಿದಂತೆ ಬಡಿಯುವ ಗಂಡನ ಯುವ ಹೆಂಡತಿಗೆ ಸಂಪೂರ್ಣ ಮದ್ಯ ನಿಷೇಧ ಬೇಕಾಗಿದೆ.

ಎಲ್ಲರ ದಿವ್ಯ ನಿರ್ಲಕ್ಷ್ಯದ ನಡುವೆಯೇ ನಡೆದು ಬಂದರು ನಾರಿಯರು ಬೆಂಗಳೂರಿಗೆ, ತಣ್ಣಗೆ, ಸುನಾಮಿಯ ಅಲೆಯಂತೆ. ಅವರ ಸಂಖ್ಯೆ ನೋಡಿ, ಮುಗಿಯದ ಸಾಲನ್ನು ನೋಡಿ, ಬೆಚ್ಚಿಬಿದ್ದಿತು ಬೆಂಗಳೂರು. ಓಡಿ ಬಂದರೆಲ್ಲರೂ. ಏನು, ಏನಾಯಿತು, ಯಾಕೆ ಬಂದಿರಿ ಕೇಳಲು. ಆದರೆ ಬರಲಿಲ್ಲ ನಮ್ಮ ಸರಕಾರ. ಹಿಂದಿನ ಸರಕಾರವೂ ಇಲ್ಲ, ಇಂದಿನ ಸರಕಾರವೂ ಬರಲಿಲ್ಲ, ಮುಂದಿನ ಸರಕಾರವೂ ಬರಲ್ಲ. ಕಡೆಗೆ ಇನ್ನೇನು ವಿಧಾನಸೌಧಕ್ಕೆ ಮುತ್ತಿಗೆ ಹಾಕದೆ ಇವರು ಹಿಂದೆ ಹೆಜ್ಜೆ ಇಡುವವರಲ್ಲ ಎಂದು ಅರಿವಾದಾಗ ಮಾತಿಗೆ ಕರೆಯಿತಾದರೂ ವಂಚನೆಯ ನಡೆಯೇ ಅದಾಗಿತ್ತು. ಕರೆಸಿ ಅವಮಾನಿಸಿತೇ ಹೊರತು ನಡೆದು ಬಂದವರನ್ನು ಉಪಚರಿಸಲಿಲ್ಲ. ತನ್ನ ಆರ್ಥಿಕ ಲೆಕ್ಕಾಚಾರದ ಹಳೆಯ ರೀಲನ್ನೇ ಮತ್ತೆ ಬಿಚ್ಚಿಟ್ಟಿತೇ ಹೊರತು ಸಾಮಾಜಿಕ ದುರಂತದ ಇವರ ಕತೆಗಳನ್ನು ಕೇಳಲಿಲ್ಲ. ತಾಯಂದಿರ ಕತೆಗಳನ್ನು ಕೇಳಿದ್ದರೆ ಅವರಿಗೇ ಕಷ್ಟವಿತ್ತು, ಹಾಗಾಗಿ ಹೆಂಡದ ದೊರೆಗಳು ಹೇಳಿಕೊಟ್ಟಿದ್ದಷ್ಟನ್ನೇ ಬಾಯಿಪಾಠ ಒಪ್ಪಿಸಲು ಕುಳಿತಿದ್ದವರು ಸರಕಾರಿ ಜನ.

ಕಷ್ಟವಲ್ಲದಿನ್ನೇನು? ಇಂದು ಮದ್ಯ ನಿಷೇಧವೆನ್ನುತ್ತಾರೆ ಈ ಮಹಿಳೆಯರು, ನಾಳೆ ಶೇಕಡಾ ೩೩ರಷ್ಟು ಅನ್ನುತ್ತಾರೆ. ಮತ್ತೆ ಶೇಕಡಾ ೫೦ರಷ್ಟು ಸೀಟು ಬೇಕು ಎನ್ನುತ್ತಾರೆ. ಮಹಿಳಾಪರ ಬಜೆಟ್ ಅನ್ನುತ್ತಾರೆ. ಭೂಮಿ ಕೊಡಿ ಎನ್ನುತ್ತಾರೆ, ಸಮಾನತೆ ಬೇಕು ಎನ್ನುತ್ತಾರೆ. ಇವರು ಕೇಳಿದ್ದನ್ನೆಲ್ಲ ಕೊಡುತ್ತ ಹೋದರೆ ಅಭಿವೃದ್ಧಿ ಮಾಡುವುದೆಂತು? ಆಗಲೇ ಓಟು ಮತ್ತು ಟ್ಯಾಕ್ಸಿನ ಲೆಕ್ಕ ಕೇಳುತ್ತಿರುವ ಈ ಅನಕ್ಷರಸ್ಥರು ಶಿಕ್ಷಣ ಸಿಕ್ಕಿತೆಂದರೆ ಇನ್ನೇನೇನು ಕೇಳುತ್ತಾರೋ? ಈಗಲೇ ಮೊಟಕಿ, ತಿರುವಿ ಹಿಂದಿರುಗಿ ಕಳಿಸಿದರೆ ಉಳಿದೇವು.

ಪಂಚಾಯತಿಯ ಪ್ರತಿನಿಧಿಯಿಂದ ಹಿಡಿದು ಜಿಲ್ಲಾ ಪಂಚಾಯತಿ, ಶಾಸನಸಭೆ, ಸಂಸತ್ತಿನವರೆಗೂ ಆರಿಸಿ ಹೋದವರೆಲ್ಲ ತಮ್ಮನ್ನು ಆರಿಸಿದವರನ್ನು ದೂರ ತಳ್ಳಿದ್ದಾರೆ. ಮಾತಾಡಿ ಸಂಬಂಧದವರನ್ನು ಕಾಯಿಸಿದ್ದಾರೆ, ಅವಮಾನಿಸಿದ್ದಾರೆ, ಕತ್ತು ಹಿಡಿದು ಆಚೆ ತಳ್ಳಿದ್ದಾರೆ. ಪ್ರಜಾಪ್ರಭುತ್ವದ ದುರಂತವಲ್ಲವೇ ಇದು? ಮತ ಕೊಟ್ಟು ಆರಿಸಿದ್ದೇವೆಂದುಕೊಳ್ಳುವ ನಾವು, ಆರಿಸಿದ ಪ್ರತಿನಿಧಿಗಳ ಜೊತೆ ಸದಾ ಜಗಳಾಡುತ್ತಲೇ ಇರಬೇಕಾದ ಪರಿಸ್ಥಿತಿ. ಆಯ್ಕೆಯಾದ ಕ್ಷಣದಲ್ಲೇ ಏರಿ ಬಂದ ಏಣಿಯನ್ನು ಒದ್ದು ಹಾಕುವ ಪ್ರತಿನಿಧಿಗಳನ್ನು ಮತ್ತೆ ಭೂಮಿಗಿಳಿಸಲು ಪ್ರಜೆಗಳು ಸದಾ ಕೆಳಗೆ ನಿಂತು ಹೋರಾಡುತ್ತಲೇ ಇರಬೇಕಾಗಿದೆಯಲ್ಲ?

**ಶಾರದ ಗೋಪಾಲ**
ನಂ. ೫೭, ತೇಜಸ್ವಿನಗರ, ಧಾರವಾಡ – ೫೮೦ ೦೦೨
ಇಮೇಲ್ : sharadapooja@gmail.com



ತಿಂಗಳ ಕಥೆ

# ಹೂವಿನೆಳೆಯ ಹೂ

ಮನಸ್ಸು ತುಂಬಾ ಖಿನ್ನವಾಗಿತ್ತು. 'ನಾನು ಈ ರೀತಿ ನಡೆದುಕೊಂಡದ್ದು ಸರಿಯೇ?' ರಾತ್ರಿಯಿಡೀ ನಿದ್ದೆ ಬಂದಿರಲಿಲ್ಲ. ಮುಂಜಾವಿನ ಹೊತ್ತಾಳಿಯ ಜೊಂಪಿನಲ್ಲಿಯೂ ಅರಿಯದ ಬಡಬಡಿಕೆಗೆ ಮತ್ತಿಷ್ಟು ಮನಸ್ಸು ಕ್ಷೋಭೆಗೆ ಒಳಗಾಗಿತ್ತು.

'ನೀ ನಿನ್ನ ನಾದಿನಿಯವರಿಗೆ ಪಾಲು ಕೊಡ್ತೇನಮಾ?' ಅವ್ವ ಬಹಳ ಆಕ್ರೋಶದಿಂದ ಕೇಳಿದ್ದಳು. ತೂರಿ ತೂರಿ ಹೊಡೆಯಲು ಮೈ ಮೇಲೆ ಬಂದದ್ದು ಕಂಡು ಕ್ಷಣಗಳ ಕಾಲ ದಂಗಾಗಿ ಹೋಗಿದ್ದೆ. ಅವಳ ಆರ್ಭಟಕ್ಕೆ ಗಾಬರಿಯ ಮುಸುಕು ಹಾಕಲು ಅವಳಲ್ಲಿಯ ಆಕ್ರೋಶ ದಿಗಿಲು ಹುಟ್ಟಿಸುವುದಾಗಿತ್ತು.

ಭೀಮಕಾಯದ ಅವ್ವನ ಅದುರುವ ತುಟಿಗಳು, ಹುಬ್ಬುಗಳೆರಡು ಕೂಡಿಕೊಂಡು ಹಣೆಯ ಮೇಲೆ ಸಾಲು ಸಾಲಾಗಿ ಮೂಡಿದ ಗೆರೆಗಳಲ್ಲಿ ಅವಳೆಲ್ಲಾ ಆಕ್ರೋಶ 'ನಿನ್ನವ್ವ ಸತ್ತಾಳೆಂದು ಬಗೆದು ಮಣ್ಣು ಹಾಕಿ ಹೋಗು. ಈ ಮನೆ ಬಾಗಿಲು ಮತ್ತೆಂದಿಗೂ ತುಳಿಬ್ಯಾಡ' ಎಂಬುದರಲ್ಲಿ ಅವಳ ನಂಬುಗೆಯ ಬದುಕಿನ ಬೇರುಗಳೇ ಹಿಡಿದು ಬಲವಾಗಿ ನಾನು ಅಲ್ಲಾಡಿಸುತ್ತಿದ್ದೇನೆಂಬುದೆ ಆಗಿತ್ತು!

'ಇಲ್ಲ ಇಲ್ಲ, ನಾನ್ಯಾಕೆ ನಿನಮೇಲೆ ಮಣ್ಣು ಹಾಕಲಿ. ಈ ಅಪ್ಪನ ಮನೆಯ ಮಾಳಿಗೆಯ ಮೇಲಿಂದ ನನಗೆ ಕೆಳಗೆ ತಬ್ಬಿ ಬಿಡು. ನಿನ್ನ ಅಳಿಯನಿಗೆ, ಈ ಸಮಾಜಕ್ಕೆ ಕಾಲು ಜಾರಿ ಬಿದ್ದಾಳೆಂದು ಹೇಳಿ ಬಿಡು. ನಿನ್ನ ಮನೆಗೆ ನಾನು ಬರದಂತೆ ಆಗುತ್ತದೆಯಲ್ಲಾ? ನಿನಗೆ ನಿನ್ನ ಮಗಳು ಹೆಚ್ಚೋ ನನ್ನಪ್ಪನ ಆಸ್ತಿ ಹೆಚ್ಚೋ?' ಎಂಬ ಸವಾಲು ತಕ್ಷಣವೆ ಒಡ್ಡಿದ್ದೆ.



'ನಿನಗೇನು ಕಮ್ಮಿ ಇದೆ ಅಂತ ಪಾಲು ಕೇಳ್ತಾ ಇದ್ದಿ?' ಮತ್ತೆ ಅವ್ವನದು ಅದೇ ಹೂಂಕಾರ.

'ನನಗೆ ಕಮ್ಮಿ ಇದೆ ತಾತ್ಯಾನ ಪ್ರೀತಿ .... ನನಗೆ ಕಮ್ಮಿ ಇದೆ ತವರ್ಮನೆಯ ಆದರ – ನಿನ್ನಿಂದ ಇರಬೇಕಾದ ಕಕುಲೋತಿ...

ನಮ್ಮಿಬ್ಬರ ಜುಗಲ–ಬಂದಿಯ ಜಗಳದಲ್ಲಿ ಅಣ್ಣ ಅತ್ತಿಗೆ ಬಹಳ ಖುಷಿಯಿಂದ ನೋಡುತ್ತಿದ್ದರು. ಅವ್ವ ನನ್ನ ಪಕ್ಷದಲ್ಲಿದ್ದಾಳೆ ನಿನ್ನ ಕಡೆ ಕಟಗಿಯಿಂದ ನೀರು ಮುಟ್ಟಿ ಹೊರಟು ಹೋಗುವ ಅಣ್ಣ, ತಂದೆಯ ಸ್ಥಾನದಲ್ಲಿ ಇದ್ದುಕೊಂಡು ಯಾವ ಕರ್ತವ್ಯ ನಿರ್ವಹಿಸಿದ್ದಾನೆಂಬುದು ಹೇಳು? ತವರ್ಮನೆಗೆ ಬಂದು ಗಂಡನೂರಿಗೆ ಹೋಗುವಾಗಲೆಲ್ಲಾ ಕಳುಹಿಸಲು ಬಂದವ, ರೇಲ್ವೆ, ಬಸ್, ಕೌಂಟರನಲ್ಲಿ ನಿಂತುಕೊಂಡು ಟಿಕೇಟ್‌ಗಾಗಿ ನನ್ನಲ್ಲೆ ದುಡ್ಡು ಕೇಳಿ ಪಡೆಯುವ ಈತ ತವರ್ಮನೆಯ ಕರ್ತವ್ಯ ನಿಭಾಯಿಸುತ್ತಿದ್ದಾನಾ? 'ತಾತ್ಯಾ' ಇದ್ದರೆ ಬಸ್ ಟಿಕೇಟ್ ಹಣ ನನ್ನಲ್ಲಿ ಪಡೆಯುತ್ತಿದ್ದರಾ? ಅವ್ವಗೆ ಪ್ರಶ್ನಿಸಿ ಅವಳ ಬಾಯಿಯೇನೋ ಮುಚ್ಚಿಸಲಾಯಿತು. ಆದರೆ ಅಣ್ಣನಿಗೆ ನಾನಾಡಿದ ಮಾತುಗಳು ಮುಜುಗರದವು, ಕಿರಿಕಿರಿಯವು ಆಗಿದ್ದವು ಎಂಬುದು ಅವನ ಅಸಹನೆಯ ಮಾತುಗಳಲ್ಲೆ ವ್ಯಕ್ತವಾಗುತ್ತಿತ್ತು.

ಹೆಣ್ಣು ಗಂಡಿನ ಮಧ್ಯೆ ಎಷ್ಟೊಂದು ತಾರತಮ್ಯ? ಅವ್ವನೇ ಈ ರೀತಿ ಭೇದ ಮಾಡಲು ನಿಂತಾಗ ಅಣ್ಣನಿಗಾದರು ಏನನ್ನಬೇಕು? ಇದು ಅವನಿಗೆ ಬೇಕಾದುದೆ ಆಗಿತ್ತು. ಅಣ್ಣನ ಮಾತುಗಳೆಂದರೆ ಅವ್ವಗೆ ವೇದವಾಕ್ಯ. ಸದಾ ಅವನ ಪಕ್ಷವೇ ವಹಿಸುವುದು, ಅವನಂತೆಯೆ ಮಾತಾಡೋದು .... ಯೋಚಿಸೋದು ...... ಮಾಡುವ ಅವ್ವಗೆ ಒಬ್ಬಳು ಮಗಳಿದ್ದಾಳೆ ಎಂಬುದೆ ಮರೆತುಹೋಗಿ ತನ್ನ ಪಾಲಿಗೆ ಮಸುಕು ಆಗುತ್ತಿರುವ ತವರ್ಮನೆಯಲ್ಲಿ ನಗಣ್ಯ ಆಗುತ್ತಿರುವುದಕ್ಕೆ ತುಂಬಾ ಖೇದವಾಗುತ್ತಿತ್ತು. ತನ್ನ ಮೇಲಿನ ಕಕುಲಾತಿ, ಪ್ರೀತಿ ಅವ್ವ ಕಳಚಿಕೊಳ್ಳುತ್ತಾ ಮಗ ಸೊಸೆ ಮೊಮ್ಮಕ್ಕಳ ಮೇಲೆಯೆ ಅದನ್ನು ಕೇಂದ್ರೀಕರಿಸುತ್ತಿದ್ದುದು ಮನಸ್ಸಿಗೆ ಬಹಳ ಸಂಕಟವೊಡ್ಡುತ್ತಿತ್ತು.

ತವರ್ಮನೆಯ ಇಂತಹ ನೆನಪುಗಳಲ್ಲಿ ಅಣ್ಣನ ಪಕ್ಷಪಾತಿಯಾಗಿಯೆ ಅವ್ವ ಸದಾ ಬಂದು ನಿಲ್ಲುತ್ತಿದ್ದಳು. ಅಣ್ಣನ ಮಕ್ಕಳ ಮೇಲಿರುವ ಮಮತೆಯಷ್ಟು ತನ್ನ ಮಕ್ಕಳ ಮೇಲೂ ಇರಬೇಕೆಂದು ತಾನು ಬಯಸುವುದಕ್ಕೆ ಯಾವತ್ತು ತಣ್ಣೀರೆರೆಯುತ್ತಿದ್ದಳು. ಅಣ್ಣನ ಮಗಳ ಮದುವೆಗೆ ಐದು ತೊಲ ಬಂಗಾರದ ಬಳೆಗಳ ಉಡುಗೊರೆ ಕೊಟ್ಟವಳು ತನ್ನ ಮಗಳ ಮದುವೆಯಲ್ಲಿ ಕೊಡದಿರುವುದು ತುಂಬಾ ಬೇಜಾರು ತರಿಸುವುದಲ್ಲದೆ ತವರ್ಮನೆ ಮರೆಯುವಂತೆ ಮಾಡುವ ಸಂಗತಿ ಇದಾಯಿತು. ನನ್ನ



ಅಲ್ಲ, ಎಂಬ ಹಾವಭಾವ ಅಣ್ಣನದಾಗಿತ್ತು. ಈ ಮಧ್ಯ 'ತಾಯಿ' ನಾ ಎಂದಾದರು ನಿಮ್ಮ ಮನಸ್ಸು ನೋಯಿಸಿದೆನಾ? 'ಆಇ' ಯವರ ಮನಸ್ಸು ಯಾಕೆ ನೋಯಿಸ್ತಿರಿ? ನನ್ನವ್ವನ ಪರ ವಕಾಲತ್ತು ವಹಿಸಿಕೊಂಡ ಅತ್ತಿಗೆ ಮಧ್ಯದಲ್ಲಿ ಪ್ರವೇಶಿಸಲು –

ನಿಮ್ಮ ಅಕ್ಕ ತಂಗಿಯಂದಿರಿಗೆ ಮಗಳ ಮದುವೆಗಾಗಿ ವಾರದ ಮುನ್ನವೆ ಕರೆಯಿಸಿ ಕೊಂಡಿದಿರಿ. ಆದರೆ ಈ ಮನೆಯ ಹಿರಿಯ ಹೆಣ್ಣು ಮಗಳಾದ ನನಗೆ ಕರೆಯಿಸಿ ಕೊಂಡಿದಿರಾ? ಫೋನ್ ಆದ್ರು ಮಾಡಿ ಹೇಳಿದಿರಾ? ನನ್ನ ಪ್ರಶ್ನೆಗೆ ತಬ್ಬಿಬ್ಬಾಗಿ ನೀವು ಸದಾ ಕೆಲಸದಲ್ಲಿರುತ್ತೀರಿ 'ತಾಯಿ' ಅದ್ಕೇ ಫೋನ್ ಮಾಡ್ಲಿಲ್ಲ. ಅದು ನಿಮ್ಮಣ್ಣನ ಕರ್ತವ್ಯ ವಲ್ಲವೇ? ನಿಮ್ಮಣ್ಣಗೆ ಕೇಳಿ ಎನ್ನುತ್ತಲೆ ಜಾರಿಕೊಂಡಳು. ಆದರೆ ಅವ್ವ 'ಯಾರ್ಮನೆಯವರು ಅವರು ಆದ ಮೇಲೆ ಇದ್ಕ್ಯಾಕ್ ಇಷ್ಟು ರಂಪಾ ಮಾಡ್ತಾಇದ್ದಿ? '......' ಇನ್ನು ಏನೇನೋ ಹೇಳ್ತಾ ಇದ್ದಾಗಲೆ ವೈನಿ ಅದ್ಕೇ ನಾ 'ಆಇ' ಗೆ ಕೇಳ್ತಿರೋದು ನಿಮಗಲ್ಲ. ನನ್ನ ಅಣ್ಣನಿಗೂ ಅಲ್ಲ. ನನ್ನ ಆಇ–ಬಾಬಾನ ಆಸ್ತಿಗೆ ನಾನೂ ವಾರಸುದಾರಳೆ. ನನ್ನಣ್ಣನೆ ಒಬ್ಬನಲ್ಲ. ಹೇಳಿ? ಈ ಮನೆಯ ಹೆಣ್ಣು ಮಗಳು ನಾನಲ್ಲ ಅಂತ ಹೇಳಿ. ಹಿಂತಿರುಗಿಯು ನೋಡಲ್ಲ ನಾನು. ಅತ್ತಿಗೆ ತೆಪ್ಪಗಾದಳು. ಅವ್ವನ ಬಾಯಿಂದ ಮಾತುಗಳೆ ಹೊರಡಲಿಲ್ಲ. ಅಣ್ಣ ಗೊಂದಲದಲ್ಲಿ ಬಿದ್ದ. ನನ್ನ ತಂಗಿ ಈ ಮಟ್ಟಕ್ಕೆ ಬೆಳೆದಿದ್ದಾಳಾ? ಎಂಬ ಆಶ್ಚರ್ಯ ಅವನದಾಗಿತ್ತು.

ಅವ್ವ ಇರುವವರೆಗೆ ಮಾತ್ರ ತವರ್ಮನೆ. ಹಾಲುಂಡ ತವರಿನ ಬಾಗಿಲು ತುಳಿಯ ಬೇಡೆಂದು ಹಾಲುಣ್ಣಿಸಿದವಳೆ ಹೇಳುವುದೆಂದರೆ ಎಂತಹ ಆಘಾತ! ಅಣ್ಣನಿಗೂ ಇದೇ ತಾನೇ ಬೇಕಾಗಿರುವುದು.

**ಶಿವಕುಮಾರ ನಾಗವಾರ**

ಮಗಳು ಸಹ ಅವ್ವಗೆ ಮೊಮ್ಮಗಳಲ್ಲವೆ? ಮಗಳ ಮಗಳಿಗಿಂತ ಮಗನ ಮಗಳ ಮೇಲೆಯೆ ಇರುವ ಅವ್ವನ ಮಮತೆ ತನ್ನನ್ನು ತನ್ನ ಮಕ್ಕಳನ್ನು ತವರ್ಮನೆಯಿಂದ ದೂರಕ್ಕೆ ಬೀಸಾಡಲ್ಪಟ್ಟಿದ್ದು ದುಃಖ ತರುವುದರ ಜೊತೆಗೆ ತವರ್ಮನೆಯ ಕಕುಲಾತಿ ಎದೆಯಿಂದ ಹಾರಿಹೋಗಿತ್ತು. ಇಂತಹ ಅವ್ವನ ಮಗಳಾದ ತನಗೆ ಅಪ್ಪ ಮಾತ್ರ ಇದಕ್ಕೆ ತುಂಬಾ ತದ್ವಿರುದ್ಧವಾಗಿದ್ದರು.

ಅಪ್ಪ ಅದೆಂತಹ ಅದಮ್ಯ ಪ್ರೀತಿಯ ಧಾರೆ ತನಗೆ ಎರೆಯುತ್ತಿದ್ದರು. 'ಮಗಾ, ನೀವಿಬ್ಬರು ನನಗೆ ಎರಡು ಕಣ್ಣುಗಳಿದ್ದಂತೆ. ಯಾವ ದೃಷ್ಟಿಯು ತನಗೆ ಮೇಲಲ್ಲ ಕೆಳಗಲ್ಲ. ಈ ಎರಡೂ ಕಣ್ಣುಗಳ ನೋಟ ನನಗೆ ಒಂದೇ' ಎಂದು ಸದಾ ಅಣ್ಣ ಹಾಗೂ ನನ್ನ ಕುರಿತು ಹೇಳುತ್ತಿದ್ದರು. ಅದರಂತೆಯೆ ನಡೆದು ತೋರುತ್ತಿದ್ದರು. ಅಪ್ಪ ಇದ್ದಿದ್ದರೆ....ಮನಸ್ಸು ಅಪ್ಪನ ನೆನಪಲ್ಲಿ ಜಾರಿತು.

ಅಪ್ಪ ಎಂತಹ ಕುಟುಂಬ ಪ್ರೇಮಿ. ಸದಾ ಮಕ್ಕಳ ಹೆಂಡತಿಯ/ಅವಲಂಬಿತರ ಇತರೆ ಕುಟುಂಬದ ಸದಸ್ಯರ ಅಭಿವೃದ್ಧಿಗಾಗಿ ಗಂಧದ ಕಟ್ಟಿಗೆಯಂತೆ ತಾವೇ ಕರಗುತ್ತಿದ್ದರು. ತನಗೆ ಬಾಲ್ಯದಲ್ಲಿ ಹೇಳುವ ಕಥೆಗಳೆಲ್ಲಾ ನೈತಿಕತೆಯ, ಪ್ರಾಮಾಣಿಕತೆಯ, ರಾಜ-ರಾಣಿಯರ ಕಥೆಗಳೇ ಆಗಿರುತ್ತಿದ್ದವು. ಆದರೆ ಅಪ್ಪನೆಂದೂ ರಾಜನಾಗಿ, ಅವ್ವ ಎಂದೂ ರಾಣಿಯಾಗಿ ಬದುಕದಿದ್ದರು ತನ್ನನ್ನು ಮಾತ್ರ ರಾಜಕುಮಾರಿಯಂತೆ ಬೆಳೆಸಿದರು. ಅಪ್ಪನ ವಾತ್ಸಲ್ಯಕ್ಕೆ ಮಿತಿಯೆ ಇರುತ್ತಿರಲಿಲ್ಲ. ಸೂಜಿ ಮೊನೆಯಷ್ಟೂ ಮನಸ್ಸು ನೋಯಿಸುತ್ತಿರಲಿಲ್ಲ. ನಿಜವಾಗಿಯು ರಾಜಕುಮಾರಿಯೆಂದರೆ ಹೀಗೇನೆ ಎಂಬುದು ನನಗೆ ನಾನೇ ಉದಾಹರಣೆಗೊಳಗಾಗುತ್ತಿದ್ದೆ.

ಅಪ್ಪ ನನ್ನೆಲ್ಲಾ ಬೇಡಿಕೆ ಬಾಯ್ಬಿಚ್ಚಿ ಕೇಳುವ ಮುನ್ನವೇ ಪೂರೈಸುತ್ತಿದ್ದರು. ಅಣ್ಣನಿಗೆ ವರ್ಷಕ್ಕೆ ಒಂದು ಜೊತೆ ಬಟ್ಟೆ ತಂದರೆ ನನಗೋ ತಿಂಗಳಿಗೊಂದರಂತೆ! ತೊಡಿಸಿ ಉಡಿಸಿ ಕಣ್ತುಂಬಾ ನೋಡುತ್ತಾ ಸಂಭ್ರಮಿಸುತ್ತಿದ್ದರು.

'ತಾತ್ಯಾ' ನಂಗ ಈ ಬಣ್ಣ ಇಷ್ಟವಿಲ್ಲ' ಹೇಳಿದಾಗ ಮುಗುಳ್ನಗುತ್ತಾ 'ಬೇಟಾ ಇಂತಹ ಬಣ್ಣದ ಬಟ್ಟೆ ನಿನಕಡೆ ಇಲ್ಲವಲ್ಲ? ಇದುವು ಇರಲಿ. ಮುಂದಿನ ತಿಂಗಳು ನಿನಗಿಷ್ಟವಾದ ಮತ್ತೊಂದು ಬಣ್ಣದ ಬಟ್ಟೆ ತಂದರಾಯ್ತು. ಹ್ಞೂ, ಹ್ಞೂ... ಅನ್ನೋದರಲ್ಲಿ ಮತ್ತೆ ಮುಂದಿನ ತಿಂಗಳು ಬರುತ್ತೇ! ಕ್ಷಣಗಳಲ್ಲಿಯೇ ನನಗಾಗುತ್ತಿದ್ದ ಬೇಜಾರು ದೂರ ಮಾಡುತ್ತಿದ್ದರು.

ಪ್ರತಿ ತಿಂಗಳು ತಮ್ಮ ವೇತನದ ಮೊದಲ ಖರ್ಚು ನನ್ನ ಖುಷಿಗಾಗಿ ಖರ್ಚು ಮಾಡೋದು ನೋಡಿದಾಗ ತಾನು ರಾಜಕುಮಾರಿ ಅಲ್ಲದೇ ಇನ್ನೇನು?

ಆದರೆ ಅವ್ವ, ಸದಾ ನೆಲ ಹಿಡಿದು ಮಲಗಿರುತ್ತಿದ್ದಳು. ಅಪ್ಪನ ಮೇಲೆ ಒಂದಿಲ್ಲ ಒಂದು ರೀತಿಯ ಒತ್ತಡ ಹೇರಿ ಯಾವಾಗಲೂ ತನ್ನ ಕಡೆ ಧ್ಯಾನ ಇರುವಂತೆ ಮಾಡುತ್ತಾ ಜಗಳವಾಡುತ್ತಾ ತಿಂಗಳಿಗೆ ಸಾವಿರಾರು ರೂಪಾಯಿಗಳ ಖರ್ಚು ವೇತನದಲ್ಲಿ ಮುಂಗಡವಾಗಿ ತನಗೇ ಮೀಸಲು ಇಡುವಂತೆ ನೋಡಿಕೊಳ್ಳುತ್ತಿದ್ದಳು. ಇಂತಹ ಅವ್ವನ ಜೊತೆ ಮಕ್ಕಳಿಗೆ ಓದಲು ಪಟ್ಟಣದಲ್ಲಿ ಮನೆ ಮಾಡಿ ಹಳ್ಳಿಯಲ್ಲಿಯ ತಮ್ಮ ಶಿಕ್ಷಕ ವೃತ್ತಿಗೆ ಅತ್ಯಂತ ಪ್ರಾಮಾಣಿಕತೆಯ ದುಡಿಮೆ ಮಾತ್ರ ತಮ್ಮದಾಗಿಸಿಕೊಳ್ಳುತ್ತಿದ್ದರು. ತಡವಾದರೆ ಅಲ್ಲಿಯೇ ದೂರದ ಹಳ್ಳಿಯಲ್ಲಿ ಉಳಿಯುವ ಅಪ್ಪಗೆ ಯಾವುದೇ ಕೌಟುಂಬಿಕ ಸುವಿಧಾ ಸಿಗುತ್ತಿರಲಿಲ್ಲ. ಹೆಂಡತಿ ಮಕ್ಕಳ ಪ್ರೀತಿಯಿಂದ ವಂಚನೆಯಾಗುವುದರ ಜೊತೆ ಇಷ್ಟವಾದ ಆಹಾರವು ಸಿಗದಿರುವುದು ತನಗೆ ವಿಲಿ ವಿಲಿ ಒದ್ದಾಡುವಂತೆ ಆಗುತಿತ್ತು. ಇಂತಹ ಅಪ್ಪನಿಗೆ ಅವ್ವ ಸರಿಯಾದ ಮಡದಿಯಲ್ಲ ಎಂಬುದು ತನಗೆ ಬಾಲ್ಯದ ದಿನಗಳು ಪೀಡಿಸುತ್ತಿದ್ದಾಗ ತಾನು ಮದುವೆಯಾದರೆ ತನ್ನ ಗಂಡನನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ಅವ್ವನ ಹಾಗೆ ಸಿಡಿಮಿಡಿಗೊಳ್ಳದೆ ಅದಮ್ಯ ಪ್ರೀತಿಯ ಧಾರೆಯೆರೆಯಬೇಕೆಂದು, ಸರಿಯಾದ ಹೊಟ್ಟೆಯ ವ್ಯವಸ್ಥೆ ಮಾಡಬೇಕೆಂಬಂತಹ ಕನಸಿನಲ್ಲಿ ಅಪ್ಪನ ಸಂಕಟ ಕರಗಿಸಿಕೊಳ್ಳುತ್ತಾ ಗಂಡನ ಸೇವೆಯ ಕ್ಷಣಗಳ ಮುತ್ತುಗೆಯಲ್ಲಿ ಹಲವಾರು ಬಾರಿ ವಿಹರಿಸುತ್ತಿದ್ದುದುಂಟು.

ಮುಂಜಾನೆ ಐದು ಗಂಟೆಗೆ ಎದ್ದು ಮನೆಯ ಎಲ್ಲಾ ಕೆಲಸ ಮಾಡುವ ಜವಾಬ್ದಾರಿ ತನ್ನದೆ ಆಗಿತ್ತು. ಅಪ್ಪನಿಗೆ ಊಟದ ಬುತ್ತಿ ಕಟ್ಟಿಕೊಡುವುದರಿಂದ ಹಿಡಿದು ಹೊರಗಿನ ಸಾರ್ವಜನಿಕ ನೀರಿನ ಟ್ಯಾಂಕಿನಿಂದ ನೀರು ತರುವುದು, ಮನೆಯ ಕಸ ಹೊಡೆಯುವುದು, ಅವ್ವ ಅಣ್ಣನಿಗೆ ಊಟದ ವ್ಯವಸ್ಥೆ ಮಾಡಿ ತಾನು ಟಿಫಿನ್ ಕಟ್ಟಿಕೊಂಡು ಶಾಲೆಗೆ ಹೋಗುವುದರೊಂದಿಗೆ ಸಾಯಂಕಾಲ ಅಣ್ಣ ಮನೆಗೆ ಬರಲು ತಡವಾದರೆ ಆತನನ್ನು ಹುಡುಕಾಡುತ್ತಾ ಅವನ ಕಛೇರಿಗೋ, ಸ್ನೇಹಿತರ ಮನೆಗೋ ಅಲೆದಾಡಿ ಅವನನ್ನು ಮನೆಗೆ ಕರೆದುಕೊಂಡು ಬರುವ ಜವಾಬ್ದಾರಿಯು ನನ್ನದೆ ಆಗಿದ್ದುದರಿಂದ 'ನಮ್ಮ ಪೋರಿಗೆ ಕಟ್ಟಿಕೊಂಡವ ಪುಣ್ಯ ಮಾಡಿರಬೇಕು ನೋಡು ಮೌಸಿ' ನೆರೆಮನೆಯ ಮೌಸಿ ತನ್ನವ್ವಗೆ ಹೇಳೋದು ನೋಡಿ ಮನಸ್ಸಿನಲ್ಲೆಲ್ಲೊ ಮುದ ನೀಡುವ ಆ ಮಾತುಗಳು ಮತ್ತೆ ಮತ್ತೆ ಕೇಳಬೇಕೆಂದು ಮನಸ್ಸು ಬಯಸುತ್ತಿತ್ತು. ಒಂದು ರೀತಿಯಲ್ಲಿ ಮನೆಯ ಸಂಪೂರ್ಣ ಜವಾಬ್ದಾರಿ ನಾನೇ ವಹಿಸಿಕೊಂಡು ಮನೆಗೆ ಊಟದ ಸಾಮಗ್ರಿಗಳು ಸಹ ತರುವುದರಿಂದ ಹಿಡಿದು ಮನೆಯ ಸದಸ್ಯರೆಲ್ಲರಿಗೂ ಊಟ ತಿಂಡಿಯ ವ್ಯವಸ್ಥೆ ಮಾಡುವುದರಲ್ಲಿ ಇಡೀ ನನ್ನ ಬಾಲ್ಯ ದುಡಿಮೆಯೊಂದಿಗೆ ತವರ್ಮನೆಯಲ್ಲಿ ಕಳೆದುದಕ್ಕೆ ಯಾವ ಬೆಲೆಯು ಇಲ್ಲದಂತೆ ಅವ್ವ ವರ್ತಿಸುತ್ತಿರುವುದು ಮನಸ್ಸಿಗೆ ತುಂಬಾ ಘಾಸಿಯಾಗುತಿತ್ತು.

ಅವ್ವನ ಒತ್ತಾಯಕ್ಕೆ ಒಲ್ಲದ ಮನಸ್ಸಿನಿಂದ 'ಇನ್ನೂ ಓದಿಸಬೇಕಾಗಿತ್ತು' ಎನ್ನುತ್ತಾ ಅಪ್ಪ ಬೇಗನೆ ತನ್ನನ್ನು ಮದುವೆ ಮಾಡಿಬಿಟ್ಟರು. ನೋಡಿ ಬಂದ ನೆಂಟರೆಲ್ಲಾ ವರ ಮಹಾಶಯನನ್ನು ಹೊಗಳುವವರೆ. ಹುಡುಗನಿಗೆ ಸರ್ಕಾರಿ ನೌಕರಿಯಿದೆ, ಆಸ್ತಿಯಿದೆ, ಹುಡುಗ ತುಂಬಾ ಓದಿಕೊಂಡಿದ್ದಾನೆ, ಜೋಡಿಯು ಚೆನ್ನಾಗಿ ಇದೆ ಎಂದು ಎಲ್ಲರೂ ಹೇಳಿದಾಗ ಅಪ್ಪ ಮರು ಮಾತಾಡಲಿಲ್ಲ.

ಮದುವೆಯಾದ ಹೊಸತನದಲ್ಲಿ ವಾರಕ್ಕೊಮ್ಮೆ ಭೇಟಿಯಾಗಲು ಅಪ್ಪ ಶನಿವಾರ ಬಂದವರೆ ಸೋಮವಾರ ಬೆಳಿಗ್ಗೆ ಹೊರಟು ಹೋಗುತ್ತಿದ್ದರು. ಗಂಡನ ಕುಟುಂಬದ ಎಲ್ಲಾ ಸದಸ್ಯರನ್ನೂ ವಾತ್ಸಲ್ಯದಿಂದ ಕಾಣಬೇಕೆಂದು ಹಿರಿಯರ ಮಾತುಗಳಿಗೆ ಮಾನ್ಯತೆ ನೀಡುವುದರ ಜೊತೆ ಗಂಡನನ್ನು ವಿಶ್ವಾಸದಲ್ಲಿ ಸದಾ ಇಟ್ಟುಕೊಳ್ಳಬೇಕೆಂದು ಸಂದರ್ಭ ಬಂದಾಗಲೆಲ್ಲಾ ಅಪ್ಪ ಬೋಧಿಸುತ್ತಿದ್ದರೆ, ಅವ್ವ ಮಾತ್ರ ತಾನೊಂದು ಭಾರ ಇಳಿಸಿಕೊಂಡಂತೆ ಸಂಭ್ರಮಿಸುತ್ತಿದ್ದಳು.

ತವರ್ಮನೆ ನೆನಪಾಗದಂತೆ ಗಂಡನ ಮನೆಯ ಸದಸ್ಯರು ತನ್ನನ್ನು ನೋಡಿಕೊಳ್ಳುತ್ತಿದ್ದದ್ದಕ್ಕೆ ಅಪ್ಪ ತುಂಬಾ ಖುಷಿ ಪಟ್ಟರೆ ಅವ್ವನೋ ಓಣಿ ತುಂಬಾ ಓಡಾಡಿ ಸರೀಕರೆಲ್ಲರಿಗೂ ತನ್ನ ಮಗಳಿಗೆ ಗಂಡನ ಮನೆ ಚೆನ್ನಾಗಿ ಸಿಕ್ಕಿದೆಯೆಂದು ಹೇಳುತ್ತಿದ್ದಳು.

ಇಂತಹ ಸಂಭ್ರಮದಲ್ಲಿಯೆ ಬದುಕಿನಲ್ಲಿ ದುಃಖ ಎಂದರೇನು? ಕಷ್ಟ ಎಂದರೇನು? 'ಸಾವು' ಎಂದರೇನು? ಎಂಬುದರ ಪರಿಚಯ ಮಾಡಿಕೊಡುವಂತೆ ಅಪ್ಪಾ ಇದ್ದಕ್ಕಿದ್ದಂತೆ 'ಕುಟುಂಬ-ಸಲ್ಲೇಖ'ನದಲ್ಲಿಯೇ ಅಕಾಲ ಮೃತ್ಯುವನ್ನು ಬರಮಾಡಿಕೊಂಡಿದ್ದರು. ಹಿರಿಯರ ಆಸ್ತಿ ತಾನು ಗಳಿಸಿದ ಆಸ್ತಿ ಬೇಕಾದಷ್ಟಿದ್ದರು ಆಸ್ತಿ ಮಾರಿ ಹೃದಯ ನಳಿಕೆಗೆ ಸ್ಟೆಂಟ್ ಹಾಕಿಕೊಳ್ಳಬೇಕೆಂದು ಚೆನ್ನಾಗಿ ಬದುಕಬೇಕೆಂದು ಆಶಿಸಿದವರೆ ಅಲ್ಲ. ದುಡ್ಡಿಲ್ಲವೆಂದು ಕೈಚೆಲ್ಲಿ ಕುಳಿತು ಅಪ್ಪ ಪ್ರೀತಿ-ಹಂಚುತ್ತಲೆ ಎಲ್ಲರೆದೆಯಲ್ಲಿ ಶಾಶ್ವತವಾಗಿ ನಿಂತುಕೊಂಡೆ ಬಯಲಾಗಿ ಹೋದರು.

ಅಂದಿನ ದಿನಗಳಲ್ಲಿ 'ಆಸ್ತಿ ಮಾರಿಯಾದರು ಬದುಕಬೇಕು ತಾತ್ಯಾ' ಎಂದು ಹೇಳುವಷ್ಟು ತಿಳುವಳಿಕೆಯಾಗಲಿ ಧೈರ್ಯವಾಗಲಿ ವ್ಯವಹಾರ ಜ್ಞಾನವಾಗಲಿ ತನ್ನದಾಗಿರಲಿಲ್ಲ. ಆಸ್ತಿ ಮಾರಿ ಬದುಕಬೇಕೆಂಬ ಧೈರ್ಯ ಅಪ್ಪಗೂ ಇರಲಿಲ್ಲ. ಮಕ್ಕಳು ಸುಖವಾಗಿ ಇರಲಿ ಎಂಬುದೇ ಅವರ ಮಹದಾಶೆಯಾಗಿತ್ತು. ಮಕ್ಕಳಿಗೆ ಶಾಶ್ವತವಾಗಿ ಈ ಸಮಾಜದಲ್ಲಿ ನೆಲೆಯೂರುವಂತೆ ಮಾಡುವುದರ ಜೊತೆ ಹಿರಿಯರ ಆಸ್ತಿ ಕಾಯ್ದಿಟ್ಟು ನನ್ನ ಪಾಲು ಸೇರಿಸಿದ್ದೇನೆ, ಹೀಗಾಗಿ ನನ್ನ ಬದುಕಿನಲ್ಲಿ ಸಂತೃಪ್ತಿ ಇದೆ. ಬದುಕಿಯಾದರು ತಾನಿನ್ನು ಮಾಡುವುದೇನಿದೆ? ಎಂಬುದು ಅವರ ಕೊನೆದಿನಗಳ ಮಾತುಗಳಾಗಿದ್ದವು.

ಹಿರಿಯರ ಆಸ್ತಿಯ ಮೇಲೆ ಅಪ್ಪನೆಂದೂ ಅಯ್ಯಾಸಿ ಮಾಡಿದವರಲ್ಲ. ತನ್ನ ಗಳಿಕೆಯ ಮೇಲೆಯ ದುಡ್ಡಿಗೆ ದುಡ್ಡು ಜಮಾ ಇಟ್ಟು ದುಂದುವೆಚ್ಚದಿಂದ ದೂರ ಇದ್ದು ಅತ್ಯಂತ ಪ್ರಾಮಾಣಿಕ ಸರಳ ಬದುಕು ನಡೆಸಿ ಹೆಂಡತಿ ಮಕ್ಕಳಿಗೆ ತನ್ನೆಲ್ಲಾ ಗಳಿಕೆ ಕೊಟ್ಟುಬಿಟ್ಟು ತಿರುಗಿ ಬರದಂತೆ ಬರಲಾರದ ಊರಿಗೆ ಹೋಗಿಬಿಟ್ಟರು.

ಇಂತಹ ಅಪ್ಪನ ಸ್ಮಾರಕವಾಗಿ ಅವರ ಪ್ರೀತಿಗೆ ಪಾತ್ರವಾದ ಶಿಕ್ಷಣ ಕ್ಷೇತ್ರದಲ್ಲಿ ಅವರ ಹೆಸರಿನಲ್ಲಿಯೆ ವಿದ್ಯಾ ಸಂಸ್ಥೆ ಪ್ರಾರಂಭಿಸಬೇಕೆಂಬ ಮನದಾಳಕ್ಕೆ ಅಣ್ಣ-ಅವ್ವ ಇವರಿಬ್ಬರು ಒಪ್ಪೇ ಒಪ್ಪುತ್ತಾರೆಂಬ ಅದಮ್ಯ ಭರವಸೆಯಿಂದ ಅಪ್ಪ ಗಳಿಸಿರುವ ಪ್ಲಾಟುಗಳನ್ನು ಕೇಳಿದಾಗ ಪಾಲು ಕೇಳ್ತಿದ್ದಾಳೆಂಬ ಆರೋಪ ಅವ್ವನದಾದರೆ, ಅಣ್ಣನದು ಇದಕ್ಕೆ ಮೌನವಿರೋಧವಾಗಿತ್ತು. ರಿಮೋಟ್ ಕಂಟ್ರೋಲ್‌ನಂತೆ ಅವ್ವನನ್ನ ಎದುರಾಳಿಯಾಗಿ ನಿಲ್ಲಿಸಿದ್ದ.

ನೀನೇನು ತಲೆಯ ಮೇಲೆ ಕಲ್ಲು ಹೊತ್ತು ಆಸ್ತಿ ಗಳಿಸಿದ್ದಿಯಾ? ತಾತ್ಯಾನ ಆಸ್ತಿ ತಾತ್ಯಾನಿಗಾಗಿ ನಾನು ಕೇಳ್ತಿದ್ದರೆ ನಿನಗೇಕೆ ಸಂಕಟವಾಗ್ತಿದೆ? ಅಂದುದಕ್ಕೆ ಅಣ್ಣ

ಎಂತಹ ಸಮಜಾಯಿಸಿ ನೀಡಿದನೆಂದರೆ ನೀನು ಉದ್ದೇಶಪೂರ್ವಕವಾಗಿ ನಮ್ಮನ್ನು ಭಾವುಕರನ್ನಾಗಿ ಮಾಡುತ್ತಿರುವೆ ಎಂದು ಹೇಳುವುದರ ಜೊತೆ ಅಣ್ಣ–ಅವ್ವ ಇಬ್ಬರು ಅಪ್ಪ ಗಳಿಸಿಟ್ಟಿದ್ದ ಆಸ್ತಿಗೆ ನಿಜ ವಾರಸುದಾರರಾಗಿ ತನಗೆ ತನ್ನಪ್ಪನ ಮನೆಯಿಂದ, ಪ್ರೀತಿ ವಿಶ್ವಾಸಗಳ ತವರ್ಮನೆಯಿಂದ ಹೊರದಬ್ಬುವ ಅವರ ನಡಾವಳಿ ಎದೆ ಹಿಂಡಿ ಮನಸ್ಸು ಕಠೋರಗೊಳಿಸಿತ್ತು.

ಅವ್ವಾ ಆಯಿಯ ಜೊತೆ ಜಗಳವಾಡಬೇಡ. ಅವಳು ಮನಸ್ಸಿನಿಂದ ಪಾಲು ಕೊಟ್ಟರೆ ತೆಗೆದುಕೊ, ಇಲ್ಲದಿದ್ದರೆ ಬೇಡೆಂದು ಮಗಳು ಬರುವಾಗ ಕಿವಿ ಮಾತು ಹೇಳಿದ್ದಳು.

ನೀನು ಪಾಲು ಕೇಳ್ತಾ ಇದ್ದಿ ಅಂತ– ನಿಮ್ಮಣ್ಣ ಫೋನ್ ಮಾಡಿದ್ದ ಹೌದೇ? ಪಾಲು ತೆಗೆದುಕೊಂಡು ಏನ್ಮಾಡ್ತಾಳೆ? ಅಂತ ಅವನನ್ನೆ ಪ್ರಶ್ನಿಸಿದರೆ ಗೊತ್ತಿಲ್ಲವೆಂದ. ಒಂದು ವೇಳೆ ಪಾಲು ಪಡೆದಾದಲ್ಲಿ ತವರ್ಮನೆ ಕಳೆದುಕೊಂಡು 'ಭಾಗಾದಿ' ಮನೆ ಗಳಿಸಿದಂತಾಗುತ್ತದೆ ನೋಡು ಎಂದು ಗಂಡ ಎಚ್ಚರಿಸಿದ್ದರು.

ನಮ್ಮ ಮಧ್ಯ ನೀವು ಬರಬೇಡಿ. ತವರ್ಮನೆ ಕಳೆದುಹೋದಾಗ ಭಾಗಾದಿ ಮನೆಯಾದರು ಇರಲಿ. ನೀವ್ಯಾಕೆ ತಲೆಕೆಡಿಸಿಕೊಳ್ತಿರಾ? ಸಮಾಧಾನಿಸಿ ಮರುಮಾತಾಡದಂತೆ ಮಾಡಿದಾಗ ನಿನ್ನಿಷ್ಟ ಎಂದು ಹೇಳಿದವರೆ ಮತ್ತೆ ಇದರಲ್ಲಿ ತಲೆಹಾಕಲಿಲ್ಲ.

ಗಂಡ ಅಪ್ಪನಂತೆ ಆಸ್ತಿ ಗಳಿಸಿದವರಲ್ಲ, ಸ್ವತಂತ್ರ ವ್ಯಕ್ತಿತ್ವ ವಿಕಸನಕ್ಕೆ ಮಕ್ಕಳನ್ನು ಮುಕ್ತವಾಗಿ ಬೆಳೆಸುವುದರ ಜೊತೆ ತುಂಬಾ ಪ್ರೋತ್ಸಾಹಕೊಡುತ್ತಿದ್ದರು. ಜೊತೆಗೆ ನನಗೂ ಅದೇ ರೀತಿಯಲ್ಲಿ ನಡೆಯಿಸಿಕೊಳ್ಳುತ್ತಿರುವುದಕ್ಕೆ ನಾನು ತುಂಬಾ ಬದಲಾವಣೆಗೆ ಒಳಪಟ್ಟಿದ್ದು ನನಗೇನೆ ತುಂಬಾ ಆಶ್ಚರ್ಯ ಮೂಡಿತ್ತು. ಕುಟುಂಬದ ಸಂಪೂರ್ಣ ಹೊಣೆಗಾರಿಕೆ ನನಗೆ ಒಪ್ಪಿಸಿ ನಿಶ್ಚಿಂತ ಪುರುಷರಾಗಿದ್ದರು. ಅದಕ್ಕೆನೆ ಮಗ, ರಜಾದಿನಗಳಲ್ಲಿ ಮನೆಗೆ ಬಂದಾಗ 'ಅಮ್ಮ, ನೀ ನಮ್ಮ ಮನೆಯ ಪ್ರೈಮ್ ಮಿನಿಸ್ಟರ್ ಇದ್ದ ಹಾಗೆ. ಪಪ್ಪ ಪ್ರೆಸಿಡೆಂಟ್ ಇದ್ದಹಾಗೆ. ನೀನೊಪ್ಪಿದರೆ ಪಪ್ಪ ಎಲ್ಲದಕ್ಕೂ ಅಪ್ರೋವ್ ಕೊಡ್ತಾರೆ. ಇಲ್ಲದಿದ್ದರೆ ಇಲ್ಲ' ಎಂದೆನ್ನುತ್ತಾ ತನ್ನ ಯಾವುದೇ ಬೇಡಿಕೆಗಳನ್ನು ನನ್ನ ಮುಖಾಂತರ ಕಾಡಿಬೇಡಿ ಈಡೇರಿಸಿಕೊಳ್ಳುತ್ತಿದ್ದ.

ಹಿರಿಯರ ಎಲ್ಲಾ ಆಸ್ತಿ ಅಣ್ಣ ಮಾರಾಟ ಮಾಡಿ ಭವ್ಯವಾದ ಮನೆಕಟ್ಟಿದ್ದ. ಇದಕ್ಕೆ ತಾನು ಚಕಾರವೆತ್ತದೆ ಗಂಡನಿಗೂ ತಿಳಿಸದೆ ಮಾರಾಟ ಪತ್ರಕ್ಕೆ ಸಹಿ ಮಾಡಿಯಾಗಿತ್ತು. ಆದ್ದರಿಂದ ಅಪ್ಪಗಳಿಸಿದ ಪ್ಲಾಟು ಕೇಳಲು, 'ನಿಮಗೇನು ಕಡಿಮೆ ಇದೆ? ಎರಡು ಮಂಜಿಲ್ ಮನೆ ಕಟ್ಟಿದಿರಾ.... ಅಣ್ಣನವರಿಗೆ ಕೈತುಂಬಾ ಸಂಬಳ ಇದೆ. ಹತ್ತು ಎಕರೆ ನೀರಾವರಿ ಭೂಮಿಯಿದೆ. ಅದೂ ಅಲ್ಲದೆ ನೀವು ಸಹ ಸ್ವ–ಸಹಾಯ ಸಂಘಗಳ ಮುಖಾಂತರ ಏನಾದರೊಂದು ಗಳಿಕೆಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಸಂಪಾದನೆ ಮಾಡ್ತಿರಾ. ನಮ್ದೇನು ಬರೀ ಅಡುಗೆ ಮನೆ ಕೆಲಸ' ಅತ್ತಿಗೆ ಖುಷಿಯಿಂದ ಹೇಳಿದ್ದಳೋ ಅಥವಾ ಅಸೂಯೆಯಿಂದ ಹೇಳಿದ್ದಳೋ ಗೊತ್ತಾಗಲಿಲ್ಲ. ಆದರೆ ಅವಳಾಡುವ ಮಾತುಗಳು ನಿಮಗೇನು ಕಡಿಮೆ ಇದೆ? ನಿಮಗೇಕೆ ಪಾಲು? ಎಂಬುದನ್ನೆ ಸೂಚಿಸುತ್ತಿದ್ದುದು ಸಿಟ್ಟು ತರಿಸಿತ್ತು.

ತವರ್ಮನೆಯವರಿಗೆ ತನ್ನ ಮನೆ ಚೆನ್ನಾಗಿದೆ ಎಂದು, ಗಂಡನ ಮನೆಯವರಿಗೆ ತವರ್ಮನೆ ಚೆನ್ನಾಗಿದೆಯೆಂದು ಹೇಳುತ್ತ ಪರಸ್ಪರ ಅಭಿಮಾನ ಹಾಗೂ ಗೌರವಯುತವಾಗಿರಬೇಕೆಂಬ ಪ್ರತಿ ಹೆಣ್ಣಿನ ಇಚ್ಛೆಯೆ ತನ್ನದಾಗಿತ್ತು. ತವರ್ಮನೆಗಿಂತ ಚೆನ್ನಾಗಿ ಇರುವುದರ ಜೊತೆ ತವರ್ಮನೆಯ ಪ್ರೀತಿಯ ಧಾರೆಗೆ ಜೀವ ಹಪಹಪಿಸುತ್ತಿದೆ ಎಂದು ಯಾವ ರೀತಿಯಿಂದ ಹೇಳಬೇಕು ಇವರಿಗೆಲ್ಲಾ ಎಂದೆ ಮನಸ್ಸು ಒದ್ದಾಡುವಂತಾಗಿತ್ತು.

'ನಾ ನಿನಗೆ ಏನೇನು ಕೊಡಲಾರೆ, ನಿನಗೇನು ಕಮ್ಮಿ ಇದೆ?' ಎಂದು ಹೇಳುತ್ತಲೆ 'ನಿನಗೆ ಕರಿ ನಾಯಿಯು ಬಗೆಯುವುದಿಲ್ಲ ನಾನಿರುವವರೆಗೆ ಮಾತ್ರ ತವರ್ಮನೆ' ಎಂದು ಅಸಡ್ಡೆಯಿಂದ ಹೇಳುವ ಅವ್ವನ ಧಾಟಿ ತವರ್ಮನೆಯಿಂದ ನನಗೆ ಹೊರದಬ್ಬುವುದೇ ಆಗಿತ್ತು.

ಅಪ್ಪ ಬದುಕಿದ್ದ ದಿನಗಳ ತವರ್ಮನೆ ಇವಾಗೆಲ್ಲುಂಟು? ಅಪ್ಪನ ಕಕುಲೋತಿ ಅಣ್ಣನಲ್ಲುಂಟೆ? ಹೆಂಡತಿ ಮಕ್ಕಳ ಜಗತ್ತಿನಲ್ಲಿಯೆ ಇರುವವ, ತನ್ನ ಮನೆಗೆ ಬಂದರೆ ಯಾವುದೋ ರೂಪದಲ್ಲಿ ಬಂದು ಹೋಗುವ ಖರ್ಚು ವಸೂಲಿ ಮಾಡುವ, ವ್ಯವಹಾರದ ಬ್ರೋಕರ್ ಲಾಭ ನನ್ನಲ್ಲೆ ಪಡೆಯುವ ಮನೋಸ್ಥಿತಿಯ ವ್ಯಕ್ತಿ ತವರ್ಮನೆಯ ಕರ್ತವ್ಯ ನಿಭಾಯಿಸದೆ ಇರುತ್ತಿರುವಾಗ ತವರ್ಮನೆಯಿಂದ ಹೂವಿನೆಳೆಯ ಬದಲು 'ಹೂ' ಬೇಕೆಂದು ಅವ್ವನಿಗೆ ಹೇಳಿದ್ದರಲ್ಲಿ ತಪ್ಪೇನು?

ತವರೂರು ತುಂಬಾ ತಾನು ಪಾಲು ಕೇಳಿದ್ದು ಎಲ್ಲರ ಮನೆಯಲ್ಲಿ ಚರ್ಚೆಯೆ ಚರ್ಚೆಯಂತೆ. ನಮ್ಮ ಖಾಂದಾನದಲ್ಲಿ ಇವಳೇ ಮೊದಲಿಗಳು ಪಾಲುಕೇಳೋದು ಎಂಬ ಭಾಗಾದಿಯವರ ಕುಹಕ ನುಡಿಗಳು ಅವ್ವನ ಎದೆಗೆ ಬಿರುಸಾಗಿದ್ದವು ಎಂಬುದು ಕೇಳೋದರಲ್ಲಿ ಬಂದಿತ್ತು.

ಹಿರಿಯರ ಎಲ್ಲಾ ಆಸ್ತಿ ಮಾರಿದುದಕ್ಕೆ ಒಂದು ಅಕ್ಷರವು ಅಪಸ್ವರಗೊಳಿಸದ ತಾನು ಬೆವರು ಸುರಿಸಿ ರಕ್ತ ಬೆವರಾಗಿಸಿ ಅಪ್ಪ ಗಳಿಸಿದ ಆಸ್ತಿಯಲ್ಲಿ ಅಪ್ಪನ ಸ್ಮಾರಕವೊಂದು ಪ್ರಾರಂಭಿಸುವ ತನ್ನ ಇರಾದೆಯ ಇಚ್ಛೆಗೆ ಈವಾಗ ಅಣ್ಣನದು ಸುತಾರಾಂ ಒಪ್ಪಿಗೆಯಿಲ್ಲ. ಅವ್ವನದೂ ಇಲ್ಲ.

ನೀವೇನು ಬೆವರು ಹರಿಸಿ ಗಳಿಸಿದಿರೇ? ನನ್ನ ಅಪ್ಪನ ಆಸ್ತಿಯಲ್ಲಿ ನನ್ನ ಪಾಲು ಕೊಡಿ ಅವರ ಸ್ಮಾರಕ ಅವರ ಹೆಸರಲ್ಲಿ ಮಾಡಿ ಅವರನ್ನು ನಾನು ಅವರ ವಿಚಾರಧಾರೆಗಳಲ್ಲಿ ಜೀವಂತ ಇಡಬೇಕಾಗಿದೆ. ಅಂದುದಕ್ಕೆ ಅಣ್ಣ ಪುಸಕ್ಕನೆ ನಕ್ಕು ಹೆಣ್ಮಕ್ಕಳಿಗೆ ಮದುವೆ ಆಗೋತನಕ ಸ್ವಲ್ಪ ಪೋಷಣೆ ಮಾಡೋದಿರುತ್ತದೆ. ಪಾಲು ಕೊಡೋದಲ್ಲ. ಇರೋ ಆಸ್ತಿ ಅವ್ವನ ಹೆಸರಲ್ಲಿರೋದು ಇದೊಂದೆ. ಏನು ಮಾಡ್ತಾಳೆ ಅಂಬೋದು ಅವಳಿಗೆ ಬಿಟ್ಟದ್ದು ಎಂಬ ಅಣ್ಣನ ಮಾತು ಗಳಿಗೆ ಅವ್ವನಿಂದ ಮಾತುಗಳೇ ಹೊರಬರಲಿಲ್ಲ.

ಆಸ್ತಿಯೊಂದೆ ಏಕೆ? ಎಷ್ಟು ವರ್ಷಗಳಿಂದ ಅವಳ ಪಿಂಚಣಿ ಎತ್ತುತ್ತಿದ್ದೀರಿ ಅದರ ಲೆಕ್ಕ ಇದೆಯಾ? ಇದು ಅಪ್ಪನ ಗಳಿಕೆಯಲ್ಲವೇ? ತನ್ನ ಪ್ರಶ್ನೆಗೆ ಅಣ್ಣ ಮಾತಾಡಲಿಲ್ಲ. ಬದಲಾಗಿ ಅತ್ತಿಗೆ, 'ಬೇಕಾದರೆ ಪಿಂಚಣಿಯೊಂದಿಗೆ ನಿಮ್ಮವ್ವನ್ನ ಕರೆದುಕೊಂಡು ಹೋಗಿ' ಎಂದ್ಹೇಳಿ ಜಾರಿಕೊಂಡಳು. ಇದು ಅವ್ವಗೆ ತುಂಬಾ ದುಃಖ ತಂದಿರಬೇಕು. ಆವಾಗಲೆ ತಾನೇ ನನಗೆ ತೂರಿ ತೂರಿ ಹೊಡೆಯಲು ಬಂದದ್ದು?

ತಾನು ಪಾಲು ಕೇಳಿದುದು ಅವ್ವನಿಗೆ ಘಾಸಿಯಾಯಿತೇ? ಕೇಳಿದ ತಕ್ಷಣ ಅಪ್ಪ ಗಳಿಸಿದ

## ನಾವು ಸ್ತ್ರೀಯರು

**ನಾವು** ಸ್ತ್ರೀಯರು...
ಸ್ತ್ರೀ ಸಮಾನತೆಯ ಕೂಗು ಹಾಕುತ್ತ
ಅಡುಗೆ ಮನೆಯಲ್ಲಿ ಮಾತ್ರ
ಕಟ್ಟಿಗೆಯಾಗಿ ಉರಿದವರು
ಹೊಗೆಯಾಗಿ ಕಣ್ಣುರಿಯಾದವರು.

ನಾವು ಸ್ತ್ರೀಯರು...
ಕೈ ತುಂಬ ದುಡಿಯುತ್ತೇವೆ
ಬಾಳ ರಹದಾರಿಯಲಿ
ಕೊಟ್ಟು ಭುಜಕ್ಕೆ ಭುಜ
ನಡೆದಿದ್ದೇವೆ
ಎಂಬ ಭ್ರಮೆಯಲ್ಲಿಯೇ
ನೋವಿನಲ್ಲಿ ಕಡಲಾದವರು.

ನಾವು ಸ್ತ್ರೀಯರು...
ಅಪಹಾಸ್ಯವ ಸಹಿಸಿಕೊಂಡು
ದಾಸ್ಯವೇ ಬದುಕೆಂದುಕೊಂಡು
ಹಾಸ್ಯವೇ ಮರೆತರೂ
ಮುಗುಳ್ನಕ್ಕ ಮುಖವಾಡದವರು!

ಕಂಪ್ಯೂಟರ್ – ವೆಬ್‌ಸೈಟ್
ಇಂಟರ್‌ನೆಟ್ ಜಾಲದಲ್ಲಿಯೂ
ಅಲ್ಲಿ – ಇಲ್ಲಿ ಬಿದ್ದ
ಕಣ್ಣೀರ ಒರೆಸಿಕೊಳ್ಳುತ್ತಲೇ
"ಪುರುಷರಿಗೆ ಸರಿಸಮಾನರು
ನಾವೆಂದು"
ಪೊಳ್ಳು ಭ್ರಮೆಯಲ್ಲಿ
ದಿನದೂಡುವವರು!

**ಶೋಭಾ ಪ್ರಮೋದ್**
ಮಾಂಗೋನ್ – ೪೦೨ ೧೦೪
ರಾಯಗಢ, ಮಹಾರಾಷ್ಟ್ರ

ಆಸ್ತಿ ಕೊಡ್ತಾಳೆ ಅಂತ ಎಂತಹ ಭರವಸೆಯಿತ್ತು. ಆದರೆ ಅಣ್ಣನ ಪಕ್ಷಪಾತಿಯಾಗುತ್ತಾಳೆಂದು ಭಾವಿಸಿರಲಿಲ್ಲ. ತನ್ನ ಮಗಳಿಗೆ ತಾನೂ ಸಹ ಆಸ್ತಿ ಕೊಡುತ್ತೇನೆಂದು ಮೊದಲು ಅವ್ವನಿಗೆ ತಿಳಿಸಿಯೆ ಪಾಲು ಕೇಳಿದ್ದು. ಆದರವಳು ತನ್ನ ವಾರಗೆಯವರ ಪ್ರತಿನಿಧಿಯಾಗಿ 'ನಿನ್ನ ನಾದಿನಿಯವರಿಗೆ ಪಾಲು ಕೊಡ್ತಿಯಾ?' ಎಂದು ಪ್ರಶ್ನಿಸಿದ್ದಳು.

ಅವ್ವನ ವಾರಿಗೆಯವಳಾದ ನಾದಿನಿ ತನ್ನ ಮಗಳಿಗೆ ತನ್ನ ಹಿಸ್ಸೆಯ ಆಸ್ತಿ ಧಾರೆ ಎರೆದಿದ್ದಳು. ತನ್ನ ಗಂಡು ಮಕ್ಕಳ ಅಸಮಾಧಾನ ಮನೆಯ ಗುರುವರ್ಯರಿಂದ ತಿಳಿ ಹೇಳಿಸಿ ಅವರ ಕೈಯಿಂದಲೆ ಕೊಡುವಂತೆ ಮಾಡಿದ್ದಳು. ತನ್ನ ನಾದಿನಿಯ ಬುದ್ಧಿ ತನ್ನವ್ವಗೇಕಿಲ್ಲವೆಂಬ ಆಲೋಚನೆ ಎದೆಯಲ್ಲಿ ಹೊಯ್ದಾಡುತ್ತಿರುವಾಗ ನೆರೆಮನೆಯ ಸಖಿ ತವರ್ಮನೆಯಲ್ಲಿ ಪಾಲು ಕೇಳೋದು ಬೇಡ ಎಂಬ ಸಲಹೆ ಕೊಟ್ಟಿದ್ದಳು. ಅದೇ ಬಾಲ್ಯದ ಗೆಳತಿ ದಿಯಾ ಪಾಲು ಸುಮ್ನೆಕೊಟ್ಟರೆ ಸರಿ ಇಲ್ಲದಿದ್ದರೆ ಕೋರ್ಟಿಗೆ ಕೇಸು ಹಾಕು, ಪೂರ್ಣ ಆಸ್ತಿ ಬರುತ್ತೆ ಎಂಬುದನ್ನು ಹೇಳಿರಲು ಮನಸ್ಸು ಭಿನ್ನ ವಿಭಿನ್ನಗೊಂಡು ತುಂಬಾ ಗಲಿಬಿಲಿಯಲ್ಲಿದ್ದಾಗ ತಾನೇನು ಮಾಡಬೇಕು ಎಂಬುದಕ್ಕೆ ಗಂಡನ ಸಲಹೆ 'ಅದು ನೀನಾಗಿಯೇ ನಿರ್ಧರಿಸಬೇಕು' ಎಂಬುದಾಗಿತ್ತು. ಮಗ ಮಾತ್ರ ಹೋಗಲಿ ಬಿಡೆ ಅಮ್ಮಾ ಪಾಲು ತಗೊಂಡು ಪಾಲು ಏನ್ಮಾಡ್ತಿ ಸುಮ್ನೆ ಎಂದಿದ್ದ.

ಮಗಳ ಕುಪ್ಪಸ ಕಾರ್ಯಕ್ರಮ ಸಂಕ್ಷಿಪ್ತವಾಗಿ ಮಾಡಬೇಕೆಂದರೆ ಬೀಗರು ದೊಡ್ಡ ಪ್ರಮಾಣದಲ್ಲಿ ಮಾಡಬೇಕೆಂಬ ಉಮೇದಿನಲ್ಲಿದ್ದುದು ಗೊತ್ತಾದಾಗ ಆ ಕಾರ್ಯಕ್ರಮವೇ ರದ್ದುಗೊಳಿಸಿ ನಮ್ಮ ಮನೆಯಲ್ಲಿ ಸಾಲೋಳಿಲ್ಲವೆಂಬ ಸಂದೇಶ ಕೊಡಲಾಗಿತ್ತು. ಆದರೆ ತವರ್ಮನೆಯ ಮುಖಾಂತರ ಕುಪ್ಪಸ ಕಾರ್ಯಕ್ರಮ ಮಾಡಿದರೆ ಚಿಕ್ಕದಾಗಿ ಮಾಡಬಹುದೆಂಬ ಆಲೋಚನೆಯಲ್ಲಿ ಅವ್ವ ಅಣ್ಣಗೆ ಈ ಕಾರ್ಯಕ್ರಮ ಮಾಡಬೇಕೆಂದು ಹೇಳಿದಾಗ ತಪ್ಪಿಸಿಕೊಂಡರೆ ವಿನಹ ಭಾಗಿಯಾಗಲಿಲ್ಲ. ನಿಮ್ಮ ನಾದಿನಿಯವರ ಮುಖಾಂತರ ಮಾಡಿಕೊಳ್ಳಿ ಎಂಬ ಉದಾರ ಹಾಗೂ ಪುಕ್ಕಟೆಯ ಉಪದೇಶ ಅಣ್ಣನದಾಗಿತ್ತು. ಅಪ್ಪ ಇದ್ದಿದ್ದರೆ ಹೀಗನ್ನುತ್ತಿದ್ದರೆ? ಅವ್ವ ಇದ್ದಾಗಲೆ ತವರ್ಮನೆ ದೂರವಾಗುತ್ತಿರುವಾಗ ತವರ್ಮನೆಯ ಮಗಳು ತಾನಿಲ್ಲದಿರುವಾಗ ತಂಗಿ, ತಂಗಿಯ ಕುಟುಂಬದ ಬಗ್ಗೆ ಸುಖ ದುಃಖಗಳಲ್ಲಿ ಭಾಗಿಯಾಗದೆ ನಿರ್ಲಿಪ್ತವಾಗಿ ಪರಕೀಯನಾಗಿ ಇರುವ ಅಣ್ಣನಿರುವಾಗ ಹಾಲುಂಡ ತವರೆಂದು ನಾನೊಬ್ಬಳು ಜಪಿಸೋದರಲ್ಲಿ ಏನರ್ಥವಿದೆ?

ಕೃತಿಕಾ ಚಿಕ್ಕವಳಿದ್ದಾಗ ತಾನು ತವರ್ಮನೆಗೆ ಬಂದಾಗಲೆಲ್ಲಾ ಅಪ್ಪ ತಮ್ಮ ಮೊಮ್ಮಗಳಿಗೆ ಎಡ ಭುಜದ ಮೇಲೆ ಕೂಡಿಸಿಕೊಂಡು ಖುಷಿಯಿಂದ ಓಡಾಡುತ್ತಿದ್ದರು. ಮತ್ತೆ ಬೆನ್ನ ಮೇಲೆ ಕೂಡಿಸಿಕೊಂಡು ತಾವು ಕುದುರೆಯಾಗುತ್ತಿದ್ದರು. ಕೃತಿಕಾಳ ಜೊತೆಗಿನ ಈ ಆಟದಲ್ಲಿ ಸಮಯ ಬಿಟ್ಟು ಸಮಯ 'ಕೃತಿಕಾ ಬೇಟಾ ನೀನು ಯಾರ ಮಗಳು?' ಎಂದು ಕೇಳಿದಾಗ 'ಪಪ್ಪನ ಮಗಳು' ಎಂದು ಉತ್ತರಿಸುತ್ತಿದ್ದಳು. ಎಷ್ಟು ಸಲ ಕೇಳಿದರು ತಪ್ಪಿಯೂ ನನ್ನ ಕಡೆ ಬೊಟ್ಟು ಮಾಡುತ್ತಿರಲಿಲ್ಲ. ಇದಕ್ಕೆ ಸಿಟ್ಟಾದಂತೆ ನಟಿಸುತ್ತಾ ಇಲ್ಲ, ಕೃತಿಕಾ ನೀನು ನನ್ನ ಮಗಳ ಅಂದರೆ ಇವಳ ಮಗಳಿದ್ದಿ ಎಂದು ನನ್ನ ಕಡೆ ಬೊಟ್ಟು ಮಾಡಿದರೆ ಇಲ್ಲ ನಾನು ಪಪ್ಪನ ಮಗಳೇ ಇದ್ದೀನಿ ಎಂದು ಚೀರಿ ಚೀರಿ ಹೇಳೋದು ನಮಗೆಲ್ಲಾ ನಗುವಂತೆ ಮಾಡುತ್ತಿತ್ತು.

ತಮ್ಮ ಮೊಮ್ಮಗಳೊಂದಿಗೆ ದಿನಾ ಬೆಳಗಾದರೆ ಅಪ್ಪನ ಜುಗಲ್–ಬಂದಿಯ ಈ ಮಾತುಗಳಲ್ಲಿ ತಾತ್ಯಾ ಹೋಗಲಿ ಬಿಡ್ರಿ ಕೃತಿಕಾಗೆ ನನ್ನ ಮಗಳಾಗುವ ಇಷ್ಟವಿಲ್ಲ ಅಂತ ಕಾಣುತ್ತೆ ಎಂದಾಗ ಕೃತಿಕಾ ಇಲ್ಲ ಅಮ್ಮ, ನಾನು ಮೊದಲು ಪಪ್ಪನ ಮಗಳು ಆಮೇಲೆ ನಿನ್ನ ಮಗಳು ಎಂಬ ಸಮಜಾಯಿಸಿ ನೀಡುತ್ತಿದ್ದಳು.

ತಾತ್ಯಾ, ಕೃತಿಕಾ ಅವರಪ್ಪಗೆ ಎಷ್ಟು ಹಚ್ಚಿಕೊಂಡಿದ್ದಾಳೆಂದರೆ ದುಃಖದ, ಖುಷಿಯ ಯಾವುದೇ ಸಂದರ್ಭಗಳಲ್ಲಿ ಪಪ್ಪಾ ಎಂದು ನೆನೆಸುತ್ತಾಳೆ ವಿನಹ ನನ್ನನ್ನು ನೆನೆಸೊಲ್ಲ ಎಂದು ಹೇಳಿದ್ದ ತನಗೆ ಇಂದು ಮನೆಯಲ್ಲಿ ಕಾಲಿಡುವಾಗ ಯಾಕೋ ಒಂದು ರೀತಿಯ ಮುಜುಗರವೆನಿಸಿತ್ತು. ಇಡೀ ತನ್ನೆಲ್ಲಾ ಬಾಲ್ಯ ಕಳೆದ ತವರೂರು ಈವಾಗ ಬರಿದು ಬರಿದಾಗಿ ಸಂಪೂರ್ಣ ಬದಲಾಗಿದೆ ಎಂದೆನ್ನಿಸಿ ಅಂದಿನ ದಿನಗಳು ಮತ್ತೆ ಮತ್ತೆ ಮನಸ್ಸಿನ ತುಂಬಾ ತೇಲಾಡುತ್ತಾ ಕಣ್ಣು ಕಾಣುವ ದೃಶ್ಯಾವಳಿ, ಕಿವಿ ಕೇಳುವ ಧ್ವನಿಗಳಲ್ಲಿ ಮಧುರಮಯ ನೆನಪುಗಳು ಹೆಕ್ಕುವ ತನ್ನ ಪ್ರಯತ್ನಕ್ಕೆ ಹೃದಯ ಬಾಲ್ಯತನಕ್ಕೆ ಜಾರಿಕೊಂಡಿತು.

ಹೊರಬಾಗಿಲು ಮುಚ್ಚಿರಲು ಒಂದೆರಡು ಸಲ ಕರೆಗಂಟೆಯ ಬಟನ್ ಅದುಮಲಾಯಿತು 'ಆಇ' ಎದುರಾದಾಗ ಯಾವ ರೀತಿ ವರ್ತಿಸಬೇಕು? ವೈನಿಗೆ ಮತ್ತು ಅಣ್ಣನ ಜೊತೆ ಹ್ಯಾಗೆ ವ್ಯವಹರಿಸಬೇಕು? ಅವರಾಡುವ ಮಾತುಗಳಿಗೆ ಹೇಗೆ ಪ್ರತಿಕ್ರಿಯಿಸಬೇಕು? ಇತ್ಯಾದಿಯ ದಿನಚರಿಯ ಲೆಕ್ಕಾಚಾರದ ಗಣಿತದಲ್ಲಿ ಮನಸ್ಸು ಮುಳುಗಿರುವಾಗಲೆ ಅವ್ವ ಬಾಗಿಲು ತೆರೆದಾಗ ತಾನು ಹಾಗೇ ನಿಂತಿರಲು ಬಾ ಎಂದು ಒಳಕರೆದಳು.

ಟ್ರೇನ್‌ನಿಂದ ಬಂದಿಯಾ? ಬಸ್‌ನಿಂದ ಬಂದಿಯಾ? ಎಂದೆಲ್ಲಾ ಮೊದಲಿನಂತೆ ಕೇಳುವ ಕುಶಲೋಪರಿಯ ಯಾವ ಮಾತುಗಳನ್ನಾಡದೆ ಮೈಯಲ್ಲಿ ಹುಶಾರಿಲ್ಲವೆಂದು ಹೇಳುತ್ತಲೆ ದೊಡ್ಡದಾದ ತನ್ನ ಹೆಗಲ ಚೀಲವನ್ನು ಗಮನಿಸಿ ಏನಿದೆ? ಇದರಲ್ಲಿ ಎಂದು ಅವಳ ಕಣ್ಣುಗಳೆ ಪ್ರಶ್ನಿಸಿದವು.




ಅವ್ವನಿಗಿಂತ ಮೊದಲೆ ಹಾಲ್ ಕಡೆ ಹೆಜ್ಜೆ ಹಾಕಿ ದಿನಾ ಉಡುವ ಬಟ್ಟೆಗಳಿವೆ ಎಂದು ತನ್ನಲ್ಲೆ ಅಂದು ಕೊಳ್ಳುತ್ತಾ ಒಳ ಬಂದು ಸೋಫಾದ ಮೇಲೆ ಕುಳಿತು 'ವೈನೀ' ಎಂದು ಎರಡು ಮೂರು ಸಲ ಕರೆದರೂ ತನ್ನ ಕೋಣೆಯಿಂದ ಅವಳು ಹೊರಬರಲಿಲ್ಲ.

ಕ್ಷಣಗಳ ಕಾಲ ಅವ್ವ ಮಾತಾಡದೆ ಇರುವುದು, ವೈನಿ ಹೊರ ಬಂದು ನೋಡದೆ ಇರುವುದು ಗಮನಿಸಿದ ನಿರ್ಮಲಾ ತಾನೇ ಎದ್ದು ಬಚ್ಚಲ ಮನೆಗೆ ಹೋಗಿ ಫ್ರೆಶ್ ಆದಳು. ದೇವರ ಮನೆಯಲ್ಲಿ ಕುಳಿತುಕೊಂಡು ಗಳಿಗೆ ಕಾಲ ಧ್ಯಾನಸ್ಥಳಾಗಿ ಅಡುಗೆ ಮನೆಗೆ ಹೋಗಿ ನೋಡಲು ಅತ್ತಿಗೆ ಅಲ್ಲಿಯೂ ಇರಲಿಲ್ಲ. ತಾನಾಗಿಯೇ ಊಟ ಬಡಿಸಿಕೊಂಡು ಊಟ ಮಾಡಿದವಳೆ ಗೆಳತಿಯ ಮನೆಗೆ ಹೋಗಿ ಬರುತ್ತೇನೆಂದು ಅವ್ವಗೆ ಹೇಳಿ ಹೊರನಡೆದಳು.

ಸಂಜೆ ಮನೆಗೆ ಬಂದಾಗ ಅಣ್ಣ "ಯಾವಾಗ ಬಂದಿ?" ಎಂದು ಮಾತಾಡಿಸಿದ. ಎರಡು ಮೂರು ದಿನಗಳ ಕಾಲ ಯಾರೂ ಏನೇನು ಮಾತಾಡದೆ ಇರುವಾಗ ನಾಲ್ಕನೆಯ ದಿನಕ್ಕೆ ವೈನಿ ಅಣ್ಣನ ಜೊತೆ ಮಾತಾಡೋದು ಕಿವಿಯ ಮೇಲೆ ಬಿತ್ತು.

"ಹಿಂಗ ಮನ್ಯಾಗ ಬಂದು ಕುಂತಿದು ನೋಡಿದ್ರ ಗಂಡನ ಮನೆಗೆ ತಿರುಗಿ ಹೋಗಲಾರದ ಹಂಗ ಕುಂತಾಳ. ಅವಳದು ಅವಳ ಪಾಲು ಕೊಟ್ಟು ಬಿಡ್ರಿ. ರಜಾ ಸಿಗಲ್ಲ ರಜಾ ಸಿಗಲ್ಲ ಅನ್ನಬೇಡಿ. ಮನೆಯಲ್ಲಿ ಯಾರಾದ್ರು ಸತ್ತಾರ ಅಂತ ಹೇಳಿಯಾದ್ರು ರಜೆ ಪಡೆದುಕೊಂಡು ಅವಳ ಪಾಲುಕೊಡಿ. ನಮ್ಮ ಸಲುವಾಗಿ ಅವ್ವ ತಾಯಿ ಮಗಳು ದಿನಾ ಜಗಳವಾಡೋದು ಬೇಡ...."

"ನಿರ್ಮಲಾ ಈ ರೀತಿ ಪಾಲು ಕೇಳ್ತಾಳೆ ಅಂತ ನಾನು ಕನಸು ಮನಸಿನಲ್ಲಿಯೂ ಯೋಚಿಸಿರಲಿಲ್ಲ. ಇದು ಅವಳು ಸ್ವಂತ ಬುದ್ಧಿಯಿಂದ ಕೇಳ್ತಾ ಇಲ್ಲ....." ಅಣ್ಣ ಇನ್ನು ಏನೇನೋ ಹೇಳ್ತಾ ಇದ್ದ.

"ಮಗಾ ನೀ ಏಟ್ ಜಿದ್ದಿ ಇದ್ದೆ. ನಿನ್ನ ಬಾಲ್ಯದ ಹಠ ಇನ್ನೂ ಹಾಗೆ ಅದ. ಆವಾಗ ಉಪವಾಸ ಬಿದ್ದು ನನ್ನನ್ನು ಮಣಿಸುತ್ತಿದ್ದಿ. ಇವಾಗ ಮಾತಾಡದೆ ಮನೆಯಲ್ಲಿ ಠಿಕಾಣಿ ಹೂಡಿ ನನಗೆ ಮಣಿಸ್ತಾ ಇದ್ದಿ, ಆವಾಗ ನಾ ಸೋತರು ನಿನ್ನ ಖುಷಿಯಲ್ಲಿ ನಾನೇ ಗೆಲವು ಕಾಣ್ತಿದ್ದೆ. ಆದರೆ ಇವಾಗಿನದು ತುಂಬಾ ವಿಚಿತ್ರ. ನಿನ್ನ ಅಣ್ಣ ಹುಟ್ಟುವಾಗ ತಿಂದ ಹೆರಿಗೆ ಬೇನೆಯಷ್ಟೆ ನಿನ್ನನ್ನು ಹಡೆಯುವಾಗಲು ತಿಂದಿನಿ. ಹೆರಿಗೆ ಬೇನೆಯಲ್ಲಿ ತಾರತಮ್ಯವಿಲ್ಲ ಎಂದ ಮೇಲೆ ಮಕ್ಕಳಲ್ಲಿಯೂ ತಾರತಮ್ಯ ನಾ ಹ್ಯಾಗ ಮಾಡ್ತಿನಿ? ಆದರೆ ನಮ್ಮ ಮುಖ ಮುಂದಕ್ಕಿರ್ತದ ಹಿಂದಕ್ಕಲ್ಲ. ಇವಾಗ ನೀ ಗೆದ್ದು ನೀನೆ ಸೋಲ್ತಿ ನಾನಲ್ಲ.

ಕೊನೆಗೂ ಅವ್ವ ತನ್ನ ನಿರ್ಧಾರ ಪ್ರಕಟಿಸಿದಳು.

**ಶಿವಕುಮಾರ ನಾಗವಾರ**
ಮನೆ ಸಂಖ್ಯೆ : ೧೭–೫–೪೫೧, ಮುಸ್ತಾಪೂರೆ ಲೇಔಟ್
ಸಂಗಮೇಶ್ವರ ನಗರ, ಗುಂಪಾ, ಬೀದರ – ೫೮೫೪೦೩

ಮೂಲ : ಅಮಿತ್ ಸೇನ್‌ಗುಪ್ತ

ಕನ್ನಡಕ್ಕೆ : ಜ಼ಾಹಿದಾ ಶಿರೀನ್





# ಕೆಂಪು ರೋಸಾ

(ಸ್ವಾತಂತ್ರ್ಯ ಎಂದರೆ ಯಾವಾಗಲೂ ಭಿನ್ನಮತೀಯರಿಗೆ ಇರುವ ಸ್ವಾತಂತ್ರ್ಯ ಎಂದೇ ಅರ್ಥ)

ಸಮಾಜವಾದದ ಇತಿಹಾಸವು ಎಂದಿಗೂ ಅತ್ಯಾಕರ್ಷಕವಾಗಿದೆ. ಅದು ರಕ್ತದ ಬಣ್ಣವನ್ನು ಹೊಂದಿದೆ ಹಾಗೂ ಅದಕ್ಕೆ ಆಳವಾದ ರಮ್ಯವಾದಿ ಬೇರುಗಳಿವೆ. ಹಲವಾರು ಶತಮಾನಗಳಿಂದಲೂ ರಮ್ಯವಾದಿ ಆಲೋಚನೆಗಳನ್ನು ಹೊಂದಿರುವ ಸಮಾಜವಾದಿಗಳು ಸಾವಿಲ್ಲದ ಸಮಾಜವಾದಿ ಅಸ್ತಿತ್ವಕ್ಕೆ ಕೊಡುಗೆಯನ್ನು ನೀಡುತ್ತಲೇ ಬಂದಿದ್ದಾರೆ.

ಸಮಾಜವಾದದ ಇತಿಹಾಸದಲ್ಲೇ ರೋಸಾ ಲುಕ್ಸೆಂಬರ್ಗ್‌ರಂತೆ ಒಂದು ಕಡೆ ತೀಕ್ಷ್ಣ ಸಿದ್ಧಾಂತಿಯಾಗಿದ್ದು ಇನ್ನೊಂದೆಡೆ ಸ್ಫೋಟಕ ರಾಜಕಾರಣಿ ಎಂಬ ರೂಪಕಕ್ಕೂ ಹೊಂದುವಂತಿರುವವರು ಬಹು ವಿರಳ. ದಿನಪತ್ರಿಕೆಗಳಲ್ಲಿ ಹೆಚ್ಚು ಕಡಿಮೆ ಪ್ರತಿದಿನವೂ ಬರುತ್ತಿದ್ದ ಆಕೆಯ ಲೇಖನಗಳು, ಪಕ್ಷ ಹಾಗೂ ಕಾರ್ಮಿಕ ಸಂಘಗಳ ಸಭೆಗಳಲ್ಲಿನ ಆಕೆಯ ಭಾಷಣಗಳು ಹಾಗೂ ಆಕೆಯ ಪತ್ರಗಳು ಆಕೆಯ ಪ್ರತಿಭೆಯನ್ನು ಸಾಬೀತುಪಡಿಸುತ್ತವೆ.

ಜ಼ಮೋಸ್ಕ್‌ನಲ್ಲಿ ರಷ್ಯಾದ ನಿಯಂತ್ರಣದಲ್ಲಿದ್ದ ಪೋಲೆಂಡ್‌ನಲ್ಲಿ ನೆಲೆಸಿದ್ದ ಪೋಲಿಶ್ ಯಹೂದಿ ಕುಟುಂಬ ಒಂದರಲ್ಲಿ ಮಾರ್ಚ್ ೫, ೧೮೭೧ರಂದು ಲುಕ್ಸೆಂಬರ್ಗ್ ಜನಿಸಿದರು. ಮರದ ವ್ಯಾಪಾರಿಯಾದ ಎಲಿಯಾಜ಼್ ಲುಕ್ಸೆಂಬರ್ಗ್ ಮತ್ತು ಲೈನ್ ಲೊವೆನ್‌ಸ್ಟೈನ್‌ರ ಐದನೆಯ ಹಾಗೂ ಕಿರಿಯ ಮಗಳು ಆಕೆ. ಪ್ರಗತಿಪರ ಹಾಗೂ ಉದಾರವಾದಿ ವಿಚಾರಗಳಲ್ಲಿ ಆಸಕ್ತಿಯನ್ನು ತಂದೆ ತನ್ನಲ್ಲಿ ಬಿತ್ತಿದರು ಎಂಬುದಾಗಿ ಲುಕ್ಸೆಂಬರ್ಗ್ ತಾವೇ ಹೇಳಿಕೊಂಡಿದ್ದಾರೆ. ತಾಯಿ ಧರ್ಮಶ್ರದ್ಧೆಯುಳ್ಳವರು ಹಾಗೂ ಮನೆಯಲ್ಲಿದ್ದ ಪುಸ್ತಕಗಳನ್ನೆಲ್ಲಾ ಓದಿಕೊಂಡಿದ್ದ ವಿದ್ಯಾವಂತರು. ಮನೆಯಲ್ಲಿ ಜರ್ಮನ್ ಮತ್ತು ಪೋಲಿಶ್ ಭಾಷೆಗಳನ್ನು ಮಾತನಾಡುತ್ತಿದ್ದರೂ ಲುಕ್ಸೆಂಬರ್ಗ್ ರಷ್ಯನ್ ಭಾಷೆಯನ್ನು ಕಲಿತರು.

೧೮೭೩ರಲ್ಲಿ ಕುಟುಂಬವು ವಾರ್ಸಾಗೆ ತೆರಳಿತು. ಐದನೆಯ ವಯಸ್ಸಿನಲ್ಲಿ ಸೊಂಟದ ಬೇನೆಯಿಂದ ಹಾಸಿಗೆ ಹಿಡಿದ ರೋಸಾಗೆ ನಂತರ ಕುಂಟುವಿಕೆ ಶಾಶ್ವತವಾಯಿತು. ೧೮೮೪ರಲ್ಲಿ ವಾರ್ಸಾದ ಜಿಮ್ನೇಶಿಯಂನಲ್ಲಿ (ಕೇವಲ ಹುಡುಗಿಯರ ಸೆಕೆಂಡರಿ ಸ್ಕೂಲ್) ನೋಂದಾಯಿಸಿಕೊಂಡ ರೋಸಾ ೧೮೮೭ರವರೆಗೂ ಅಲ್ಲೇ ಮುಂದುವರೆದಳು. ಆ ಶಾಲೆಯು ಪೋಲಿಶ್ ಅಭ್ಯರ್ಥಿಗಳನ್ನು ಅಪರೂಪಕ್ಕೆ ಸೇರಿಸಿಕೊಳ್ಳುತ್ತಿತ್ತು. ಅದರಲ್ಲೂ ಯಹೂದಿ ಮಕ್ಕಳನ್ನು ಸೇರಿಸಿಕೊಳ್ಳುವುದು ಅತಿ ವಿರಳ. ಅಲ್ಲಿ ಮಕ್ಕಳು ಕೇವಲ ರಷ್ಯನ್ ಭಾಷೆಯಲ್ಲಿ ಮಾತನಾಡಬೇಕಿತ್ತು. ೧೮೮೬ರಲ್ಲೇ ರೋಸಾ ಲುಕ್ಸೆಂಬರ್ಗ್ ಪೋಲೆಂಡ್‌ನ ಎಡವಾದಿ ಕಾರ್ಮಿಕ ಪಕ್ಷಕ್ಕೆ ಸೇರಿಕೊಂಡಳು. ೧೮೮೨ರಲ್ಲಿ ಎಂದರೆ ರಷ್ಯನ್ ಕಮ್ಯುನಿಸ್ಟ್ ಪಕ್ಷದ ಸ್ಥಾಪನೆಗೆ ಇಪ್ಪತ್ತು ವರ್ಷ ಮುಂಚೆಯೇ ಆ ಪಕ್ಷ ಸ್ಥಾಪಿತವಾಗಿತ್ತು.

ಸಾರ್ವತ್ರಿಕ ಮುಷ್ಕರವನ್ನು ಸಂಘಟಿಸುವ ಮೂಲಕ ಆಕೆ ತನ್ನ ರಾಜಕೀಯ ಚಟುವಟಿಕೆಗಳನ್ನು ಪ್ರಾರಂಭಿಸಿದರು. ಈ ಮುಷ್ಕರದ ಪರಿಣಾಮವಾಗಿ ಕಾರ್ಮಿಕ ಪಕ್ಷದ ನಾಲ್ಕು ಜನ ನಾಯಕರಿಗೆ ಮರಣದಂಡನೆ ವಿಧಿಸಲಾಯಿತು ಹಾಗೂ ಪಕ್ಷವನ್ನು ವಿಸರ್ಜಿಸಲಾಯಿತು. ಆದರೂ ಲುಕ್ಸೆಂಬರ್ಗ್ ಸೇರಿದಂತೆ ಉಳಿದ ಸದಸ್ಯರು ಗುಪ್ತವಾಗಿ ಭೇಟಿಯಾಗುತ್ತಿದ್ದರು. ೧೮೮೭ರಲ್ಲಿ ಪ್ರೌಢ ಹಂತದ ಪರೀಕ್ಷೆಯಲ್ಲಿ ಆಕೆ ಉತ್ತೀರ್ಣರಾದರು. ಬಂಧನದಿಂದ ತಪ್ಪಿಸಿಕೊಳ್ಳಲು ೧೮೮೯ರಲ್ಲಿ ಸ್ವಿಟ್ಸರ್‌ಲ್ಯಾಂಡ್‌ಗೆ ಹೋಗಿ ಅಲ್ಲಿನ ಜ್ಯೂರಿಕ್ ವಿಶ್ವವಿದ್ಯಾಲಯದಲ್ಲಿ ತತ್ವಶಾಸ್ತ್ರ, ಇತಿಹಾಸ, ರಾಜಕೀಯ, ಅರ್ಥಶಾಸ್ತ್ರ ಹಾಗೂ ಗಣಿತಶಾಸ್ತ್ರಗಳನ್ನು ಅಭ್ಯಾಸ ಮಾಡಿದರು. ಅಲ್ಲದೆ ರಾಜ್ಯಶಾಸ್ತ್ರದಲ್ಲಿ ಮಧ್ಯಯುಗದ ಅಧ್ಯಯನದಲ್ಲಿ ಆರ್ಥಿಕತೆ ಮತ್ತು ಷೇರುಪೇಟೆ ವಿನಿಮಯದ ಬಿಕ್ಕಟ್ಟುಗಳ ಬಗ್ಗೆ ವಿಶೇಷ ಪರಿಣತಿಯನ್ನು ಪಡೆದರು.

ಲುಕ್ಸೆಂಬರ್ಗ್‌ರ ಜೀವನದ ಬಗ್ಗೆ ಆಕೆ ಮಾಡಿರುವ ಕೆಲಸವೇ ಸಾಕ್ಷಿಯಾಗಿದೆ. ಆಕೆ ಅನೇಕ ಭಾಷೆಗಳಲ್ಲಿ ಓದಿದಳು, ಬರೆದಳು, ಮಾತನಾಡಬಲ್ಲವಳಾದಳು. ತನ್ನ ಇಪ್ಪತ್ತಾರನೆಯ ವಯಸ್ಸಿನಲ್ಲೇ ಪಿಎಚ್‌ಡಿ ಮುಗಿಸಿದರು. ಹಲವಾರು ಸಮಾಜವಾದಿ ಚಿಂತನೆಯ ಪತ್ರಿಕೆಗಳನ್ನು ಹಾಗೂ ಪಕ್ಷಗಳನ್ನು ಸಹ ಒಂದರ ನಂತರ ಇನ್ನೊಂದರಂತೆ ಸ್ಥಾಪಿಸಿದರು. ಸಮಾಜವಾದದ ಬಗ್ಗೆ ಆಕೆಗಿದ್ದ ಒಲವನ್ನು ಜರ್ಮನಿಯ ಕಾರ್ಮಿಕರ ಹೋರಾಟವನ್ನು ಅಧ್ಯಯನ ಮಾಡುವ ಮೂಲಕ ಮಾತ್ರ ಅರ್ಥಮಾಡಿಕೊಳ್ಳ ಬಹುದು. ಆಕೆಯ ಇನ್ನಿತರ ಸಮಾಜವಾದಿ ವ್ಯಕ್ತಿಗಳ ಮನಸ್ಸಿನಲ್ಲಿ ಸಮಾಜವಾದಿ ವಿಚಾರಗಳ ಕಿಡಿಯನ್ನು ಹೊತ್ತಿಸಿದ್ದು ಅಂದಿನ ವಿಶಿಷ್ಟವಾದ ಜರ್ಮನಿಯ ಸನ್ನಿವೇಶ. ಆಕೆ ಕ್ಲಾರಾ ಜ಼ೆಟ್‌ಕಿನ್ ಮತ್ತಿತರ ಧೀಮಂತ ವ್ಯಕ್ತಿಗಳೊಂದಿಗೆ ನಿಕಟ ಸಂಪರ್ಕವನ್ನು ಹೊಂದಿದ್ದರು. ೧೯೧೪ರ ಮೊದಲನೇ ಜಾಗತಿಕ ಯುದ್ಧದಲ್ಲಿ ಎಸ್‌ಪಿಡಿಯ ಜೊತೆಗೂಡಿ ಜರ್ಮನ್ ಜನಸಾಮಾನ್ಯರು ಘೋರ ಯುದ್ಧದಲ್ಲಿ ಪಾಲ್ಗೊಂಡ ನಂತರವೂ ಸಹ ಜರ್ಮನಿಯಲ್ಲಿ ಸಮಾಜವಾದದ ವಿಜಯ ಸಾಧ್ಯವೆಂದು ರೋಸಾ ಹಾಗೂ ಇನ್ನೂ ಹಲವರು ನಂಬಿದ್ದರು. ಜರ್ಮನ್ ಕಾರ್ಮಿಕ ವರ್ಗವು ಪರಿಸ್ಥಿತಿಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಮಾರ್ಪಡಿಸಿಕೊಳ್ಳಲು ಸಾಧ್ಯ ಎಂಬುದು ಆಕೆಯ ನಂಬಿಕೆಯಾಗಿತ್ತು. ೧೯೦೫ರ ವಿಫಲ ರಷ್ಯನ್ ಕ್ರಾಂತಿಯು ಅಂತಹ ರಾಜಕೀಯ ಬದಲಾವಣೆಗೆ ಉದಾಹರಣೆಯಾಗಿ ಕಣ್ಣ ಮುಂದಿತ್ತು. ಮಾರ್ಕ್ಸ್ ವಾದದ ಬಗ್ಗೆ ಆಕೆಯ ತಿಳುವಳಿಕೆ ಪ್ರಭಾವಶಾಲಿ ಯಾಗಿತ್ತು. ಆಕೆ ಸತತವಾಗಿ ಚರ್ಚೆ ಮಾಡುವ ಸಾಮರ್ಥ್ಯವುಳ್ಳ ಸಮಾಜವಾದಿ ನಾಯಕಿ. ಲೆನಿನ್‌ರಿಗೆ ಆಕೆ ಸಮಾಜವಾದದ ಬಗ್ಗೆ ಹಲವಾರು ಸವಾಲು ಗಳನ್ನು ಎಸೆದಂಥವರು. ಆ ವಾಗ್ವಾದ ಹಲವಾರು ತಾತ್ವಿಕ ಚರ್ಚೆಗಳಿಗೆ ಆಸ್ಪದ ನೀಡಿತ್ತು. ಬಹುಶಃ

ಸಮಾಜವಾದಿ ವ್ಯವಸ್ಥೆಯಲ್ಲಿ ಒಕ್ಕೂಟದಲ್ಲಿನ ರಾಷ್ಟ್ರಗಳು ಸ್ವಯಂ ನಿರ್ಣಯವನ್ನು ಚಲಾಯಿಸುವ ಹಕ್ಕನ್ನು ನಿರಾಕರಿಸಬೇಕು ಎಂಬ ನಿಲುವಿನಿಂದ ರೋಸಾ ಲೆನಿನ್‌ರೊಡನೆ ನಡೆಸಿದ ಚರ್ಚೆಯಿಂದ ಇಡೀ ಸಮಾಜವಾದಿ ಜಗತ್ತೇ ಸೈದ್ಧಾಂತಿಕ ಚರ್ಚೆಯಲ್ಲಿ ತೊಡಗಿತು. ಆಕೆಯ ಪ್ರಖ್ಯಾತ ಲೇಖನ "ದಿ ರಷ್ಯನ್ ರೆವಲ್ಯೂಷನ್" (ರಷ್ಯಾದ ಕ್ರಾಂತಿ) ಬೊಲ್ಷೆವಿಕ್‌ರ ಸರ್ವಾಧಿಕಾರವನ್ನು ಟೀಕಿಸಿ, ಬೊಲ್ಷೆವಿಕ್ ಮಾದರಿಯ ಕಾರ್ಮಿಕ ವರ್ಗದ ಸರ್ವಾಧಿಕಾರದ ಬಗ್ಗೆ ವಿಭಿನ್ನ ಪ್ರಕಾರದ ವಿಮರ್ಶೆಯನ್ನು ಪ್ರಾರಂಭಿಸಿತು.

ನಂತರದಲ್ಲಿ ರೋಸಾ, ಸ್ವತಃ ತನ್ನ ಪಕ್ಷವಾದ "ಸೋಷಿಯಲ್ ಡೆಮಾಕ್ರೆಟಿಕ್ ಪಾರ್ಟಿ ಆಫ್ ಜರ್ಮನಿ"ಯನ್ನೇ ಅದರ ಧೋರಣೆಗಳ ಕುರಿತಾಗಿ ಟೀಕಿಸ ಲಾರಂಭಿಸಿದರು. ಮೊದಲನೆಯ ಮಹಾಯುದ್ಧದಲ್ಲಿ ಅವರ ಪಾಲ್ಗೊಳ್ಳುವಿಕೆಯ ಕುರಿತಾಗಿ ಆಕೆ ಟೀಕಿಸಿದ್ದರು. ಕಾರ್ಮಿಕ ವರ್ಗದ ಯುವಕರನ್ನು ಯುದ್ಧದಲ್ಲಿ ಹೋರಾಡಲು ಕಳುಹಿಸಿ ಅವರು ಕೊಲೆಯಾಗುವುದನ್ನು ರೋಸಾ ವಿರೋಧಿಸಿದರು. ಪಕ್ಷದ ನಾಯಕರು ಬಂಡವಾಳಗಾರರ ಗುಮಾಸ್ತರಾಗಿದ್ದಾರೆಂದು ಟೀಕಿಸಿದರು. ಈ ವಿಚಾರಗಳನ್ನು ಮುಂದಿಟ್ಟುಕೊಂಡು ರೋಸಾ ಲುಕ್ಸೆಂಬರ್ಗ್, ಕಾರ್ಲ್ ಲೀಬ್‌ನೆಕ್ಟ್‌ ರೊಡಗೂಡಿ ಜರ್ಮನಿಯಲ್ಲಿ ಪ್ರಬಲವಾದ ಚಳುವಳಿಯನ್ನು ಬೆಳೆಸಿದರು. ಆದರೆ ಆಕೆಯನ್ನು ಬಂಧಿಸಲಾಯಿತು. ಜರ್ಮನಿಯ ಸೋಷಿಯಲ್ ಡೆಮಾಕ್ರೆಟಿಕ್ ಪಕ್ಷವು ಪ್ರಬಲವಾಗಿ ವಿರೋಧಿಸಿದ್ದ, ೧೯೧೯ರ ವಿಫಲ ಕ್ರಾಂತಿಯಲ್ಲಿ ಆಕೆಯು ಭಾಗವಹಿಸಿದ್ದಕ್ಕಾಗಿ, ಬಂಧನದಿಂದ ಬಿಡುಗಡೆಯಾದ ಮೇಲೆ ಜನವರಿ ೧೫, ೧೯೧೯ರಂದು ಆಕೆಯನ್ನು ಹತ್ಯೆ ಮಾಡಲಾಯಿತು.

ರೋಸಾರ ಜೀವಿತಾವಧಿಯಲ್ಲಿ 'ಬಂಡವಾಳದ ಕ್ರೋಢೀಕರಣ' ಎಂಬ ಪುಸ್ತಕ ಮಾತ್ರ ಪ್ರಕಟಗೊಂಡಿತ್ತು.

ಆಕೆಯ ಮರಣದ ನಂತರ, ದುಃಖತಪ್ತರಾಗಿ ಲೆನಿನ್ ಹೇಳುತ್ತಾರೆ: "ಆಕೆ ಮಾಡಿದ ತಪ್ಪುಗಳ ಹೊರತಾಗಿಯೂ ಆಕೆ ನಮ್ಮ ಪಾಲಿಗೆ ಒಂದು ಗರುಡ ಪಕ್ಷಿಯಂತೆ. ಕಮ್ಯುನಿಸ್ಟರು ಮಾತ್ರವಲ್ಲದೆ ಪ್ರಪಂಚದಾದ್ಯಂತ ಆಕೆಯನ್ನು ನೆನಪಿಸಿಕೊಳ್ಳುತ್ತಾರೆ. ಆಕೆಯ ಜೀವನ ಚರಿತ್ರೆ ಹಾಗೂ ಆಕೆಯ ಬರಹಗಳ ಸಮಗ್ರ ಸಂಪುಟಗಳನ್ನು ಪ್ರಕಟಿಸುವಲ್ಲಿ ಜರ್ಮನ್ ಕಮ್ಯುನಿಸ್ಟರು ಅತಿಯಾಗಿ ವಿಳಂಬ ಮಾಡುತ್ತಿದ್ದಾರೆ. ಅವರು ನಡೆಸುತ್ತಿರುವ ಹೋರಾಟ, ಅನುಭವಿಸುತ್ತಿರುವ ನಷ್ಟವನ್ನು ಗಮನಿಸಿ ಸ್ವಲ್ಪ ಮಟ್ಟಿಗೆ ಅವರನ್ನು ಕ್ಷಮಿಸಬಹುದು. ಅದೇನೇ ಇರಲಿ ಆ ಸಂಪುಟಗಳು ಹೊರಬಂದಾಗ ಹಲವು ತಲೆಮಾರಿನ ಕಮ್ಯುನಿಸ್ಟರಿಗೆ ಅವು ತರಬೇತಿ ನೀಡುವ ಕೈಪಿಡಿಯಾಗಬಹುದು. ೪ನೇ ಆಗಸ್ಟ್ ೧೯೧೪ರಿಂದ ಜರ್ಮನಿಯ ಸೋಷಿಯಲ್ ಡೆಮಾಕ್ರೆಸಿ ಚಳುವಳಿ ಎನ್ನುವುದು ಒಂದು ಕೊಳೆಯುತ್ತಿರುವ ಶವದಂತಾಗಿದೆ." ಈ ಹೇಳಿಕೆಯು ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಚಳುವಳಿಯ ಇತಿಹಾಸದಲ್ಲಿ ರೋಸಾ ಲುಕ್ಸೆಂಬರ್ಗ್‌ರ ಹೆಸರನ್ನು ಚಿರಸ್ಥಾಯಿಯಾಗಿಸುತ್ತದೆ.

**ಜನವರಿ ೧೫, ೨೦೧೯**

ಪ್ರತಿವರ್ಷದಂತೆ ಈ ವರ್ಷವೂ ಸಹ ಜರ್ಮನಿಯ ಬರ್ಲಿನ್‌ನಲ್ಲಿ, ಕೆಟ್ಟ ಹವಾಮಾನವನ್ನು ಲೆಕ್ಕಿಸದೆ ಬಹುದೊಡ್ಡ ಸಂಖ್ಯೆಯಲ್ಲಿ ಜನರು ಮೌನವಾಗಿ ರೋಸಾ ರವರ ಸಮಾಧಿಯತ್ತ ಸಾಗಿದರು. ಪ್ರತಿಯೊಬ್ಬರೂ ಸಹ ಪುಟ್ಟ ಕೆಂಗುಲಾಬಿಯನ್ನು ಕೈಯಲ್ಲಿ ಹಿಡಿದಿದ್ದರು. ಶೀತವಾದ ಗಾಳಿ, ಹೆಪ್ಪುಗಟ್ಟಿಸುವ ಮಳೆಯ ನೀರಿನ ಹನಿಗಳೂ ಸಹ ಕೆಂಗುಲಾಬಿಯ ಪಕಳೆಗಳನ್ನು ಹಾಳುಮಾಡಲು ಸಾಧ್ಯವಾಗಲಿಲ್ಲ.

ರೋಸಾ ಮರಣ ಹೊಂದಿದ್ದರೂ, ಆಕೆಯ ನೆನಪು ನಮ್ಮೊಂದಿಗಿದೆ. ಆಕೆಯ ಬಗ್ಗೆ ಬರೆಯಲು, ಆಕೆಯ ಬಗ್ಗೆ ಸಿನಿಮಾ ಮಾಡಲು, ಆಕೆಯ ಬಗ್ಗೆ ಚರ್ಚೆ ಮಾಡಲು ನಮಗೆ ಖುಷಿ ಎನಿಸುತ್ತದೆ. ಹಿಂದೆಯೂ, ಮುಂದೆಯೂ, ಎಂದೆಂದಿಗೂ ರೋಸಾ ನಮ್ಮೊಂದಿಗಿದ್ದಾರೆ.


ಮೂಲ : **ಅಮಿತ್ ಸೇನ್‌ಗುಪ್ತ**
ಕನ್ನಡಕ್ಕೆ : **ಜ್ಞಾಹಿದಾ ಶಿರೀನ್**
ನಂ. ೧೩೦, ಔಟ್‌ಹೌಸ್, ಮೊದಲನೆ ಮಹಡಿ, ಗೋವಿಂದಪ್ಪ ರಸ್ತೆ
ಗಾಂಧಿಬಜಾರ್, ಬೆಂಗಳೂರು – ೫೬೦ ೦೦೪


## ಒಂಟಿಯಾದರೂ ಸರಿಯೇ

**ಒಂ**ಟಿಯಾದರೂ ಸರಿಯೇ ಒಬ್ಬಂಟಿಯಾದರೂ ಸರಿಯೇ
ನಡೆ ಮುಂದೆ ನಡೆ ಮುಂದೆ ನಡೆ ಮುಂದೆ
ಒಂಟಿಯಾದರೂ ಸರಿಯೇ ಒಬ್ಬಂಟಿಯಾದರೂ ಸರಿಯೇ
ಇಡು ಹೆಜ್ಜೆ ಮುಂದೆ ಇಡು ಹೆಜ್ಜೆ ಮುಂದೆ

ಸುತ್ತ ಮುತ್ತಲೂ ಕರಾಳ ಕತ್ತಲು
ಅನ್ನುವ ಭಯವು ಮನದಲಿ ಬೇಡ
ದೂರ ಗುರಿಯ ದಾರಿ ಹೃದಯದೊಳಗಿರಲಿ
ಹಸಿವು ನೀರಡಿಕೆ ಸನಿಹ ಬರದಿರಲಿ

ನಗುವುದೀ ಲೋಕ ನಿನ್ನನು ನೋಡಿ
ಜರಿಯುವುದು ಜಗವು ಹುಚ್ಚಿಯ ಮಾಡಿ
ಅವಮಾನ ಅಪಹಾಸ್ಯ ನಿನ್ನ ಪಾಲಿನ ಬುತ್ತಿ
ಕಲ್ಲು ಕಂಟಿ ಮುಳ್ಳು ನಿತ್ಯ ಸಂಗಾತಿ

ಒಳಗಣ್ಣಿಗೆ ಸಿಕ್ಕ ಸತ್ಯದ ಬೆಳಕು
ಆರದಿರಲಿ ಆ ದೀಪ ಎಂದೆಂದಿಗೂ
ಧೈರ್ಯದ ಒರತೆ ಒಳಗಿಟ್ಟುಕೊಂಡು
ಕಾಲಿಗೆ ಕಿರುಗೆಜ್ಜೆ ಕಟ್ಟಿಕೊಂಡು

ಒಂಟಿಯಾದರೂ ಸರಿಯೇ ಒಬ್ಬಂಟಿಯಾದರೂ ಸರಿಯೇ
ನಡೆ ಮುಂದೆ ನಡೆ ಮುಂದೆ ನಡೆ ಮುಂದೆ
ಒಂಟಿಯಾದರೂ ಸರಿಯೇ ಒಬ್ಬಂಟಿಯಾದರೂ ಸರಿಯೇ
ಇಡು ಹೆಜ್ಜೆ ಮುಂದೆ ಇಡು ಹೆಜ್ಜೆ ಮುಂದೆ


**ಡಾ|| ಸಂಜೀವ ಕುಲಕರ್ಣಿ**
ನಗ ಮಲ್ಲಿಗೆ, ಡಾ|| ಕೆ. ಎಸ್. ದೇಶಪಾಂಡೆ ಆವರಣ, ೧೦/೧, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ – ೫೮೦ ೦೦೭




# ನವಜಾತ ಶಿಶುಗಳ ರಕ್ಷಕಿ
# ವರ್ಜಿನಿಯಾ ಎಪಾರ್ಗೆ

**ಸರೋಜಾ ಸಂತಿ**

ವರ್ಜಿನಿಯಾ ಎಪಾರ್ಗೆ ಹೆಸರು ವೈದ್ಯವಿಜ್ಞಾನದಲ್ಲಿ ಚಿರಪರಿಚಿತ. ಒಂದು ಮಗು ಜನಿಸುವ ಮೊದಲು ಮತ್ತು ನಂತರ ಎಪಾರ್ಗೆ ಹೆಸರು ಚಾಲನೆಯಲ್ಲಿರುತ್ತದೆ. ಈಕೆ ನೀಡಿದ ಕೊಡುಗೆಯಿಂದಾಗಿ ಹಲವಾರು ನವಜಾತ ಶಿಶುಗಳು ಆರೋಗ್ಯಯುತವಾಗಿ ಬೆಳೆಯಲು ಕಾರಣೀಕರ್ತಳಾಗಿದ್ದಾಳೆ. ಭವಿಷ್ಯದ ಪ್ರಜೆಗಳ ಬೆಳವಣಿಗೆಗೆ ಎಪಾರ್ಗೆ ಕೊಡುಗೆ ಅಮೂಲ್ಯವಾದುದು. ಈಕೆಯ ಜೀವನ ನನಗೆ ಒಬ್ಬ ಸ್ತ್ರೀವಾದಿಯ ಬದುಕಂತೆ ಭಾಸವಾಗುತ್ತದೆ. ಈಕೆ "ಮಹಿಳೆಯ ವಿಮೋಚನೆ ಯಾವಾಗ ಆಗುತ್ತದೆ ಎಂದರೆ ಆಕೆ ತಾಯಿಯ ಗರ್ಭದಿಂದ ಹೊರಬಂದಾಗಲೇ ಆಗಿರುತ್ತದೆ" ಎನ್ನುತ್ತಾರೆ. ಆದರೆ ಪುರುಷ ಪ್ರಧಾನ ಸಾಮಾಜಿಕ ರೀತಿ–ನೀತಿಗಳು ಮಹಿಳೆಯನ್ನು ಬಂಧಿಯನ್ನಾಗಿ ಮಾಡುತ್ತದೆ. ಈ ಬಂಧಿಖಾನೆಯಿಂದ ಮಹಿಳೆ ಆಚೆ ಬರಬೇಕೆಂದು ಹೇಳುತ್ತಾಳೆ. ಮಹಿಳೆಯರು ವಿಜ್ಞಾನ, ಗಣಿತ, ವೈದ್ಯಶಾಸ್ತ್ರವನ್ನು ಓದಬಾರದೆಂಬ ಸಾಮಾಜಿಕ ನಿಷೇಧದ ಸಮಯದಲ್ಲಿಯೇ ಈಕೆ ವೈದ್ಯವಿಜ್ಞಾನ ಕ್ಷೇತ್ರವನ್ನು ಪ್ರವೇಶಿಸಿ ಓದಿಗೆ ಅಡ್ಡಿಪಡಿಸುವ ತೊಂದರೆಗಳನ್ನು ನಿವಾರಿಸಿಕೊಳ್ಳುತ್ತಲೇ ಅಭೂತಪೂರ್ವವಾದ ಕೊಡುಗೆಯನ್ನು ನೀಡಿದಳು. ಇಂದಿಗೂ ಶಿಶುತಜ್ಞರು ಎಪಾರ್ಗೆ ಸ್ಕೇಲ್‌ಅನ್ನು ಶಿಶುಗಳ ಆರೋಗ್ಯ ಮಟ್ಟವನ್ನು ಅಳೆಯಲು ಬಳಸುತ್ತಿದ್ದಾರೆ, ಈ ಮೂಲಕ ಆಕೆ ಚಿರಾಯು ಆಗಿದ್ದಾಳೆ.

ವರ್ಜಿನಿಯಾ ಎಪಾರ್ಗೆ ಜೂನ್ ೭, ೧೯೦೯ರಲ್ಲಿ ವೆಸ್ಟ್‌ಫೀಲ್ಡ್ ನ್ಯೂಜರ್ಸಿಯ ಸಂಗೀತಗಾರರ ಕುಟುಂಬದಲ್ಲಿ ಜನಿಸಿದಳು. ಚಾರ್ಲ್ಸ್ ಈ ಎಪಾರ್ಗೆ ಮತ್ತು ಹೆಲನ್ ಮೇ ಎಪಾರ್ಗೆ ಅವರ ಮೂವರು ಮಕ್ಕಳಲ್ಲಿ ಕೊನೆಯ ಮಗಳಾಗಿ ಜನಿಸಿದಳು. ತಂದೆಯ ಪ್ರೋತ್ಸಾಹ, ಪ್ರೇರಣೆ, ಸಹಾಯದಿಂದ ವಿಜ್ಞಾನ ಮತ್ತು ಔಷಧಿಶಾಸ್ತ್ರದಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡಳು. ಈಕೆಯ ತಂದೆ ವಿಮೆಯ ಕಾರ್ಯನಿರ್ವಾಹಕ ಅಧಿಕಾರಿ, ಹವ್ಯಾಸಿ ಸಂಶೋಧಕ ಮತ್ತು ಖಗೋಳಶಾಸ್ತ್ರಜ್ಞನಾಗಿದ್ದನು. ಹೈಸ್ಕೂಲ್‌ನಲ್ಲಿ ಓದುವಾಗಲೆ ವರ್ಜಿನಿಯಾ ವೈದ್ಯಳಾಗಬೇಕೆಂದು ನಿರ್ಧರಿಸಿದ್ದಳು. ವಿಜ್ಞಾನ ವಿಷಯದಲ್ಲಿ ಅತ್ಯುತ್ತಮ ವಿದ್ಯಾರ್ಥಿನಿಯಾಗಿದ್ದಳು ಮತ್ತು ಅರ್ಥಶಾಸ್ತ್ರದಲ್ಲಿ ತುಂಬ ಬಡವಿದ್ಯಾರ್ಥಿಯಾಗಿದ್ದಳು. ವೆಸ್ಟ್‌ಫೀಲ್ಡ್ ಹೈಸ್ಕೂಲ್‌ನಲ್ಲಿ ತನ್ನ ಪ್ರೌಢಶಿಕ್ಷಣವನ್ನು ಮುಗಿಸಿದ ಈಕೆ ೧೯೨೯ರಲ್ಲಿ ಮೌಂಟ್ ಹೊಲ್ಯೊಕ್‌ದಲ್ಲಿ ಕಾಲೇಜ್ ಶಿಕ್ಷಣವನ್ನು ಪೂರೈಸಿದಳು. ಎಪಾರ್ಗೆ ಕುಟುಂಬ ಸಂಗೀತದ ಕುಟುಂಬ ಆಗಿರುವುದರಿಂದ ಆಕೆಯು ವಾಯಲಿನ್ ನುಡಿಸುತ್ತಿದ್ದಳು ಮತ್ತು ಪ್ರಯಾಣದಲ್ಲಿ ಅದು ಜೊತೆಯಾಗಿರುತ್ತಿತ್ತು. ಅದಲ್ಲದೆ ತೋಟ ಮಾಡುವುದು ಮತ್ತು ಅಂಚೆ ಚೀಟಿ ಸಂಗ್ರಹ ಮಾಡುವುದು ಈಕೆಯ ನೆಚ್ಚಿನ ಹವ್ಯಾಸವಾಗಿದ್ದವು.

ಈಕೆ ಬಹುಮುಖ ಪ್ರತಿಭೆಯುಳ್ಳ ವಿದ್ಯಾರ್ಥಿನಿಯಾಗಿದ್ದಳು, ಶಾಲೆಯ ಕ್ರೀಡೆಗಳಲ್ಲಿ, ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ, ಕಾಲೇಜಿನ ಪತ್ರಿಕೆಯಲ್ಲಿ ಬರಹಗಾರ್ತಿಯಾಗಿ, ನಾಟಕಗಳ ನಿರ್ದೇಶಕ ನಿರ್ಮಾಪಕಳಾಗಿ, ನಾಟಕಗಳಲ್ಲಿ ಪಾತ್ರ ವಹಿಸುತ್ತಿದ್ದಳು ಮತ್ತು ಆರ್ಕೆಸ್ಟ್ರಾದಲ್ಲಿ ವಾಯಲಿನ್ ನುಡಿಸುತ್ತಿದ್ದಳು. ಇವಳ ಈ ತೆರನಾದ ಕ್ರಿಯಾತ್ಮಕ ಚಟುವಟಿಕೆಗಳನ್ನು ನೋಡಿದ ಪ್ರೌಢಶಾಲೆಯ ಇಯರ್ ಬುಕ್‌ನ ಸಂಪಾದಕರು ಹೇಗೆ ಇದೆಲ್ಲವನ್ನು ಮಾಡುತ್ತಾಳೆ? ಎಂದು ಉದ್ಗರಿಸಿದ್ದರು. ಈ ಎಲ್ಲ ಚಟುವಟಿಕೆಗಳ ಜೊತೆಗೆ ಆಕೆಯ ಶೈಕ್ಷಣಿಕ ಪ್ರಗತಿಯು ಅಸಾಧಾರಣವಾಗಿತ್ತು. ಸಸ್ಯಶಾಸ್ತ್ರದ ಪ್ರೊಫೆಸರ್ ಈಕೆಯ ಕ್ರಿಯಾತ್ಮಕತೆ ಮತ್ತು ಬುದ್ಧಿವಂತಿಕೆ ಕುರಿತು "ಒಬ್ಬ ವ್ಯಕ್ತಿ ಒಂದು ವಿಷಯದಲ್ಲಿ ತನ್ನನ್ನು ತಾನು ಸಂಪೂರ್ಣವಾಗಿ ತೊಡಗಿಸಿಕೊಂಡು ಆ ವಿಷಯದ ಬಗೆಗೆ ವ್ಯಾಪಕವಾದ ಜ್ಞಾನವನ್ನು ಕಂಡುಕೊಳ್ಳುವುದು ಅಪರೂಪವಾಗಿದೆ" ಎಂದಿದ್ದಾರೆ. ಹೆಣ್ಣು ಮಕ್ಕಳು ವೈದ್ಯವಿಜ್ಞಾನವನ್ನು ಓದಲು, ಬರೆಯಲು ಅವಕಾಶ, ಪ್ರೋತ್ಸಾಹ, ನೆರವು ನೀಡದಂತಹ ಕಾಲದಲ್ಲಿಯೇ ಮತ್ತು ವೈದ್ಯವಿಜ್ಞಾನದಲ್ಲಿ ಹೆಚ್ಚಿನ ಓದನ್ನು ಮುಂದುವರೆಸಲು ಅಡ್ಡಿಪಡಿಸುವಂತಹ ಕಾಲದಲ್ಲಿಯೇ ವರ್ಜಿನಿಯಾ ಎಪಾರ್ಗೆ ವೈದ್ಯವಿಜ್ಞಾನದಲ್ಲಿ ಉನ್ನತ ಶಿಕ್ಷಣ, ಸಂಶೋಧನೆ ಮತ್ತು ಆವಿಷ್ಕಾರವನ್ನು ಮಾಡಿದಳು. ಕೋಲಂಬಿಯಾ ಸಂಸ್ಥೆಯ ಶಸ್ತ್ರಚಿಕಿತ್ಸೆ ವಿಭಾಗದ ಅಧ್ಯಕ್ಷರ ಹುದ್ದೆ ಈಕೆಯನ್ನು ಹಿಂಬಾಲಿಸಿದರೂ ಆಕೆ ಸ್ಥಾನ/ಅಧಿಕಾರಕ್ಕಾಗಿ ಹಂಬಲಿಸಲಿಲ್ಲ. ಅರಿವಳಿಕೆ ಶಾಸ್ತ್ರದಲ್ಲಿ ಓದನ್ನು ಮುಂದುವರೆಸಿದಳು.

೧೯೨೯ರಲ್ಲಿ ವೈದ್ಯಶಾಸ್ತ್ರ ಓದನ್ನು ಪ್ರಾರಂಭಿಸಿದಳು. ಕೊಲಂಬಿಯಾ ವಿಶ್ವವಿದ್ಯಾಲಯದ ಕಾಲೇಜ್ ಆಫ್ ಫಿಜಿಷಿಯನ್ ಮತ್ತು ಸರ್ಜನ್‌ದಲ್ಲಿ ತೊಂಬತ್ತು ವಿದ್ಯಾರ್ಥಿಗಳ ತರಗತಿಯಲ್ಲಿ ಕೇವಲ ೯ ಮಹಿಳೆಯರಲ್ಲಿ ಇವಳು ಒಬ್ಬಳಾಗಿದ್ದಳು. ತರಗತಿಯ ಸಂಖ್ಯೆಯೇ ಜಂಡರ್ ತಾರತಮ್ಯವನ್ನು ಮತ್ತು ಮಹಿಳೆಯರಿಗೆ ವಿಜ್ಞಾನ ಓದಲು ಪ್ರೋತ್ಸಾಹ, ಪ್ರೇರಣೆ ನೀಡುವುದಿಲ್ಲವೆಂಬುದನ್ನು ತಿಳಿಸುತ್ತದೆ. ೧೯೩೩ರಲ್ಲಿ ಎಂ.ಡಿ.ಯನ್ನು ಪೂರೈಸಿ ಪ್ರೆಸ್ಬಿಟೇರಿಯನ್ ಆಸ್ಪತ್ರೆಯಲ್ಲಿ ಎರಡು ವರ್ಷದ ಇಂಟರ್ನ್‌ಶಿಪ್ಪನ್ನು ಪ್ರಾರಂಭಿಸಿದಳು. ಶಸ್ತ್ರಚಿಕಿತ್ಸೆಯಲ್ಲಿ ಅತ್ಯುತ್ತಮ/ಪರಿಣಾಮಕಾರಿ ಕೆಲಸದ ನಂತರವೂ ಈಕೆಯ ಮೆಂಟರ್/ಪ್ರೇರಕ ವೈದ್ಯರಾದ ಅಲೆನ್ ವೆಪ್ಪಲ್ ಆಗ ತಾನೆ ಪ್ರಾರಂಭವಾಗಿ ಬೆಳವಣಿಗೆ ಹೊಂದುತ್ತಿರುವ ಅರಿವಳಿಕೆ ಶಾಸ್ತ್ರವನ್ನು ಓದುವಂತೆ ನೀಡಿದ ಸಲಹೆಯನ್ನು ಸ್ವೀಕರಿಸಿದ ವರ್ಜಿನಿಯಾ ಎಪಾರ್ಗೆ ಎರಡನೆಯ ವರ್ಷದ ಇಂಟರ್ನ್‌ಶಿಪ್ಪನ್ನು ಮುಗಿಸಿ ಒಂದು ವರ್ಷ ಪ್ರೆಸ್ಬಿಟೇರಿಯನ್ ನರ್ಸ್ ಅನಾಸ್ಥೇಟಿಸ್



ಪೂರೈಸಿದಳು. ಅಮೆರಿಕಾದ ವಿಸ್ಕಾನ್ಸಿನ್ ವಿಶ್ವವಿದ್ಯಾಲಯ ಮತ್ತು ಬೆಲ್ಲೆವ್ಯೂ ಆಸ್ಪತ್ರೆಯಲ್ಲಿ ತರಬೇತಿ ಪಡೆದಳು. ೧೯೩೮ರಲ್ಲಿ ಕೊಲಂಬಿಯಾದ ಪ್ರೆಸ್ಬಿಟೇರಿಯನ್ ಆಸ್ಪತ್ರೆಗೆ ಮರಳಿದಳು ಮತ್ತು ಅಲ್ಲಿಯ ಅರಿವಳಿಕೆ ವಿಭಾಗದ ಮೊದಲ ಮುಖ್ಯಸ್ಥಳಾದಳು. ೧೯೪೯ರಲ್ಲಿ ಕೊಲಂಬಿಯಾ ವಿಶ್ವವಿದ್ಯಾಲಯದ ಕಾಲೇಜ್ ಆಫ್ ಫಿಜಿಷಿಯನ್ ಎಂಡ್ ಸರ್ಜನ್‌ದ ಮೊದಲ ಮಹಿಳಾ ಪ್ರೊಫೆಸರ್ ಆಗಿ ನೇಮಕವಾಗಿ ವಿದ್ಯಾರ್ಥಿಗಳ ಮೆಚ್ಚಿನ ಶಿಕ್ಷಕಿಯಾದಳು. ಅರಿವಳಿಕೆ ಶಾಸ್ತ್ರದಲ್ಲಿ ತನ್ನ ಕೆಲಸ ಮತ್ತು ಸಂಶೋಧನೆಯನ್ನು ಮುಂದುವರೆಸಿದಳು.

ಅರಿವಳಿಕೆ ಶಾಸ್ತ್ರವು ಇಂದು ವೈದ್ಯವಿಜ್ಞಾನದಲ್ಲಿ ಒಂದು ಸ್ವತಂತ್ರ ಶಾಖೆಯಾಗಿದೆ ಮತ್ತು ಅರಿವಳಿಕೆ ತಜ್ಞರು ಇದ್ದಾರೆ. ಆದರೆ ಅಂದು ಅರಿವಳಿಕೆಯನ್ನು ನರ್ಸ್‌ಗಳು ನೀಡುತ್ತಿದ್ದರು ಮತ್ತು ಅರಿವಳಿಕೆಯನ್ನು ಗಂಭೀರವಾಗಿ ಪರಿಗಣಿಸುತ್ತಿರಲಿಲ್ಲ. ಆದಕಾರಣ ಚಿಕಿತ್ಸೆಗಳಾದರೂ ಯಶಸ್ವಿಯಾಗುತ್ತಿರಲಿಲ್ಲ ಮತ್ತು ಅರಿವಳಿಕೆಯ ನಕಾರಾತ್ಮಕ ಪರಿಣಾಮವನ್ನು ಪರಿಗಣಿಸುತ್ತಿರಲಿಲ್ಲ. ಅರಿವಳಿಕೆ ದೇಹಕ್ಕೆ ಹೇಗೆ ಸ್ಪಂದಿಸುತ್ತದೆ, ಎಷ್ಟು, ಯಾವಾಗ ಕೊಡಬೇಕು ಎಂಬ ಬಗೆಗೆ ಲೆಕ್ಕಾಚಾರಗಳು ಅಷ್ಟು ನಿಖರವಾಗಿ ಇರಲಿಲ್ಲ. ಎಪಾಗ್ರ್‌ಳ ಸತತ ಸಂಶೋಧನೆ, ಅಧ್ಯಯನದಿಂದಾಗಿ ಅರಿವಳಿಕೆ ಶಾಸ್ತ್ರವನ್ನು ಸ್ವತಂತ್ರ ವಿಭಾಗವನ್ನಾಗಿ ಮಾಡಿ ಅರಿವಳಿಕೆ ಸೇವೆಯನ್ನು ನರ್ಸ್‌ಗಳ ಜೊತೆಗಿಂತ ವೈದ್ಯರ ಜೊತೆಗೂಡಿಸಿದಳು ಮತ್ತು ಅರಿವಳಿಕೆ ಶಿಕ್ಷಣ ಕಾರ್ಯಕ್ರಮವನ್ನು ಪ್ರಾರಂಭಿಸಿದಳು. ೧೯೪೯ರಲ್ಲಿ ಅರಿವಳಿಕೆ ಉಪವಿಭಾಗವು ಸ್ವತಂತ್ರ ವಿಭಾಗವಾಯಿತು. ಈ ವಿಭಾಗದ ಮುಖ್ಯಸ್ಥರನ್ನಾಗಿ ಮಾಡುತ್ತಾರೆ ಎಂಬ ನಿರೀಕ್ಷೆಯಲ್ಲಿದ್ದ ಎಪಾರ್ಗೆಗೆ ಪುರುಷಪ್ರಭುತ್ವದ ಮುಖದ ಅರಿವಾಯಿತು. ಎಪಾರ್ಗೆ ಅಷ್ಟು ಕೆಲಸ ಮತ್ತು ಸೇವೆಯನ್ನು ಸಲ್ಲಿಸಿದರೂ ವಿಭಾಗದ ಮುಖ್ಯಸ್ಥರನ್ನಾಗಿ ಪುರುಷ ವೈದ್ಯರನ್ನು ನೇಮಿಸಿದರು. ಇದರಿಂದ ಎಪಾರ್ಗೆ ದುಃಖ, ನೋವು ಮಾಡಿಕೊಳ್ಳದೆ  ಆಡಳಿತದ ಕರ್ತವ್ಯಗಳಿಂದ ಮುಕ್ತಿ ಪಡೆದು ತನ್ನ ಓದು ಮತ್ತು ಸಂಶೋಧನೆಯನ್ನು ಪ್ರಸೂತಿ ಅರಿವಳಿಕೆ ತಜ್ಞದಲ್ಲಿ ಮುಂದುವರೆಸಿದಳು.

೧೯೫೦ರ ನಂತರ ೧೭೦೦೦ ಹೆರಿಗೆಗಳನ್ನು ಮಾಡಿಸಿದಳು. ಈ ಸಮಯ ದಲ್ಲಿಯೇ ಮಗುವಿನ ಜನನ ತೊಂದರೆಗಳನ್ನು ಗುರುತಿಸಿದಳು ಮತ್ತು ತೊಂದರೆಗಿರುವ ಕಾರಣ ಮತ್ತು ಹಲವು ಅಂಶಗಳನ್ನು ಸಂಯೋಜನೆ ಮಾಡಲು ಪ್ರಾರಂಭಿಸಿದಳು. ೧೯೫೨ರಲ್ಲಿ ವರ್ಜಿನಿಯಾ ಎಪಾರ್ಗೆ ಶಿಶುಗಳ ಮರಣವನ್ನು ತಡೆಗಟ್ಟುವಲ್ಲಿ ಎಪಾರ್ಗೆ ಸ್ಕೇಲ್‌ಅನ್ನು ಕಂಡುಹಿಡಿದಳು. 'ಎಪಾರ್ಗೆ ಸ್ಕೋರ್'ಅನ್ನು ಅಭಿವೃದ್ಧಿಪಡಿಸಿದಳು. ಶಿಶುಗಳ ಬಾಹ್ಯನೋಟ / ಗೋಚರತೆ /ಕಾಣಿಸುವಿಕೆ ಯಾವ ತೆರನಾಗಿದೆ, ಶಿಶುವಿನ ನಾಡಿ ಮಿಡಿತ ಒಂದು ನಿಮಿಷಕ್ಕೆ ಎಷ್ಟಿದೆ, ಶಿಶುವಿನ ಮುಖ ಸೊಟ್ಟ / ಗಂಟು ಮೋರೆ  ಆಗಿದೆಯಾ, ಶಿಶುವಿನ ಚಟುವಟಿಕೆ ಯಾವ ತೆರನಾಗಿದೆ ಮತ್ತು ಶಿಶುವಿನ ಉಸಿರಾಟದ ಪ್ರಯತ್ನವನ್ನು ಸಂಕ್ಷಿಪ್ತಗೊಳಿಸಿ ಎಪಾರ್ಗೆ ಸ್ಕೇಲ್‌ಅನ್ನು ರಚಿಸಿದಳು. ಇದು ನವಜಾತ ಶಿಶುಗಳ ಆರೋಗ್ಯ ಸಾಮರ್ಥ್ಯವನ್ನು ಪರೀಕ್ಷಿಸಲು ಜಗತ್ತಿನಾದ್ಯಂತ ಇಂದಿಗೂ ಬಳಸಲಾಗುತ್ತದೆ. ಅಮೆರಿಕಾದ ನ್ಯಾಷನಲ್ ಲೈಬ್ರರಿ ಆಫ್ ಮೆಡಿಸಿನ್ ಪ್ರಕಾರ ಎಪಾರ್ಗೆ  ಒಂದು ನಿಮಿಷದ ಸ್ಕೇಲ್ ಜನನ ಪ್ರಕ್ರಿಯೆಯನ್ನು ಮಗು ಎಷ್ಟರಮಟ್ಟಿಗೆ ಸಹಿಸಿಕೊಳ್ಳಬಹುದು ಎಂದು, ಐದು ನಿಮಿಷದ ಸ್ಕೋರ್ ತಾಯಿಯ ಗರ್ಭದಿಂದ ಆಚೆ ಬಂದ ಶಿಶುವು ಹೇಗೆ ಇರಬಹುದು ಎಂದು ತಿಳಿಯಬಹುದಾಗಿದೆ. ಈ ಅಳತೆ ಮಾಪಕವನ್ನು ೦–೧೦ರವರೆಗೆ ಅಳತೆ ಮಾಡಲಾಗುತ್ತದೆ. ಏಳಕ್ಕಿಂತ ಕಡಿಮೆ ಸಂಖ್ಯೆಯನ್ನು ಪಡೆದರೆ ಶಿಶುವಿನ ಆರೈಕೆ, ಕಾಳಜಿ ಮತ್ತು ವೈದ್ಯಕೀಯ ಗಮನ ತುರ್ತು ಅಗತ್ಯವಿದೆ ಎಂದರ್ಥ. ಏಳಕ್ಕಿಂತ ಹೆಚ್ಚು ಸಂಖ್ಯೆಯನ್ನು ಪಡೆದುಕೊಂಡರೆ ಶಿಶುವು ಬದುಕುಳಿಯುವ ಸಾಮರ್ಥ್ಯ ಹೆಚ್ಚು ಎನ್ನಬಹುದು. ಈ ಸ್ಕೇಲ್‌ನಿಂದ ಅಳತೆ ಮಾಡುವುದರಿಂದ ಎಷ್ಟೋ ಶಿಶುಗಳ ಸಾವನ್ನು ತಪ್ಪಿಸಬಹುದಾಗಿದೆ ಮತ್ತು ಶಿಶುವಿಗೆ ಅಗತ್ಯವಾದ ಆರೈಕೆ, ಕಾಳಜಿ, ಚಿಕಿತ್ಸೆಯನ್ನು ನೀಡಬಹುದಾಗಿದೆ. ೧೯೩೦ ಮತ್ತು ೧೯೫೦ರ ಅವಧಿಯಲ್ಲಿ ಪ್ರಸೂತಿ ತಜ್ಞರು ಈ ಅಳತೆ ಮಾಪಕವನ್ನು ಬಳಸಿರುವುದರಿಂದ ಗಮನಾರ್ಹವಾಗಿ ಶಿಶುಗಳ ಮರಣ ಪ್ರಮಾಣ ಕಡಿಮೆಯಾಯಿತು.

ಹೆರಿಗೆಯ ಸಮಯದಲ್ಲಿ ತಾಯಿಗೆ ನೀಡಲಾಗುವ ಅರಿವಳಿಕೆಯ ಪರಿಣಾಮ ಮಗುವಿನ ಮೇಲೆ ಯಾವ ತೆರನಾದ ಪರಿಣಾಮ ಬೀರುತ್ತದೆ ಮತ್ತು ಶಿಶುಗಳ ಮರಣ ಪ್ರಮಾಣ ಕಡಿಮೆಗೊಳಿಸುವಲ್ಲಿ ಈಕೆಗೆ ವಿಶೇಷ ಆಸಕ್ತಿ ಇತ್ತು. ತನ್ನ ಕೆಲಸದ ಹಲವು ಅಂಕಿ–ಸಂಖ್ಯೆಗಳ ಕುಶಲತೆಯನ್ನು ಬೆಳೆಸಲು ಉದ್ದೇಶಿಸಿ ೧೯೫೮ರಲ್ಲಿ ಜಾನ್ ಹೋಪಕ್ಸಿನ್ ಸ್ಕೂಲ್ ಆಫ್ ಪಬ್ಲಿಕ್ ಹೆಲ್ತ್‌ದಲ್ಲಿ ಮಾಸ್ಟರ್ ಆಫ್ ಪಬ್ಲಿಕ್ ಹೆಲ್ತ್ ಕೋರ್ಸನ್ನು ಸೇರಿಕೊಂಡಳು. ಜನನ ದೋಷಗಳನ್ನು ತಡೆಗಟ್ಟಲು ಅಥವಾ ಅವುಗಳನ್ನು ಹೇಗೆ ಕಡಿಮೆಗೊಳಿಸಬೇಕು ಎಂಬುದರ ಕುರಿತು ಆಸಕ್ತಿಯನ್ನು ಹೊಂದಿದ್ದಳು. ೧೯೬೦ರ ನಂತರ ವೈದ್ಯವಿಜ್ಞಾನದ ಹೊಸ ಶಾಖೆ ಟೆರಾಟೋಲಜಿ (ಜನನದ ತೊಂದರೆಗಳನ್ನು ಪತ್ತೆ ಹಚ್ಚುವುದು) ಪ್ರಾರಂಭವಾಗಲು ಈಕೆಯ ಕೊಡುಗೆ ಗಮನಾರ್ಹವಾದುದು. ಎಪಾರ್ಗೆ ಜನನ ದೋಷಗಳ ಕುರಿತು ಪ್ರಾರಂಭ ದಲ್ಲಿಯೇ ಪತ್ತೆ ಮಾಡಲು ಮತ್ತು ಈ ವಿಷಯದ ಕುರಿತು ಹೆಚ್ಚಿನ ಸಂಶೋಧನೆಯ ಅಗತ್ಯದ ಕುರಿತು ಮಾತನಾಡಲು, ಜನರಿಗೆ ಅರಿವನ್ನು ಮೂಡಿಸಲು ದೂರ–ದೂರ ಪ್ರಯಾಣ ಮಾಡಿ ಎಚ್ಚರಿಸುತ್ತಿದ್ದರು. ನ್ಯಾಷನಲ್ ಫೌಂಡೇಶನ್ ಫಾರ್ ಇನ್‌ಫ್ಯಾಂಟೈಲ್ (ಶಿಶುಸಂಬಂಧಿ ರಾಷ್ಟ್ರೀಯ ಸಂಸ್ಥೆ)ಯ ರಾಯಭಾರಿ ಆಗಿ ಕೆಲಸ ಮಾಡಿದಳು. ಈಕೆಯ ಅವಧಿಯಲ್ಲಿ ಆ ಸಂಸ್ಥೆಯ ವಾರ್ಷಿಕ ಆದಾಯ ದ್ವಿಗುಣಗೊಂಡಿತ್ತು. ಅಲ್ಲದೆ ರಾಷ್ಟ್ರೀಯ ಸಂಸ್ಥೆಯ ಬೇಸಿಕ್ ಮೆಡಿಕಲ್ ರಿಸರ್ಚ್ (ವೈದ್ಯಕೀಯ ಮೂಲ ಸಂಶೋಧನೆ)ಯ ನಿರ್ದೇಶಕಿಯಾಗಿ ೧೯೬೭–೬೮ರವರೆಗೆ ಮತ್ತು ಉಪಾಧ್ಯಕ್ಷೆಯಾಗಿ ೧೯೭೧–೧೯೭೪ರವರೆಗೆ ಸೇವೆ ಸಲ್ಲಿಸಿದಳು.

ಎಪಾರ್ಗೆ ತನ್ನ ವೃತ್ತಿ ಜೀವನದಲ್ಲಿ ೬೦ ವೈದ್ಯಕೀಯ ಲೇಖನಗಳನ್ನು ಮತ್ತು ಹಲವಾರು ಚಿಕ್ಕ–ಚಿಕ್ಕ ಲೇಖನಗಳನ್ನು ಪತ್ರಿಕೆಗಳಲ್ಲಿ ಬರೆದಳು. ಈಸ್ ಮೈ ಬೇಬಿ ಆಲ್ ರೈಟ್? (ನನ್ನ ಮಗು ಚೆನ್ನಾಗಿದೆಯಾ?) ಎಂಬ ಪುಸ್ತಕವನ್ನು ಬರೆದಳು. ಇದಕ್ಕಾಗಿ ಹಲವಾರು ಪ್ರಶಸ್ತಿಗಳು ಈಕೆಯ ಮುಡಿಗೇರಿದವು. ೧೯೬೪ರಲ್ಲಿ ಪೆನ್ಸಿಲ್ವೇನಿಯಾದ ಮಹಿಳಾ ವೈದ್ಯಕೀಯ ಕಾಲೇಜ್ ಮತ್ತು ೧೯೬೫ರಲ್ಲಿ ಮೌಂಟ್ ಹೊಲೊಕೆ ಕಾಲೇಜ್‌ದಿಂದ ಗೌರವ ಡಾಕ್ಟರೇಟ್ ಪದವಿ, ೧೯೬೬ರಲ್ಲಿ ಅಮೆರಿಕಾದ ಮಹಿಳಾ ವೈದ್ಯಕೀಯ ಸಂಘಟನೆಯಿಂದ ಎಲಿಜಬೆತ್ ಬ್ಲಾಕ್‌ವೆಲ್ ಅವಾರ್ಡ್, ೧೯೬೬ರಲ್ಲಿ ಅಮೆರಿಕಾದ ಅರಿವಳಿಕೆ ತಜ್ಞರ ಸೊಸೈಟಿಯಿಂದ ಅತ್ಯುತ್ತಮ ಮತ್ತು ವಿಶೇಷ ಸೇವೆ ಸಲ್ಲಿಸಿದ್ದಕ್ಕಾಗಿ ಪ್ರಶಸ್ತಿ, ೧೯೭೩ರಲ್ಲಿ ಅಮೆರಿಕಾದ ಅರಿವಳಿಕೆ ತಜ್ಞರ ಸೊಸೈಟಿಯಿಂದ ರಾಲ್ಫ್ ಎಂ. ವಾಟರ್ ಪ್ರಶಸ್ತಿಗಳು ಸಂದಿವೆ. ೧೯೭೩ರಲ್ಲಿ ಅಮೆರಿಕಾದ ಪ್ರಸಿದ್ಧ ಪತ್ರಿಕೆ ಲೇಡಿಸ್ ಹೋಮ್ ಜರ್ನಲ್‌ನ ವರ್ಷದ ಮಹಿಳೆಯಾಗಿ ೧೯೭೩ರಲ್ಲಿ ಆಯ್ಕೆಯಾದಳು. ಈಕೆಗೆ ಮರಣೋತ್ತರ ಪ್ರಶಸ್ತಿಗಳು ಸಹ ಸಂದಿವೆ. ಅವುಗಳಲ್ಲಿ ೧೯೯೪ರಲ್ಲಿ ಅಮೆರಿಕವು ಅಂಚೆಚೀಟಿಯಲ್ಲಿ ಇವಳ ಭಾವಚಿತ್ರ ಮತ್ತು ಹೆಸರು ಬಿಡುಗಡೆ ಮಾಡಿತು ಮತ್ತು ೧೯೯೫ರಲ್ಲಿ ನ್ಯಾಶನಲ್ ವುಮನ್ ಹಾಲ್ ಆಫ್ ಫೇಮ್‌ನಲ್ಲಿ ಈಕೆಯ ಹೆಸರು ಸೇರ್ಪಡೆಗೊಂಡಿತು. ವೈದ್ಯಕೀಯ ಕ್ಷೇತ್ರಕ್ಕೆ ಹಲವು ಕೊಡುಗೆಗಳನ್ನು ನೀಡಿರುವುದರಿಂದ ಅಮೆರಿಕಾದ ನ್ಯಾಶನಲ್ ಹಾಲ್ ಆಫ್ ಫೇಮ್‌ನಲ್ಲಿ ಎಪಾರ್ಗೆ ಹೆಸರು ಸೇರ್ಪಡೆಯಾಯಿತು.

ಎಪಾರ್ಗೆ ತನ್ನ ಜೀವನದುದ್ದಕ್ಕೂ ಆಶಾವಾದಿಯಾಗಿದ್ದಳು "ಮಹಿಳೆಯರು ತಮ್ಮ ತಾಯಿ ಗರ್ಭದಿಂದ ಹೊರಬಂದಾಗಲೇ ವಿಮೋಚನೆಗೊಂಡಿದ್ದಾರೆ" ಆದರೆ ಸಮಾಜದ ರೀತಿ, ನೀತಿ, ಪುರುಷ ಪ್ರಭುತ್ವದಿಂದಾಗಿ ಮಹಿಳೆಯನ್ನು ವಿಮೋಚನೆ ಮಾಡಲಾಗಿಲ್ಲ. ಇದರಿಂದ ಹೊರಬರಬೇಕು ಎಂದಳು. ಮಹಿಳೆ ಮತ್ತು ಪುರುಷರ ನಡುವೆ ಇರುವ ವೇತನ ತಾರತಮ್ಯದ ವಿರುದ್ಧ, ಜಂಡರ್ ತಾರತಮ್ಯದ ವಿರುದ್ಧ ತನ್ನ ಅಸಹನೆಯನ್ನು ಹಲವು ಬಾರಿ ಹೊರಹಾಕಿದ್ದಳು. ಈಕೆ ತನ್ನ ಅರವತ್ತೈದನೆಯ ವಯಸ್ಸಿನಲ್ಲಿ ಸೋರಿಯಾಸಿಸ್ ಕಾಯಿಲೆಯಿಂದ ಬಳಲಿ ಮರಣ ಹೊಂದಿದಳು. ಈಕೆ ಮರಣಾನಂತರ ಈಕೆಯ ಭಾವಚಿತ್ರವಿರುವ ಅಂಚೆ ಚೀಟಿಯನ್ನು ಅಮೆರಿಕಾವು ಬಿಡುಗಡೆ ಮಾಡಿತು.




**ಸರೋಜಾ ಸಂತಿ**
ಪೋಸ್ಟ್ ಡಾಕ್ಟರಲ್ ಫೆಲೋ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬



ಕರ್ನಾಟಕ ಸಂಗೀತದಲ್ಲಿ ಡಾ॥ ಟಿ. ಎಸ್. ಸತ್ಯವತಿ ಅವರ ಅಸಾಧಾರಣ ಸಾಧನೆಯೇ ಒಂದು ಮಧುರ ರಾಗಮಾಲಿಕೆ. ಅದರಲ್ಲಿ ಶುದ್ಧ ಸಂಗೀತದ ಜೊತೆಗೆ ಸಾಹಿತ್ಯ, ಸಂಗೀತಶಾಸ್ತ್ರ, ವಿದ್ವತ್ತು, ತಾರ್ಕಿಕತೆ, ವಾಗ್ಮಿತೆ, ಪ್ರಬುದ್ಧತೆ, ಮಾರ್ದವತೆ ಮುಂತಾದ ಸಪ್ತಸ್ವರ ಗುಣಗಳು ಮೇಳೈಸಿವೆ. ಅವರ ಸಂಗೀತ ಪ್ರತಿಭೆಯ ಜೊತೆಗೆ ಪರಿಶ್ರಮವೂ ಲಯಬದ್ಧವಾಗಿ ಬೆರೆತಿರುವ ಬಗೆಯೇ ಒಂದು ಅವಧಾನ ಪಲ್ಲವಿಯಂತೆ ವಿಸ್ಮಯಕರ. ಕರ್ನಾಟಕ ಸಂಗೀತದ ಪ್ರಸಿದ್ಧ ಕಲಾವಿದೆಯಾದ ವಿದುಷಿ ಟಿ. ಎಸ್. ಸತ್ಯವತಿಯವರನ್ನು ಅವರ ಮನೆಯಲ್ಲಿಯೇ 'ಹೊಸತು' ಸಂದರ್ಶಿಸಿತು. ಪ್ರಸಿದ್ಧ ಪತ್ರಕರ್ತೆ ಡಾ॥ ಆರ್. ಪೂರ್ಣಿಮಾ ಅವರು ಸಂದರ್ಶನವನ್ನು ನಡೆಸಿಕೊಟ್ಟರು. ಅವರ ಜೊತೆಯಲ್ಲಿ 'ಹೊಸತು'ವಿನ ಗೌರವ ಸಂಪಾದಕರಾದ ಡಾ॥ ಜಿ. ರಾಮಕೃಷ್ಣ ಅವರು ಭಾಗವಹಿಸಿದ್ದರು. ಸತ್ಯವತಿ ಅವರ ಅರ್ಧ ಶತಮಾನದ ಸಂಗೀತಯಾನದ ನೆನಪುಗಳು ಮತ್ತು ನಿಲುವುಗಳು ಈ ಸಂದರ್ಶನದಲ್ಲಿ ಹರಿದಿವೆ.

# 'ಸತ್ಯವತಿ' ಎಂಬ ಮಧುರ ರಾಗಮಾಲಿಕೆ



ಸಂದರ್ಶನ

**ಹೊ**ಸತು : ಸಂಗೀತದಲ್ಲಿ ನೀವು ಗಳಿಸಿದ ಪ್ರಾವೀಣ್ಯ ಮತ್ತು ನೀವು ಮಾಡಿರುವ ಸಾಧನೆ – ನಿಮ್ಮ ಅಭಿಪ್ರಾಯದಲ್ಲಿ ರಕ್ತಗತವೋ ಪರಿಸರಜನ್ಯವೋ?

**ಸತ್ಯವತಿ :** ಸಂಗೀತದ ಸಪ್ತಸ್ವರಗಳೇ ತುಂಬಿ ಕೊಂಡಿದ್ದ ಮನೆಯಲ್ಲಿ ನಾನು ಹುಟ್ಟಿದೆ. ನಮ್ಮ ಕುಟುಂಬದ ಹಿರಿಯರಲ್ಲಿ ಯಾರೂ ಸಂಗೀತಗಾರರಲ್ಲ, ಆದರೆ ತ್ಯಾಗರಾಜ ಪರಂಪರೆಯಲ್ಲಿ ಕಲಿತ ನನ್ನ ಅಮ್ಮನಿಗೆ ಸಂಗೀತವೆಂದರೆ ಪ್ರಾಣಜೀವಾಳ. ಆ ಕಾರಣ ಅವರ ಮಕ್ಕಳಾದ ನಾವು ನಾಲ್ವರೂ 'ಹುಟ್ಟಿನಿಂದಲೇ ಸಂಗೀತ ಕಲಿತೆವು, ಸಂಗೀತದ ಜೊತೆಗೇ ಬೆಳೆದೆವು' ಎಂದು ಹೇಳಬಹುದು. ಸಂಗೀತ ಕಲಿಯದೇ ಬೆಳೆಯಲು ಸಾಧ್ಯವೇ ಇರಲಿಲ್ಲ. ನನ್ನ ಅಕ್ಕಂದಿರಾದ ವಸಂತಮಾಧವಿ ಮತ್ತು ವಸುಂಧರಾ ವಯಸ್ಸಿನಲ್ಲಿ ನನಗಿಂತ ತುಂಬ ಹಿರಿಯರು. ಅವರಿಬ್ಬರೂ ಮೊದಲು ಅಮ್ಮನಿಂದ ಕಲಿತು ನಂತರ ಹಿರಿಯ ವಿದ್ವಾಂಸರಾದ ಡಿ. ಸುಬ್ಬರಾಮಯ್ಯ ಅವರ ಬಳಿ ಉನ್ನತ ಹಂತದಲ್ಲಿ ಕಲಿತರು. ನನಗೆ ಅಮ್ಮ ಮತ್ತು ಅಕ್ಕಂದಿರೇ ಮೊದಲ ಗುರುಗಳು. ಅಮ್ಮ ಹಾರ್ಮೋನಿಯಂ ಜೊತೆಗೆ ಹಾಡುತ್ತ ಕಲಿಸುತ್ತಿದ್ದರು. ಅಕ್ಕಂದಿರು ಸಂಗೀತಪಾಠಗಳ ಜೊತೆ ಅದರ ಸ್ವರಪ್ರಸ್ತಾರ ಬರೆದಿಡುತ್ತಿದ್ದರು. ಇವರೆಲ್ಲರ ಮಡಿಲಿನಲ್ಲಿ ಬೆಳೆದ ನಾನು ಬಾಲಪ್ರತಿಭೆ ಆಗದೆ ಇನ್ನೇನು ! ರಾಗ ಮತ್ತು ತಾಳ ಎರಡನ್ನೂ ಆಲಿಸುತ್ತ, ಅವುಗಳ ಜೊತೆ ಆಟವಾಡುತ್ತ ನಾನು ಬೆಳೆದೆ. ಅವೆರಡೂ ನನ್ನ ಬಾಲ್ಯದ ಒಡನಾಡಿಗಳು.

**ಹೊಸತು :** ಮಕ್ಕಳಿಗೆ ಸಂಗೀತವನ್ನು ಕಲಿಸಿದರೆ ಒಲಿಸಿಕೊಳ್ಳುವ ಹಂಬಲ ಹೆಚ್ಚುತ್ತದೆ; ಆದ್ದರಿಂದ ಆಸಕ್ತಿಯನ್ನು ಬಿತ್ತಿ ಬೆಳೆಸುವುದು ಬಹಳ ಮುಖ್ಯ ಅಲ್ಲವೇ?

**ಸತ್ಯವತಿ :** ನನ್ನ ಅಮ್ಮನಂಥ 'ಟಾಸ್ಕ್‌ಮಾಸ್ಟರ್'ಗಳೇ ನಮ್ಮ ಸಂಗೀತ ಪರಂಪರೆಯನ್ನು ಪೊರೆದಿದ್ದಾರೆ ಎಂದು ಹೇಳಬಹುದು. ನನ್ನ ಇಬ್ಬರು ಅಕ್ಕಂದಿರು ಮಾತ್ರವಲ್ಲ, ತನ್ನ ಇನ್ನಿಬ್ಬರು ಮಕ್ಕಳೂ ಸಂಗೀತ ಕಲಿಯಬೇಕು ಅನ್ನುವುದು ಅವರ ಸಂಕಲ್ಪವಾಗಿತ್ತು. ಪುಟ್ಟವರಾದರೂ ನನ್ನನ್ನು ಮತ್ತು ಸೋದರ ನರಸಿಂಹಸ್ವಾಮಿಯನ್ನು ಅಮ್ಮ ಬೆಳಿಗ್ಗೆ ಐದೂವರೆಗೇ ಎಬ್ಬಿಸುತ್ತಿದ್ದರು. ಮುಖ ತೊಳೆದ ನಂತರ ಅವರು ಪಟ್ಟಿ ಮಾಡಿಕೊಂಡಿದ್ದಂತೆ ನಮಗೆ ಪಾಠ ನಡೆಯುತ್ತಿತ್ತು. ಅಲ್ಲದೆ ಅವರು ಹೇಳಿದಷ್ಟು ಹೊತ್ತು ನಾವು ಹಾಡಬೇಕಿತ್ತು. ಹೇಳಿದ ರಾಗ ಹಾಡಬೇಕಿತ್ತು. ನಮ್ಮ ಹುಡುಗಾಟಿಕೆಯನ್ನು ಹದ್ದುಬಸ್ತಿನಲ್ಲಿಡಲು ಅಮ್ಮ ಒಂದು ಉಪಾಯ ಮಾಡುತ್ತಿದ್ದರು. ಅವರು ಕಲಿಸಿದ ಅಟ್ಟತಾಳದ ವರ್ಣ ಸರಿಯಾಗಿ ಒಪ್ಪಿಸಿದರೆ ಒಂದು ರೂಪಾಯಿ ಬಹುಮಾನ. ವಿಳಂಬ ಕಾಲದ ಕೃತಿಗೆ ಐವತ್ತು ಪೈಸೆ, ಮಧ್ಯಮ ಕಾಲದ ಕೃತಿಗೆ ಇಪ್ಪತ್ತೈದು ಪೈಸೆ ಕೊಡುತ್ತಿದ್ದರು. ಪೈಪೋಟಿಯ ಮೇಲೆ ಗೆದ್ದ ಕಾಸನ್ನು ಕೂಡಿಟ್ಟುಕೊಳ್ಳುವುದೇ ಒಂದು ಸಂಭ್ರಮ! ಅಲ್ಲದೆ ಅಮ್ಮ ನಮ್ಮನ್ನು ರಾಮನವಮಿ ಸಂಗೀತ ಕಛೇರಿಗಳಿಗೆ ಕರೆದುಕೊಂಡು

**ಡಾ॥ ಆರ್. ಪೂರ್ಣಿಮಾ**

ಹೋಗುತ್ತಿದ್ದರು. ಟಿಕೆಟ್‌ಗೇಕೆ ಹಣ ಎಂದು ಚಪ್ಪರದ ಹೊರಗಿಡುತ್ತಿದ್ದ ಧ್ವನಿವರ್ಧಕದ ಪೆಟ್ಟಿಗೆ ಹತ್ತಿರ ಕೂರುತ್ತಿದ್ದೆವು. ಅಮ್ಮ ಕೊಡಿಸುತ್ತಿದ್ದ ಕಡಲೆಕಾಯಿ, ಮಾವಿನಕಾಯಿ ತಿನ್ನುತ್ತ ಸುಮ್ಮನೆ ಎಲ್ಲ ಘನ ವಿದ್ವಾಂಸರ ಕಛೇರಿಗಳನ್ನು ಕೇಳುತ್ತಿದ್ದೆವು. ಸಂಗೀತವನ್ನು ಸುಮ್ಮನೆ ಕೇಳುವ ಈ 'ಕ್ಯಾಶುಯಲ್ ಲಿಸನಿಂಗ್' ನಮಗೆ ಕಲಿಸಿದ್ದು ಅಷ್ಟಿಷ್ಟಲ್ಲ.

**ಹೊಸತು :** ಆಗ ನಿಮಗಿನ್ನೂ ಹದಿಹರೆಯ, ಆದರೆ ನಿಮ್ಮ ಸಂಗೀತದ ಅಭ್ಯಾಸ ಮುಟ್ಟಿದ್ದು ವಿದ್ವತ್ ಪರೀಕ್ಷೆ ವಲಯ – ಇದೆಂಥ ವಿಸ್ಮಯ!

**ಸತ್ಯವತಿ :** ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಎಲ್ಲ ಸಂಗೀತ ಸ್ಪರ್ಧೆಗಳಲ್ಲೂ ನನಗೆ ಬಹುಮಾನ ಬರುತ್ತಿತ್ತು. ಬಹಳ ಚಿಕ್ಕವಯಸ್ಸಿನಲ್ಲೇ ನನ್ನನ್ನು ಶಾಲೆಗೆ ಸೇರಿಸಿದ್ದರಿಂದ, ಹದಿಮೂರನೆ ವಯಸ್ಸಿಗೆ ಎಸ್ಸೆಸ್ಸೆಲ್ಸಿ ಪಾಸು ಮಾಡಿದೆ. ಐಚ್ಛಿಕ ವಿಷಯವಾಗಿದ್ದ ಕರ್ನಾಟಕ ಸಂಗೀತದಲ್ಲಿ ೩೦೦ ಅಂಕಕ್ಕೆ ೨೯೮ ಅಂಕ ಬಂದಿತ್ತು. ಆಗಿನ ಕಾಲದಲ್ಲಿದ್ದ ಒಂದೇ ವರ್ಷದ ಪಿಯುಸಿ ಮುಗಿಸಿ, ಹದಿನೇಳನೇ ವಯಸ್ಸಿಗೆ ಬಿ.ಎ. ಪದವಿ ಪಡೆದೆ. ಕಾಲೇಜಿನಲ್ಲೂ ಸಂಗೀತವನ್ನೇ ಐಚ್ಛಿಕ ವಿಷಯವಾಗಿ ಆರಿಸಿಕೊಂಡಿದ್ದೆ. ಜೊತೆಗೆ ವಿದ್ವತ್ ಪರೀಕ್ಷೆಗೆ ಕಟ್ಟಿದ್ದರಿಂದ ಸತತ ಅಭ್ಯಾಸ ನಡೆದಿತ್ತು. ಹದಿನೇಳನೇ ವಯಸ್ಸಿನಲ್ಲೇ ವಿದ್ವತ್ ಪರೀಕ್ಷೆಯಲ್ಲಿ ಎರಡೂ ಪರೀಕ್ಷಕ ಮಂಡಲಿಗಳ ಮೆಚ್ಚುಗೆ ಪಡೆದು ಪ್ರಥಮ ರ‍್ಯಾಂಕ್ ಪಡೆದಾಗ ಎಲ್ಲರಿಗೂ ಬಹಳ ಸಂತೋಷವಾಯಿತು. ಸಂಗೀತವನ್ನೇ ಆಡುತ್ತ–ಹಾಡುತ್ತ ಬೆಳೆದಿದ್ದರಿಂದ ನನಗೆ ಇದು ಸುಲಭವಾಗಿರಬಹುದು. ಮನೆಯವರೆಲ್ಲರ ಒತ್ತಾಸೆ ಇದ್ದೇ ಇತ್ತು.

**ಹೊಸತು :** ಪಲ್ಲವಿ ಪ್ರಸ್ತುತಿ ಸಂಗೀತ ಕಲಾವಿದರ ಯೋಗ್ಯತೆಗೆ ಕಠಿಣ ಪರೀಕ್ಷೆ ಅಲ್ಲವೇ? ನೀವು ಚಿಕ್ಕವಯಸ್ಸಿನಲ್ಲೇ ಅದರಲ್ಲಿ ಪ್ರಾವೀಣ್ಯ ಪಡೆಯುವ ಹಠಸಾಧನೆಗೆ ಏನು ಪ್ರೇರಣೆ?

**ಸತ್ಯವತಿ :** ಪಲ್ಲವಿ ಹಾಡಿಕೆಯ ರಾಗ ಲಯ ವಿನ್ಯಾಸಗಳು ಬಾಲ್ಯದಿಂದ ನನ್ನನ್ನು ತುಂಬ ಆಕರ್ಷಿಸಿದ್ದವು. ನನ್ನ ಹದಿನಾರನೇ ವಯಸ್ಸಿನಲ್ಲಿ ಕರ್ನಾಟಕ ಗಾನಕಲಾ ಪರಿಷತ್ತಿನ ಸ್ಪರ್ಧೆಯಲ್ಲಿ ಪಲ್ಲವಿ ಪ್ರಸ್ತುತಿಗೆ ಪ್ರಥಮ ಬಹುಮಾನ ಪಡೆದಿದ್ದೆ. ಅವಧಾನ ಪಲ್ಲವಿಯಲ್ಲಿ ವಿದುಷಿ ಆರ್.ಎ. ರಮಾಮಣಿ ಅವರ ಸಾಧನೆ ನನ್ನ ಮೇಲೆ ಬಹಳ ಪರಿಣಾಮ ಬೀರಿತ್ತು. ಪರಿಷತ್ತಿನ ಸಂಗೀತ ಸಮ್ಮೇಳನದಲ್ಲಿ ನಾನು ಮಾಡಿದ ಅವಧಾನ ಪಲ್ಲವಿಯ ಪ್ರಸ್ತುತಿ ವಿದ್ವಾಂಸರ ಮೆಚ್ಚುಗೆ ಪಡೆಯಿತು. ಎರಡು ಕೈಗಳಲ್ಲಿ ವಿಭಿನ್ನ ತಾಳಗಳನ್ನು ಹಾಕುತ್ತ ಹಾಡುವ ಅವಧಾನ ಪಲ್ಲವಿಗೆ ಲಯವಿನ್ಯಾಸದ ಅಂತರ್‌ದೃಷ್ಟಿ ಅಗತ್ಯ. ಆ ದಿನಗಳಲ್ಲಿ ಪಲ್ಲವಿ ಪ್ರಸ್ತುತಿಯೇ ಒಂದು ಗೀಳಿನಂತೆ ನನ್ನನ್ನು ಆವರಿಸಿಕೊಂಡು ಅದನ್ನೇ ಆವಾಹಿಸಿಕೊಂಡಿದ್ದೆ. ರಾಗ–ತಾಳ ಮಾಲಿಕೆಯ ಸಂಕೀರ್ಣ ಅವಧಾನ ಪಲ್ಲವಿಗಳನ್ನೂ ಹಾಡುತ್ತಿದ್ದೆ. ರಸದೃಷ್ಟಿ, ರಂಜನೆ ಎಲ್ಲವೂ ಇದ್ದರೂ ಅದು ಬಹಳ ಶ್ರಮ ಬೇಡುತ್ತದೆ. ಆದರೆ ಕ್ರಮೇಣ ನಾನೇ ಬೌದ್ಧಿಕ ಕಸರತ್ತೆನಿಸುವ ಆ ಗೀಳಿನಿಂದ ಪ್ರಜ್ಞಾಪೂರ್ವಕವಾಗಿ ಹೊರಬಂದೆ. ಸಂಗೀತಾಭ್ಯಾಸಿಗಳು ಪಲ್ಲವಿಗೆ ಮಾರುಹೋಗಿ ಕಲಿಯಬೇಕು, ಆದರೆ ಮೆಲ್ಲನೆ ಅದನ್ನು ಮರೆಯಬೇಕು.

**ಹೊಸತು :** ಗಾಯನದಲ್ಲಿ ಸಾಧನೆಯ ದಾರಿಯಲ್ಲಿದ್ದ ನೀವು ಮೃದಂಗದಲ್ಲಿ ಆಸಕ್ತರಾದದ್ದೂ ಲಯಧ್ಯಾನದ ಕಾರಣದಿಂದಲೇ?

**ಸತ್ಯವತಿ :** ಪಲ್ಲವಿ ಸ್ಪರ್ಧೆಯಲ್ಲಿ ಬಹುಮಾನ ಮತ್ತು ಲಯವಿನ್ಯಾಸದಲ್ಲಿ ನನ್ನ ಆಸಕ್ತಿಯನ್ನು ಗಮನಿಸಿದ ಗಾನಕಲಾ ಪರಿಷತ್ತಿನ ರೂವಾರಿಗಳಲ್ಲೊಬ್ಬರಾದ ಮೃದಂಗ ವಿದ್ವಾಂಸ ಬೆಂಗಳೂರು ಕೆ. ವೆಂಕಟರಾಮ್ ಅವರು ಮೃದಂಗ ಕಲಿಯುವಂತೆ ನನ್ನನ್ನು ಪ್ರೇರೇಪಿಸಿದರು. ಆ ಕಾಲದಲ್ಲಿ ಮಹಿಳೆಯರು ಯಾರೂ ಮೃದಂಗ ಕಲಿಯುತ್ತಿರಲಿಲ್ಲ, ಆದರೂ ನಾನು ಅವರ ಶಿಷ್ಯೆಯಾಗಿ ಕೆಲವು ವರ್ಷಗಳ ಕಾಲ ಮೃದಂಗ ಕಲಿತೆ. ಆದರೆ ನನಗೆ ಹಾಡುವುದರಲ್ಲೇ ಹೆಚ್ಚು ಆಸಕ್ತಿ ಇತ್ತಾದ್ದರಿಂದ ಮೃದಂಗ ವಿದುಷಿ ಆಗಲು ಇಷ್ಟಪಡಲಿಲ್ಲ. ನಾನು ಗಾಯನದಲ್ಲೇ ಮುಂದುವರೆಯಲು ನಿರ್ಧರಿಸಿದೆ. ಆದರೆ ಮೃದಂಗ ಕಲಿಕೆ ನನ್ನ ಲಯ ಆರಾಧನೆಗೆ ಬಹಳ ಬೆಂಬಲ ಕೊಟ್ಟಿತು. ವಿದ್ವಾಂಸರ ಪ್ರೋತ್ಸಾಹದಿಂದಾಗಿ ಗಾನಕಲಾ ಪರಿಷತ್ತಿನ ಸಮ್ಮೇಳನಗಳಲ್ಲಿ ನಾನು ಬಹಳ ಉತ್ಸಾಹದಿಂದ ಭಾಗವಹಿಸುತ್ತಿದ್ದೆ. ಒಮ್ಮೆ ಒಂದು ಕಛೇರಿಯಲ್ಲಿ ಪ್ರಸಿದ್ಧ ವಿದ್ವಾಂಸ ಪಾಲ್ಘಾಟ್ ಮಣಿ ಅಯ್ಯರ್ ತಮ್ಮ ತನಿ ಆವರ್ತನಕ್ಕೆ ನಾನು ತಾಳ ಹಾಕುವುದನ್ನೇ ಮೆಚ್ಚಿಕೊಂಡಾಗ ನನ್ನ ಲಯಸೂಕ್ಷ್ಮತೆಗೆ ದೊಡ್ಡ ಮನ್ನಣೆ ಸಿಕ್ಕಂತಾಯಿತು.

**ಹೊಸತು :** ಪದ್ಮಭೂಷಣ ಆರ್.ಕೆ. ಶ್ರೀಕಂಠನ್ ಅವರ ಬಳಿ ನೀವು ಮೂರು ದಶಕಗಳಿಗೂ ಹೆಚ್ಚು ಕಾಲ ಕಲಿತದ್ದು ಕರ್ನಾಟಕ ಸಂಗೀತ ಕ್ಷೇತ್ರದ ಅನುಪಮ ಗುರು–ಶಿಷ್ಯ ಪರಂಪರೆಗೆ ಸೇರಿಹೋಯಿತು...

**ಸತ್ಯವತಿ :** ಸಂಗೀತ ಅಥವಾ ಯಾವುದೇ ವಿದ್ಯೆಯಲ್ಲಿ ಕಲಿಕೆ ಎನ್ನುವುದು ನಿರಂತರ ಪ್ರಕ್ರಿಯೆ. ವಿದ್ವತ್ ಪರೀಕ್ಷೆಯಲ್ಲಿ ಪ್ರಥಮ ರ‍್ಯಾಂಕ್ ಪಡೆದ ನಂತರ ನನ್ನ ಕಲಿಯುವ ಹಂಬಲ ಇನ್ನಷ್ಟು ಹೆಚ್ಚಿತು. ರಾಷ್ಟ್ರೀಯ ಪ್ರತಿಭಾ ಶಿಷ್ಯವೇತನವೂ ಅದಕ್ಕೆ ಇಂಬು ಕೊಟ್ಟಿತು. ೩೩ ವರ್ಷಗಳ ಕಾಲ ಗುರುಗಳಾದ ಆರ್.ಕೆ. ಶ್ರೀಕಂಠನ್ ಅವರ ಬಳಿ ಕಲಿತದ್ದೇ ಒಂದು ವಿಶಿಷ್ಟ ಸಂಗೀತಯಾನ. ಗುರುಗಳು ತಮ್ಮ ಗುರುಪರಂಪರೆಯಿಂದ ಕಲಿತಿದ್ದ ಕರ್ನಾಟಕ ಸಂಗೀತದ ತ್ರಿಮೂರ್ತಿಗಳ ಅಪರೂಪದ ಕೃತಿಗಳನ್ನು ನನಗೆ ಹೇಳಿಕೊಟ್ಟರು. ಕಛೇರಿ ಪ್ರಯೋಗಗಳಲ್ಲಿ ಹೊಸ ವಿಷಯಗಳನ್ನು ಸೂಚಿಸಿದರು. ಶಾಸ್ತ್ರದಿಂದ ಕಲಿತ ಅಂಶಗಳು ಸಂಗೀತದ ಭಾವಕ್ಕೆ ಭಂಗ ತರಬಾರದು ಎಂಬುದನ್ನು ಕಲಿಸಿದರು.

**ಹೊಸತು :** ಸಂಗೀತ ಒಂದು ಪ್ರದರ್ಶಕ ಕಲೆಯಾದರೆ, ಸಂಗೀತಶಾಸ್ತ್ರ ಒಂದು ಅಧ್ಯಯನ ವಿಷಯ. ನೀವು ಸಂಗೀತಶಾಸ್ತ್ರಜ್ಞೆಯಾಗಿಯೂ ಪ್ರಸಿದ್ಧರು– ಸಂಗೀತ ಸಾಧನೆಯ ಹಾದಿಯಲ್ಲಿ ಸಂಗೀತಶಾಸ್ತ್ರದತ್ತ ಗಮನ ಹೊರಳುವುದು ಬಹಳ ಅಪರೂಪವಲ್ಲವೇ?

**ಸತ್ಯವತಿ :** ಕರ್ನಾಟಕ ಗಾನಕಲಾ ಪರಿಷತ್ತಿನ ಸಮ್ಮೇಳನಗಳಲ್ಲಿ ಸಂಜೆಯ ಕಛೇರಿ ಕಾರ್ಯಕ್ರಮಗಳ ಹಾಗೆ ಬೆಳಗಿನ ವಿದ್ವತ್ ಗೋಷ್ಠಿಗಳಲ್ಲೂ ಆಸಕ್ತಿಯಿಂದ ಪಾಲ್ಗೊಳ್ಳುತ್ತಿದ್ದೆ. ಅವುಗಳಲ್ಲಿ ಪ್ರಸಿದ್ಧ ವಿದ್ವಾಂಸರ, ಸಂಗೀತಶಾಸ್ತ್ರಜ್ಞರ ಉಪನ್ಯಾಸಗಳನ್ನು ಕೇಳುವ ಸದವಕಾಶ ಸಿಕ್ಕಿತು.



*ಡಾ॥ ಟಿ. ಎಸ್. ಸತ್ಯವತಿ, ಡಾ॥ ಆರ್. ಪೂರ್ಣಿಮಾ, ಡಾ॥ ಜಿ. ರಾಮಕೃಷ್ಣ*

ಸಂಗೀತಪ್ರೇಮಿಯಾದ ತಾಯಿ ರಂಗಲಕ್ಷ್ಮಿ ಮತ್ತು ತಂದೆ ಟಿ. ಎಸ್. ಎಸ್. ಮೂರ್ತಿಯವರ ಮಗಳಾಗಿ ೧೯೫೪ರ ಜೂನ್ ೩೦ರಲ್ಲಿ ಜನಿಸಿದ ಡಾ॥ ಟಿ. ಎಸ್. ಸತ್ಯವತಿ ಹಲವು ಕಲಾನೈಪುಣ್ಯಗಳ ಪ್ರತಿಭಾಸಂಗಮ. ಸಂಗೀತ ಪ್ರೇಮಿಯಾದ ತಾಯಿ ಮತ್ತು ಅಕ್ಕ ವಸಂತಮಾಧವಿ ಅವರಿಂದ ಸಂಗೀತ ಕಲಿಯುತ್ತ ಬಾಲಪ್ರತಿಭೆಯಾಗಿ ಬೆಳೆದ ಅವರು, ಹದಿಮೂರರ ವಯಸ್ಸಿನಲ್ಲಿ ಶಾಲೆಯಲ್ಲಿ 'ಕಿಸಾಗೌತಮಿ' ನಾಟಕ ಆಡಿಸಿದ ಏಕಸಂಧಿಗ್ರಾಹಿಯಾಗಿ ಗಮನ ಸೆಳೆದರು. ಹದಿನಾರನೇ ವಯಸ್ಸಿಗೆ ಮೊದಲ ಕಛೇರಿ ನಡೆಸಿ ವಿದ್ವಾಂಸರ ಮೆಚ್ಚುಗೆ ಗಳಿಸಿದ್ದು, ಹದಿನೇಳರ ವಯಸ್ಸಿಗೆ ವಿದ್ವತ್ ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಪಡೆದದ್ದು ಅವರ ವಿಶಾಲ ಸಂಗೀತಯಾನದ ಆರಂಭಿಕ ಹೆಜ್ಜೆಗಳಷ್ಟೆ.

ಸತ್ಯವತಿ ಅವರ ಲಯವಿನ್ಯಾಸವನ್ನು ಮೃದಂಗ ವಿದ್ವಾಂಸ ಬೆಂಗಳೂರು ಕೆ. ವೆಂಕಟರಾಮ್, ಸಂಗೀತ ಸಂಶೋಧನೆಯ ಹಂಬಲವನ್ನು ಕಲಾವಿಮರ್ಶಕ ಬಿ.ವಿ.ಕೆ. ಶಾಸ್ತ್ರಿ ಅವರು ಪೋಷಿಸಿದರು. ಪದ್ಮಭೂಷಣ ಆರ್.ಕೆ. ಶ್ರೀಕಂಠನ್ ಅವರ ಮೂರು ದಶಕಗಳ ಮಾರ್ಗದರ್ಶನ ಈ ಅಭಿಜಾತ ಕಲಾವಿದೆಯ ಚಿನ್ನದ ಪ್ರತಿಭೆಗೆ ಇನ್ನಷ್ಟು ಹೊಳಪಿಕ್ಕಿತು. ಈ ಸಾಧಕಿಯ ವಿದ್ವತ್ತು ರಸಿಕರು, ವಿದ್ವಾಂಸರು ಮತ್ತು ಶಾಸ್ತ್ರವೇತ್ತರು ಎಲ್ಲರ ಮೆಚ್ಚುಗೆಯನ್ನೂ ಗಳಿಸಿದೆ. ಸಂಸ್ಕೃತ ಸಾಹಿತ್ಯದಲ್ಲಿ ಎಂ.ಎ., ಎಂ.ಫಿಲ್. ಮತ್ತು ಪಿಎಚ್.ಡಿ ಪಡೆದಿರುವ ಅವರು, ವಿದ್ಯಾವರ್ಧಕ ಸಂಘದ ಮಹಿಳಾ ಪದವಿ ಕಾಲೇಜಿನಲ್ಲಿ ಪ್ರಾಧ್ಯಾಪಕಿಯಾಗಿದ್ದರು.

ಸಂಗೀತ, ಸಂಗೀತಶಾಸ್ತ್ರ ಮತ್ತು ಸಂಸ್ಕೃತ ಸಾಹಿತ್ಯ ಎಲ್ಲದರಲ್ಲೂ ಡಾ॥ ಸತ್ಯವತಿ ಅವರ ಶೋಧನೆ ಮತ್ತು ಸಾಧನೆ ಅಪಾರ ಮನ್ನಣೆ ಗಳಿಸಿವೆ. ದೇಶವಿದೇಶಗಳಲ್ಲಿ ನಡೆದಿರುವ ಅತ್ಯುನ್ನತ ಸಮಾರಂಭಗಳಲ್ಲಿ ಅವರ ಸಂಗೀತ ಕಾರ್ಯಕ್ರಮಗಳು ಕೇಳುಗರ ಮನರಂಜಿಸಿವೆ. ಮದ್ರಾಸ್ ಮ್ಯೂಸಿಕ್ ಅಕಾಡೆಮಿ, ಕರ್ನಾಟಕ ಗಾನಕಲಾ ಪರಿಷತ್ತು, ಕರ್ನಾಟಕ ಸಂಗೀತ ನಾಟಕ ಅಕಾಡೆಮಿ, ಬೆಂಗಳೂರು ಗಾಯನ ಸಮಾಜ ಸೇರಿ ದೇಶದ ಹಲವಾರು ಪ್ರತಿಷ್ಠಿತ ಸಂಗೀತ ಸಂಸ್ಥೆಗಳು ಅವರ ಪ್ರತಿಭೆ ಮತ್ತು ವಿದ್ವತ್ತನ್ನು ಪ್ರಶಸ್ತಿಗಳಿಂದ ಪುರಸ್ಕರಿಸಿವೆ. ಇತ್ತೀಚೆಗೆ ನಡೆದ ಬೆಂಗಳೂರು ಗಾಯನ ಸಮಾಜದ ಸಂಗೀತ ಸಮ್ಮೇಳನದ ಅಧ್ಯಕ್ಷತೆಯ ಉನ್ನತ ಗೌರವ ಅವರನ್ನು ಅರಸಿಬಂದಿದೆ.

ತಮ್ಮ ನಿರಂತರ ಸಂಗೀತಯಾನದ ಜೊತೆಯಲ್ಲಿ ಅನೇಕ ಪ್ರತಿಭಾವಂತ ಶಿಷ್ಯರನ್ನು ತಯಾರು ಮಾಡುವ, ಅನೇಕರಿಗೆ ಸಂಗೀತಾಸಕ್ತರಿಗೆ ಹೊಸಹೊಳಹುಗಳನ್ನು ನೀಡುವ ಗುರುವಾಗಿರುವುದು ಡಾ॥ ಸತ್ಯವತಿ ಅವರ ಸಂಗೀತ ಕೈಂಕರ್ಯದ ಮುಖ್ಯ ಭಾಗವಾಗಿದೆ. ಕರ್ನಾಟಕ ಸಂಗೀತದ ಭಾವನಾತ್ಮಕ ಮತ್ತು ಬೌದ್ಧಿಕ ಅನ್ವೇಷಣೆಯಲ್ಲಿ ಅವರ ಸಾಧನೆ ಅಸಾಧಾರಣ.




ಸಂಗೀತ ಕಾರ್ಯಕ್ರಮ



ಗುರು ಪದ್ಮಭೂಷಣ ಆರ್. ಕೆ. ಶ್ರೀಕಂಠನ್ ಅವರಿಂದ ಪುರಸ್ಕಾರ



ಭಾರತರತ್ನ ಎಂ. ಎಸ್. ಸುಬ್ಬುಲಕ್ಷ್ಮಿ ಅವರಿಂದ ಪುರಸ್ಕಾರ



ಉಪನ್ಯಾಸ ಕಾರ್ಯಕ್ರಮ

ಕಲಾವಿಮರ್ಶಕರಾದ ಬಿ.ವಿ.ಕೆ. ಶಾಸ್ತ್ರಿ ಅವರು ನನ್ನ ಆಸಕ್ತಿಯನ್ನು ಗಮನಿಸಿ ಸಂಗೀತಶಾಸ್ತ್ರದ ವಿವಿಧ ಆಯಾಮಗಳತ್ತ ನನ್ನ ಗಮನ ಸೆಳೆದರು. ಭಾರತದಾದ್ಯಂತ ಸಂಚರಿಸುತ್ತಿದ್ದ ಅವರು ಸಂಗೀತಶಾಸ್ತ್ರ ಕುರಿತ ಅನೇಕ ಪುಸ್ತಕಗಳನ್ನು ನನಗೆ ಕೊಟ್ಟು ಅಧ್ಯಯನ ಮಾಡಲು ಹೇಳುತ್ತಿದ್ದರು. ನನ್ನ ಅಧ್ಯಯನಕ್ಕೆ ಹೊಸ ದಿಕ್ಕು ತೋರಿದರು. ಅವರಿಂದ ನಾನು ಬಹಳ ಕಲಿತೆ.

ಸಂಗೀತ ಭಕ್ತಿಪ್ರಧಾನವಾದರೂ ರಸೋಲ್ಲಾಸವೇ ಅದರ ಮುಖ್ಯ ಗುರಿ. ನನ್ನ ದೃಷ್ಟಿಯಲ್ಲಿ ಸಂಗೀತ ಮತ್ತು ಸಂಗೀತಶಾಸ್ತ್ರ ಎರಡೂ ಒಂದಕ್ಕೊಂದು ಪೂರಕ. ಆದ್ದರಿಂದ ನಾನು ಸಂಗೀತಶಾಸ್ತ್ರದಲ್ಲೂ ಆಸಕ್ತಿ ತಳೆದೆ, ಅದರಿಂದ ಕಲಿತದ್ದರಲ್ಲಿ ಸೂಕ್ತ ಅಂಶಗಳನ್ನು ಸಂಗೀತಕ್ಕೆ ಬಳಸಿಕೊಂಡೆ. ಬಹಳ ಮುಖ್ಯವಾಗಿ ಸಂಗೀತಶಾಸ್ತ್ರದ ಅಧ್ಯಯನದಿಂದ ಉಪನ್ಯಾಸಗಳು, ಕಾರ್ಯಾಗಾರಗಳು, ವಿದ್ವತ್‌ಚರ್ಚೆಗಳನ್ನು ಆತ್ಮವಿಶ್ವಾಸದಿಂದ ನಡೆಸಬಹುದು.

**ಹೊಸತು** : ನೀವು ಸ್ನಾತಕೋತ್ತರ ಶಿಕ್ಷಣ ಮತ್ತು ಸಂಶೋಧನೆಗೆ, ನಿಮ್ಮ ಶಿಕ್ಷಕವೃತ್ತಿಗೆ ಸಂಸ್ಕೃತವನ್ನು ಆಯ್ಕೆ ಮಾಡಿಕೊಂಡಿರಿ. ಸಂಗೀತ– ಸಂಗೀತಶಾಸ್ತ್ರ– ಸಂಸ್ಕೃತ ಈ ಎಲ್ಲದರ ಸಮಾಗಮವೇ ಅಪರೂಪದ ಫಲಗಳನ್ನು ಕೊಟ್ಟಿತಲ್ಲವೇ?

**ಸತ್ಯವತಿ** : ನಾನು ಶಾಲೆಕಾಲೇಜು ದಿನಗಳಿಂದಲೂ ಸಂಸ್ಕೃತ ಓದುತ್ತಿದ್ದುದರಿಂದ ಸಂಸ್ಕೃತ ಸಾಹಿತ್ಯದ ಪರಿಚಯವಿತ್ತು. ನಾನು ಹದಿನೇಳರ ವಯಸ್ಸಿನಲ್ಲಿ ಬಿ.ಎ. ಪದವಿ ಮತ್ತು ಸಂಗೀತದಲ್ಲಿ ವಿದ್ವತ್ ಮುಗಿಸಿದ ನಂತರ ಎಂ.ಎ. ಪದವಿಗೆ ಸಂಸ್ಕೃತ ಸಾಹಿತ್ಯವನ್ನೇ ಪ್ರೀತಿಯಿಂದ ಆಯ್ದುಕೊಂಡೆ. ಇದು ಸಂಗೀತಶಾಸ್ತ್ರದ ಅಧ್ಯಯನಕ್ಕೆ ಬಹಳ ನೆರವು ನೀಡಿತು. ಒಮ್ಮೆ ಬಿ.ವಿ.ಕೆ. ಶಾಸ್ತ್ರಿ ಅವರು "ಅಭಿಲಷಿತಾರ್ಥ ಚಿಂತಾಮಣಿ"ಯನ್ನು ನನ್ನ ಕೈಗಿತ್ತರು. ಅದು ನನ್ನ ಸಾಹಿತ್ಯ– ಸಂಗೀತ ಸಂಶೋಧನೆಗೆ ಎಂಥ ಪ್ರೇರಣೆ ನೀಡಿತೆಂದರೆ, ಮುಂದೆ "ಭಾರತೀಯ ಸಂಗೀತಕ್ಕೆ ಅಭಿಲಷಿತಾರ್ಥ ಚಿಂತಾಮಣಿಯ ಕೊಡುಗೆ" ಎಂಬ ನನ್ನ ಸಂಪ್ರಬಂಧಕ್ಕೆ ಬೆಂಗಳೂರು ವಿಶ್ವವಿದ್ಯಾಲಯ ಪಿಎಚ್.ಡಿ. ನೀಡಿತು. ಪ್ರೊ. ಲಕ್ಷ್ಮೀತಾತಾಚಾರ್ ಮತ್ತು ಪ್ರೊ. ಮೀರಾ ಚಕ್ರವರ್ತಿ ನನ್ನ ಅಧ್ಯಯನಕ್ಕೆ ಎಲ್ಲ ಬೆಂಬಲ ನೀಡಿದರು.

ಹೊಸ ವಿಷಯಗಳನ್ನು ಆರಿಸಿಕೊಂಡು ಅಧ್ಯಯನ, ಸಂಶೋಧನೆ, ಉಪನ್ಯಾಸ ನಡೆಸಲು ಸಂಸ್ಕೃತ ಸಾಹಿತ್ಯ ಅನೇಕ ದಾರಿಗಳನ್ನು ತೋರಿಸಿದೆ. ನಾನು ಸಂಸ್ಕೃತ ಅಧ್ಯಾಪಕಿಯಾಗಿ ಕೆಲಸ ಮಾಡಿದ ವಿದ್ಯಾವರ್ಧಕ ಮಹಿಳಾ ಪದವಿ ಕಾಲೇಜಿನ ಶಿಕ್ಷಣ ಸಂಸ್ಥೆ ನನಗೆ ನೀಡಿದ ಬೆಂಬಲವನ್ನು ಎಂದೂ ಮರೆಯುವಂತಿಲ್ಲ. ಕಛೇರಿ ಮತ್ತು ಉಪನ್ಯಾಸಗಳಿಗೆ ನಾನು ಹಲವಾರು ದೂರದ ಸ್ಥಳಗಳಿಗೆ ಹೋಗ ಬೇಕಾದಾಗ ರಜೆಗೆ ಎಂದೂ ತೊಂದರೆ ಆಗಲಿಲ್ಲ. ಹೀಗಾಗಿ ನಾನು ವೃತ್ತಿ ಮತ್ತು ಪ್ರವೃತ್ತಿ ಎರಡನ್ನೂ ಸಮಾನ ಪ್ರೀತಿಯಿಂದ ನಿಭಾಯಿಸಲು ಸುಲಭವಾಯಿತು.

**ಹೊಸತು** : ಸಂಗೀತ ಲೋಕದಲ್ಲಿ ಪ್ರಾದೇಶಿಕತೆ, ಲಿಂಗ, ಜಾತಿ ಇವುಗಳ ನೆಲೆಯಲ್ಲಿ ತಾರತಮ್ಯ ಇರುವ ಬಗ್ಗೆ ಏನು ಹೇಳುತ್ತೀರಿ? ಸಂಗೀತ ಲೋಕದ "ಮೀ ಟೂ" ಪ್ರಕರಣಗಳನ್ನು ಕುರಿತು ನಿಮ್ಮ ಅನಿಸಿಕೆ?

**ಸತ್ಯವತಿ** : ಸಂಗೀತಲೋಕದಲ್ಲಿ ತಾರತಮ್ಯಗಳು ಇವೆಯೇ ಎಂದು ಹುಡುಕಹೊರಟರೆ ಅನೇಕ ರೀತಿಯಲ್ಲಿ ಇವೆ ಎಂದು ಅನ್ನಿಸುತ್ತದೆ. ಯಾವುದೇ ಸಂಗೀತೋತ್ಸವದ ಪಟ್ಟಿ ನೋಡಿದರೂ ಮುಕ್ಕಾಲು ಪಾಲಿಗಿಂತಲೂ ಹೆಚ್ಚು ಮಂದಿ ತಮಿಳುನಾಡಿನ ಕಲಾವಿದರೇ ಇರುತ್ತಾರೆ. ಕರ್ನಾಟಕದ ಕಲಾವಿದರಲ್ಲಿ ಪ್ರತಿಭೆಗೇನೂ ಕೊರತೆ ಇಲ್ಲ. ಕಲಾವಿದರಿಗಿರಲಿ, ಕರ್ನಾಟಕದ ಕೃತಿಕಾರರಿಗೂ ಮನ್ನಣೆ ಇರುವುದಿಲ್ಲ. ದಸರಾ ಉತ್ಸವ ಸೇರಿ ನಮ್ಮ ಉತ್ಸವಗಳ ಪಟ್ಟಿ ನೋಡಿದರೆ ಹಿಂದೂಸ್ತಾನಿ ಸಂಗೀತಕ್ಕೇ ಹೆಚ್ಚು ಪ್ರಾಧಾನ್ಯ ಸಿಕ್ಕಿರುತ್ತದೆ. ಸರ್ಕಾರದ ಮಟ್ಟದಲ್ಲೇ ಇಂಥ ತಾರತಮ್ಯ ಇದೆ. ಇದಕ್ಕೆ ಏನು ಹೇಳಬೇಕು?

ಇನ್ನು ಲಿಂಗ ತಾರತಮ್ಯದ ಬಗ್ಗೆ ಹೇಳುವುದಾದರೆ, ಕಲಾವಿದೆಯಾಗಿ ನಾನು ಯಾವುದೇ ರೀತಿಯ ತಾರತಮ್ಯ ಅನುಭವಿಸಿಲ್ಲ. ಎಲ್ಲ ಅವಕಾಶಗಳೂ ಮನ್ನಣೆಗಳೂ ನನಗೆ ದೊರಕಿವೆ. ನನ್ನನ್ನು ಎಲ್ಲರೂ ಸಮಾನಭಾವದಿಂದ ಕಂಡಿದ್ದಾರೆ. ಆದರೆ ಬೇರೆ ಅನೇಕ ಕಲಾವಿದೆಯರ ಅನುಭವ ಬೇರೆ ಇರಬಹುದು.

ಕರ್ನಾಟಕ ಸಂಗೀತದಲ್ಲಿ ಈಗ ಜಾತಿ ಮತ್ತು ಧರ್ಮದ ನೆಲೆಯಲ್ಲಿ ಕೆಲವು ಪ್ರಸಿದ್ಧ ಕಲಾವಿದರು ನಡೆಸುತ್ತಿರುವ ಆಂದೋಲನ, ವಾದವಿವಾದಗಳು ಬಹುತೇಕ ದೋಷೈಕದೃಷ್ಟಿಯನ್ನು ಹೊಂದಿವೆ ಅನ್ನಿಸುತ್ತದೆ. ನನಗೆ ಅನ್ನಿಸುವುದು– ಒಳ್ಳೆಯದು ಕೆಟ್ಟದ್ದು ಎರಡೂ ಇರುವಾಗ, ಒಳ್ಳೆಯದನ್ನೇ ಎತ್ತಿ ಹಿಡಿಯೋಣ. ಚಿಕ್ಕಗೆರೆ ಇದ್ದರೆ ಅದರ ಪಕ್ಕದಲ್ಲಿ ದೊಡ್ಡ ಗೆರೆ ಬರೆಯಬೇಕು. ಏನೋ ಸರಿಯಿಲ್ಲ ಅನ್ನಿಸಿದರೆ ಅದನ್ನು ಸರಿಪಡಿಸಲು ಯತ್ನಿಸಬೇಕು. ಚೌಕಟ್ಟು ಚಿಕ್ಕದಾದರೆ ಅದನ್ನು ದೊಡ್ಡದು ಮಾಡೋಣ. ಮೂರ್ತಿಭಂಜನೆಯಂತೂ ಮಾಡಲೇಕೂಡದು.

ಹೌದು, ಇತರ ಕ್ಷೇತ್ರಗಳ ಹಾಗೆ ಸಂಗೀತ ಕ್ಷೇತ್ರದಲ್ಲೂ ಈಗ 'ಮೀ ಟೂ' ಸುದ್ದಿ ಮಾಡುತ್ತಿದೆ. ಆದರೆ ಪ್ರಕಟವಾಗದ, ಸುದ್ದಿಯಾಗದ 'ಮೀ ಟೂ' ಪ್ರಕರಣಗಳ ಪಟ್ಟಿ ಹಿಂದಿನಿಂದಲೂ ದೊಡ್ಡದೇ ಇದೆ!

**ಹೊಸತು** : ಸಂಗೀತ ಲೋಕವೂ ಈಗ ಒಂದು ಮನರಂಜನಾ ಮಾರುಕಟ್ಟೆ. ಅದರಲ್ಲಿ ಪ್ರವೇಶಿಸಲು, ಉಳಿಯಲು ಮತ್ತು ಮಿಂಚಲು ಮಾರ್ಕೆಟಿಂಗ್– ಪ್ರೊಮೋಷನ್ ಎಲ್ಲ ಬೇಕಾಗುತ್ತದೆ ಅಲ್ಲವೇ?

**ಸತ್ಯವತಿ** : ಕಿರಿಯರಿಗೆ ಇರಲಿ, ಹಿರಿಯ ಕಲಾವಿದರಿಗೂ ಅಂಥವನ್ನು ಮಾಡಿಕೊಡುವ ಮಧ್ಯವರ್ತಿಗಳ ಪಡೆಯೇ ಇದೆ ಎಂದು ಕೇಳಿದ್ದೇನೆ. ಸಂಗೀತೋತ್ಸವಗಳಲ್ಲಿ ಯಾವ ಸಭಾದ ಯಾವ ಉತ್ಸವ, ಯಾವ ದಿನ, ಯಾರಿಗೆ ಅವಕಾಶ ಕೊಡಿಸಬೇಕು, ಯಾರಿಗೆ ತಪ್ಪಿಸಬೇಕು, ಯಾವುದಕ್ಕೆ ಎಷ್ಟು ಸಾವಿರ ರೇಟು ಎಲ್ಲ ಇವೆಯಂತೆ. ನನ್ನ ಕಿವಿಗೂ ಇಂಥವು ಕೇಳಿಬಂದಿವೆ. ಯಾವುದೇ ಕಲೆಗೆ ಇದಲ್ಲ ಅಧೋಗತಿ.

**ಹೊಸತು** : ಸಂಗೀತ ಕಛೇರಿ ಮತ್ತು ಪ್ರದರ್ಶನೋಪನ್ಯಾಸಗಳಿಗೆ ನೀವು ದೇಶವಿದೇಶಗಳಲ್ಲಿ ಸಂಗೀತ ಸಂಚಾರ ಮಾಡುತ್ತಿದ್ದೀರಿ. ಈಗ ಎಲ್ಲೆಡೆ ಸಂಗೀತದಲ್ಲಿ ತಕ್ಷಣದ ರಂಜನೆಯ ಭಾಗವೇ ಹೆಚ್ಚುತ್ತಿದೆ ಅಲ್ಲವೇ? ಖ್ಯಾತಿಗೆ ಕಿರುದಾರಿಗಳನ್ನು ಹುಡುಕುವ ಪ್ರವೃತ್ತಿ ಕಾಣುತ್ತಿದೆಯೇ?

**ಸತ್ಯವತಿ** : ಕರ್ನಾಟಕ ಮತ್ತು ಹಿಂದೂಸ್ತಾನಿ ಸಂಗೀತ ಎರಡರಲ್ಲೂ ಸುಮ್ಮನೆ ರಂಜನೆಯ ಕಸರತ್ತು ಮಾಡಿ ಚಪ್ಪಾಳೆ ಗಿಟ್ಟಿಸುವ ಪ್ರವೃತ್ತಿ ಬಹಳ ಹೆಚ್ಚುತ್ತಿದೆ. ಶ್ರಮ ಪಡದೇ ವೇಗ ಮತ್ತು ತಾರಸ್ಥಾಯಿ ಇವೆರಡನ್ನೇ ನಂಬಿರುವ ಕಿರಿಯರ ಸಂಖ್ಯೆ ಹೆಚ್ಚುತ್ತಿದೆ. ವಾಲ್ಯೂಂ, ಗಿಮಿಕ್ಸ್, ಹೈಪಿಚ್ ಇವುಗಳೇ ಸಂಗೀತದ ಮೌಲ್ಯ ಹೆಚ್ಚಿಸಲಾರದು. ಯಾರಿಗೂ ನೆಮ್ಮದಿಯ ಸಂಗೀತ ಬೇಡ, ಗಲಾಟೆ ಸಂಗೀತವೇ ಕೇಳುಗರಿಗೆ ಬೇಕಾಗಿದೆ. ಹಿಂದೂಸ್ತಾನಿ ಸಂಗೀತದಲ್ಲೂ ಧ್ರುಪದ್ ಇಲ್ಲವೇ ಇಲ್ಲ, ಬಡಾಖ್ಯಾಲ್ ಇಲ್ಲ. ಎಲ್ಲ ಹ್ರಸ್ವ ಆಗಬೇಕು. ಆದರೆ ಮೂಲಸತ್ವವನ್ನೇ ಕಳೆದುಕೊಂಡರೆ, ಸಂಗೀತ ಸಂಗೀತವಾಗುವುದೇ ಇಲ್ಲ. ನಾವು ಒಪ್ಪಲಿ, ಬಿಡಲಿ, ನಮ್ಮ ಸಂಗೀತಕ್ಕೆ ಭಕ್ತಿಯೇ ನೆಲೆಗಟ್ಟು. ಪ್ರಯೋಗಗಳಿಗೆ ಯಾವತ್ತೂ ಸ್ವಾಗತವಿದೆ, ಆದರೆ ಸಮಕಾಲೀನ ಅಂಶಗಳಿಗಾಗಿ ಸಾರ್ವಕಾಲಿಕ ಮೌಲ್ಯಗಳನ್ನು ಬಿಟ್ಟುಕೊಡಬಾರದು ಎನ್ನುವುದು ನನ್ನ ಅಭಿಪ್ರಾಯ.

ಡಾ|| ಆರ್. ಪೂರ್ಣಿಮಾ
ಪತ್ರಕರ್ತೆ ಹಾಗೂ ಲೇಖಕಿ, ನಂ. ೧೫೪೧, ೧೬ನೇ ಮುಖ್ಯರಸ್ತೆ
ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು – ೫೬೦ ೦೪೦
ಈಮೇಲ್ : poornima54@gmail.com

# ನನಗೇಕೆ ಒಬ್ಬ ಪತ್ನಿ ಬೇಕು?



**ಎಲ್ಲ ಪಾಲಕರೂ ತಮ್ಮ ಮಕ್ಕಳಿಗೆ ಹೆಣ್ಣು-ಗಂಡೆಂಬ ಭೇದವಿಲ್ಲದೇ ಚಿಕ್ಕವಯಸ್ಸಿನಿಂದಲೇ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುವುದನ್ನು ಹಾಗೂ ತಮ್ಮ ಸುತ್ತಲಿನ ಪರಿಸರವನ್ನು ಶುಚಿಯಾಗಿಡುವುದನ್ನು ಕಲಿಸಬೇಕು. ವಯಸ್ಸಿಗೆ ಬರುವಷ್ಟರಲ್ಲಿಯೇ ಅಡುಗೆ ಮಾಡುವುದನ್ನೂ ಕಲಿಸಿದರೆ ಇನ್ನೂ ಒಳ್ಳೆಯದು. ನಾವು ಊಟ ಮಾಡುತ್ತೇವೆ ಎಂದಾದರೆ ಅಡುಗೆಯನ್ನೂ ಕಲಿಯಬೇಕು. ಕೊಳೆ ಮಾಡುತ್ತೇವೆ ಎಂದಾದರೆ ಸ್ವಚ್ಛಮಾಡಲೂ ಕಲಿಯಬೇಕು.**

**ಪ್ರಿಯದರ್ಶಿನಿ ಶೆಟ್ಟರ**

**ಭಾ**ರತದ ಸಂದರ್ಭದಲ್ಲಿ ಮದುವೆ ಎಂಬ ಸಂಸ್ಥೆ ಹತ್ತು ಹಲವು ಸ್ಥಿತ್ಯಂತರಗಳನ್ನು ಕಂಡಿದೆ. ಹೆಣ್ಣು ಸಿಗುವುದೇ ಅಪರೂಪವಾದ ಕಾಲವೊಂದಿತ್ತಂತೆ. ಹೆಣ್ಣು ಬೇಕಾದರೆ ತೆರವು ಕೊಟ್ಟು ತರಬೇಕಾದ ಸ್ಥಿತಿಯಿತ್ತಂತೆ. ಆದರೆ ಪ್ರಸಕ್ತ ಸಂದರ್ಭದಲ್ಲಿ ವರದಕ್ಷಿಣೆಯ ಭೂತ ಹೆಣ್ಣು ಕುಲವನ್ನು ಗಂಭೀರವಾಗಿ ಬಾಧಿಸುವ, ಆ ಮುಖಾಂತರ ಅವಳ ಸ್ವಾಭಿಮಾನಕ್ಕೆ ಧಕ್ಕೆ ತರುವ ಹಲವು ಘಟನಾವಳಿಗಳು ನಮ್ಮ ಗಮನಕ್ಕೆ ಬರುತ್ತಿವೆ. ಸೋ ಕಾಲ್ಡ್ ಕಲಿತ ವರಮಹಾಶಯರು ಕೂಡ ತಾವು ಮದುವೆಯಾಗಲಿರುವ ಹೆಣ್ಣೂ ತಮ್ಮಂತೆ ಒಬ್ಬ ಜೀವಿ ಎಂದುಕೊಳ್ಳದೆ ತಮಗೆ ಸಕಲ ಭೋಗಭಾಗ್ಯ ತಂದುಕೊಡುವ ಕಾಮಧೇನುವೆಂಬಂತೆ ನೋಡುತ್ತಿರುವುದು ನನಗೆಷ್ಟೋ ಬಾರಿ ಸೋಜಿಗವನ್ನುಂಟು ಮಾಡಿದೆ. ವರನ ಜೊತೆಗೆ ಆತನ ಹೆತ್ತವರು ಕೂಡ ದುಬಾರಿ ವರದಕ್ಷಿಣೆ ವರೋಪಚಾರದ ಬೇಡಿಕೆಯನ್ನು ಮುಂದಿಟ್ಟು ಹೆಣ್ಣನ್ನು ಗೋಳು ಹೊಯ್ದುಕೊಳ್ಳುವುದಿದೆ. ಮದುವೆಯ ನಂತರವೂ ಕೂಡ ಹೆಣ್ಣು ವರದಕ್ಷಿಣೆ ತರುವಂತೆ ಒತ್ತಾಯಕ್ಕೊಳಗಾಗಿ ಆತ್ಮಹತ್ಯೆ ಮಾಡಿಕೊಂಡ ಉದಾಹರಣೆಗಳಿವೆ. ಅವಳನ್ನು ಗಂಡ, ಅತ್ತೆ-ಮಾವಂದಿರು ಬೆಂಕಿಯಿಟ್ಟು ಕೊಂದದ್ದೂ ಇದೆ. 'ವಧು ಸುಡುವುದಕ್ಕಲ್ಲ' ಎಂಬ ಘೋಷಣೆಯೊಂದಿಗೆ ಹೆಣ್ಣುಮಕ್ಕಳು ಬೀದಿಗೆ ಬಂದ ಹಲವು ಉದಾಹರಣೆಗಳಿವೆ. ಆದಾಗ್ಯೂ ಒಂದು ಹೆಣ್ಣನ್ನು ವರಿಸುವುದರಿಂದ ಏನೆಲ್ಲ ಅನುಕೂಲತೆ, ವೈಭೋಗ ಲಭಿಸಲಿದೆ ಎಂದು ಲೆಕ್ಕ ಹಾಕಿ ಸಂಬಂಧ ಬೆಳೆಸುವುದು ಆ ಮುಖಾಂತರ ಹೆಣ್ಣಿನ ಸ್ಥಾನಮಾನವನ್ನೇ ತುಚ್ಛೀಕರಿಸುವುದು ನಮ್ಮ ದೇಶದಲ್ಲಿ ನಡೆದೇ ಇದೆ. ಇದು ನಮ್ಮ ಸಮಾಜಕ್ಕೆ ವಿಶಿಷ್ಟವಾದ ಸಮಸ್ಯೆ ಎಂದು ಭಾವಿಸಿದ್ದ ನನಗೆ ಅಮೇರಿಕದ ಬರಹಗಾರ್ತಿ ಜೂಡಿ ಬ್ರಾಡಿಯ ಲೇಖನ ಓದಿದಾಗ ಆಶ್ಚರ್ಯಾಘಾತಗಳು ಏಕಕಾಲಕ್ಕೆ ಉಂಟಾದವು. ಹೆಣ್ಣು ಗಂಡಿನ ಅನುಕೂಲಕ್ಕಿರುವ ವಸ್ತು ಎಂಬ ಗ್ರಹಿಕೆ ಸಾರ್ವತ್ರಿಕವಾದದ್ದೆಂಬುದು ವಿದಿತವಾಯಿತು. ಈ ಹಿನ್ನೆಲೆಯಲ್ಲಿ ಇತ್ತೀಚೆಗೆ ನಾನು ಓದಿದ ಜೂಡಿ ಬ್ರಾಡಿ (೧೯೩೭–೨೦೧೭) ಅವರ 'ನನಗೇಕೆ ಒಬ್ಬ ಹೆಂಡತಿ ಬೇಕು?' (Why I Want a Wife?) ಎಂಬ ಇಂಗ್ಲಿಷ್ ಪ್ರಬಂಧದ ಭಾಷಾಂತರವನ್ನು ಓದುಗರೊಂದಿಗೆ ಹಂಚಿಕೊಳ್ಳಬೇಕೆನಿಸಿತು. ಕಾರಣವಿಷ್ಟೇ ೧೯೭೧ರಲ್ಲಿ ಅಮೇರಿಕದ ಈ ಲೇಖಕಿ ಬರೆದ ಪ್ರಸ್ತುತ ಲೇಖನ ಎಪ್ಪತ್ತರ ದಶಕದ ಸ್ತ್ರೀವಾದಿ ಆಂದೋಲನದಲ್ಲಿ ಸಂಚಲನವನ್ನುಂಟುಮಾಡಿತ್ತು. ಜೂಡಿ ಬ್ರಾಡಿಯವರು ೧೯೩೭ರಲ್ಲಿ ಸ್ಯಾನ್ ಫ್ರಾನ್ಸಿಸ್ಕೋದಲ್ಲಿ ಜನಿಸಿದರು. ಯುನಿವರ್ಸಿಟಿ ಆಫ್ ಐಯೊವಾದಿಂದ ಲಲಿತಕಲೆಯಲ್ಲಿ ಪದವಿಯನ್ನು ಪಡೆದ ಇವರು ಬರಹಗಾರ್ತಿಯಾಗಿಯೂ ಬಹಳಷ್ಟು ವಿಷಯಗಳ ಕುರಿತು ಪ್ರಬಂಧ ರಚಿಸಿದ್ದಾರೆ. ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ, ಗರ್ಭಪಾತ, ಕ್ಯಾನ್ಸರ್, ಪರಿಸರವಿಜ್ಞಾನ, ಕಾರ್ಮಿಕ ಸಂಘಟನೆ ಇತ್ಯಾದಿ ವಿಷಯಗಳ ಕುರಿತು ಲೇಖನಗಳನ್ನು ಬರೆದಿರುವರು.

ಇದೊಂದು ಗಂಭೀರ ವಿಷಯವನ್ನೊಳಗೊಂಡ ಪ್ರಬಂಧವಾಗಿದ್ದು ಲೇಖಕಿ ಒಬ್ಬ ಸ್ತ್ರೀವಾದಿ ಎಂಬುದು ಸಹಜವಾಗಿಯೇ ಓದುಗರ ಗಮನಕ್ಕೆ ಬರುತ್ತದೆ. ಇಲ್ಲಿ ಲೇಖಕಿಯ ಹಾಸ್ಯಪ್ರಜ್ಞೆ ಓದುಗರನ್ನು ಸೆಳೆಯುತ್ತದೆ. ನಮ್ಮದು ಆಧುನಿಕ ಸಮಾಜ ಎಂದುಕೊಂಡರೂ ಲಿಂಗಾಧಾರಿತ ಪಾತ್ರಗಳ ಬದಲಾಗದ ಸ್ಥಿತಿಯನ್ನು ಲೇಖಕಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಮಹಿಳೆಯರೇ ಮಾಡಬೇಕಾದ ಅಥವಾ ಅವರಿಗೆಂದೇ ಮೀಸಲಾದ ಜವಾಬ್ದಾರಿಗಳ ಕುರಿತು ವಿಡಂಬನಾತ್ಮಕವಾಗಿ ಜೂಡಿ ಬ್ರಾಡಿಯವರು ಇಲ್ಲಿ ಪ್ರಸ್ತಾಪಿಸಿದ್ದಾರೆ. ಸ್ವಗತ ಶೈಲಿಯ ಬರವಣಿಗೆ ಈ ಪ್ರಬಂಧದ ವಿಶೇಷತೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಈ ಬರವಣಿಗೆಯಲ್ಲಿ ಲೇಖಕಿ ಪ್ರಸ್ತಾಪಿಸುವ ಅನೇಕ ಸಂಗತಿಗಳು ಲೇಖನದುದ್ದಕ್ಕೂ ಪುನರಾವರ್ತನೆ ಆಗುತ್ತ ಹೋಗುತ್ತವೆ. ಅದು ಕೆಲವೊಮ್ಮೆ ಓದುಗರಿಗೆ ಕಿರಿಕಿರಿಯಾಗುವ ಮಟ್ಟವನ್ನು ತಲುಪುತ್ತದೆ. ಈ ತಂತ್ರ ಬಳಸುವ ಮೂಲಕ ಲೇಖಕಿ ಒಟ್ಟಾರೆ ಮಹಿಳೆಯರು ಒತ್ತಡಕ್ಕೆ ಒಳಗಾಗುವ ಸನ್ನಿವೇಶಗಳನ್ನು ಅಣಕ ಮಾಡುತ್ತಾರೆ. ಅದರ ಭಾವಾನುವಾದ ಹೀಗಿದೆ:

'ಹೆಂಡತಿಯರು' ಎಂಬ ವರ್ಗೀಕೃತ ವ್ಯವಸ್ಥೆಯಲ್ಲಿ ನಾನೂ ಒಬ್ಬಳು ಹೆಂಡತಿ; ಜೊತೆಗೆ ಸಾಂದರ್ಭಿಕವಾಗಿ ತಾಯಿಯೂ ಹೌದು. ಇತ್ತೀಚೆಗೆ ವಿಚ್ಛೇದನ ಹೊಂದಿದ ನನ್ನ ಸ್ನೇಹಿತನೊಬ್ಬನ ಭೇಟಿಯಾಯಿತು. ಅವನಿಗೊಂದು ಮಗುವಿದೆ ಹಾಗೂ ಅದು ಸ್ವಾಭಾವಿಕವಾಗಿ ತನ್ನ ತಾಯಿಯೊಟ್ಟಿಗೆ ಇದೆ. ಅವನು ಮತ್ತೊಬ್ಬ ಪತ್ನಿಯ ಹುಡುಕಾಟದಲ್ಲಿದ್ದಾನೆ. ಒಂದು ದಿನ ಸಂಜೆ ಇಸ್ತ್ರಿ ಮಾಡುವಾಗ ಅವನನ್ನು ನೆನಪಿಸಿಕೊಂಡಾಗ ನನಗೂ ಒಬ್ಬಳು ಪತ್ನಿ ಬೇಕು ಎನಿಸಿತು. ನನಗೆ ಒಬ್ಬಳು ಪತ್ನಿ ಏಕೆ ಬೇಕು?

ನಾನು ಆರ್ಥಿಕವಾಗಿ ಸದೃಢವಾಗಬಯಸುವವಳು. ಶಾಲೆಯೊಂದರಲ್ಲಿ ಶಿಕ್ಷಕಿಯಾಗಿರುವ ನಾನು ಸ್ವಾವಲಂಬಿಯಾಗಿರಬೇಕು ಹಾಗೂ ನನ್ನನ್ನು ಅವಲಂಬಿಸಿದವರಿಗೆ ಆಧಾರವಾಗಬೇಕು. ನನ್ನನ್ನು ಶಾಲೆಗೆ ಕಳುಹಿಸಿ ನನ್ನ ಮಕ್ಕಳನ್ನು ಕಾಳಜಿಯಿಂದ ನೋಡಿಕೊಳ್ಳುವ ಪತ್ನಿ ನನಗೆ ಬೇಕು. ನನ್ನ ಮಕ್ಕಳನ್ನು ತಜ್ಞವೈದ್ಯರಲ್ಲಿ ಹಾಗೂ ದಂತವೈದ್ಯರಲ್ಲಿ ಕರೆದೊಯ್ಯಲು ಅಪಾಯಿಂಟ್‌ಮೆಂಟ್ ಗೊತ್ತು ಮಾಡಲು ನನಗೊಬ್ಬ ಪತ್ನಿ ಬೇಕು; ಜೊತೆಗೆ ನನ್ನನ್ನೂ ಕೂಡ ಕರೆದೊಯ್ದು ಕಾಳಜಿ ವಹಿಸುವವಳಾಗಿರಬೇಕು. ನನ್ನ ಮಕ್ಕಳಿಗೆ ಊಟ ಮಾಡಿಸಲು, ಅವರನ್ನು ಮತ್ತು ಅವರ ಬಟ್ಟೆಗಳನ್ನು ಶುಚಿಯಾಗಿಡಲು ಹಾಗೂ ಯಾವಾಗಲೂ ಇಸ್ತ್ರಿ ಇರುವಂತೆ ನೋಡಿಕೊಳ್ಳಲು ನನಗೊಬ್ಬ ಪತ್ನಿ ಬೇಕು. ಮಕ್ಕಳನ್ನು ತಯಾರು ಮಾಡಿ ಶಾಲೆಗೆ ಕಳುಹಿಸಿಕೊಟ್ಟು ಅವರನ್ನು ಸಹಪಾಠಿ ಗಳೊಂದಿಗೆ ಆಟಪಾಠದಲ್ಲಿ ಬೆರೆಯುವಂತೆ ಪ್ರೋತ್ಸಾಹಿಸಬೇಕು. ಅವರನ್ನು ಉದ್ಯಾನವನಕ್ಕೆ, ಪ್ರಾಣಿಸಂಗ್ರಹಾಲಯಕ್ಕೆ ಕರೆದೊಯ್ಯಬೇಕು. ನಾನು ನನ್ನ ಕೆಲಸದಲ್ಲಿ ಮಗ್ನವಾದಾಗ ಮಕ್ಕಳು ಖಾಯಿಲೆ ಯಿಂದ ನರಳುವ

ಸ್ಥಿತಿ ಏನಾದರೂ ಉಂಟಾದರೆ ಕಾಳಜಿ ವಹಿಸುವವಳಾಗಿರಬೇಕು; ಹಾಗೂ ಮಕ್ಕಳತ್ತ ವಿಶೇಷ ಗಮನಹರಿಸುವ ಸಂದರ್ಭ ಬಂದರೆ ಆಕೆ ಅವರಿಗೆ ಸಮಯ ಕೊಡುವವಳಾಗಿರಬೇಕು. ಏಕೆಂದರೆ, ನಾನಂತೂ ನನ್ನ ಶಾಲೆಯ ಕೆಲಸಕ್ಕೆ ಗೈರುಹಾಜರಾಗಲು ಸಾಧ್ಯವಿಲ್ಲ. ಅವಳು ಹೊರಗೂ ಸಂಬಳಕ್ಕಾಗಿ ದುಡಿಯುವವಳಾಗಿರಬೇಕು. ನಾನು ನನ್ನ ಕೆಲಸ ಸರಿಯಾಗಿ ನಿರ್ವಹಿಸುವಂತಾಗಲು ಅವಳು ತನ್ನ ಕೆಲಸದ ಅವಧಿಯನ್ನು ಕಡಿತಗೊಳಿಸಿಕೊಳ್ಳಲು ಸಿದ್ಧಳಿರಬೇಕು. ಅವಳ ಸಂಬಳದಲ್ಲಿ ಸ್ವಲ್ಪ ಕಡಿತವಾದರೂ ಚಿಂತೆಯಿಲ್ಲ, ಆದರೆ ನೌಕರಿ ಕಳೆದುಕೊಳ್ಳಕೂಡದು. ಅವಳೂ ದುಡಿದು ಗಳಿಸುತ್ತಾಳೆಂದ ಮೇಲೆ ಮಕ್ಕಳ ಖರ್ಚುವೆಚ್ಚಗಳನ್ನು ಅವಳು ನೋಡಿಕೊಳ್ಳಬೇಕೆಂದು ನಾನು ವಿಶೇಷವಾಗಿ ಹೇಳಬೇಕಾದುದೇನೂ ಇಲ್ಲ. ಹಾಗಂತ ಅವಳಿಗೆ ಮನೆಗೆಲಸದಲ್ಲಿ ಯಾವುದೇ ರಿಯಾಯಿತಿ ಇಲ್ಲ.

ಆಕೆ ನನ್ನೆಲ್ಲಾ ದೈಹಿಕ ಬೇಕುಬೇಡಗಳನ್ನು ಅರಿತಿರುವವಳಾಗಿರಬೇಕು. ಆಕೆ ನನ್ನ ಲೈಂಗಿಕ ತೃಷೆ ಪೂರೈಸಬೇಕು. ಮನೆಯನ್ನು ಸ್ವಚ್ಛವಾಗಿರಿಸಬೇಕು. ಮಕ್ಕಳನ್ನು ಶಾಲೆಯಿಂದ ಕರೆತರುವವಳಾಗಿರಬೇಕು, ಸಾಧ್ಯವಿದ್ದರೆ ನನ್ನನ್ನು ಕೂಡಾ... ನನ್ನ ಪತ್ನಿ ನಮ್ಮ ಬಟ್ಟೆಗಳನ್ನು ಒಗೆದು, ಇಸ್ತ್ರಿ ಮಾಡಿ, ಅವುಗಳ ಜಾಗದಲ್ಲಿ ಇಟ್ಟು, ಇತರ ವಸ್ತುಗಳನ್ನೂ ಅವುಗಳ ಜಾಗದಲ್ಲಿ ಜೋಡಿಸಿ, ಅಗತ್ಯವಿದ್ದಾಗ ತಕ್ಷಣ ಕೊಡುವವಳಾಗಿರಬೇಕು. ಅವಳೊಬ್ಬ ಪಾಕಪ್ರವೀಣೆ ಆಗಿರಲೇಬೇಕು. ಭಕ್ಷ್ಯಗಳ ಪಟ್ಟಿಯನ್ನು ಮೊದಲೇ ತಯಾರಿಸಿಟ್ಟುಕೊಂಡು ಅದರಂತೆ ಕಾರ್ಯತತ್ಪರಳಾಗಬೇಕು. ಅವಳು ಮನೆಯ ದಿನಸಿ ಖರೀದಿಸಿ ಅಂದಿನ ಊಟ-ತಿಂಡಿ ತಯಾರಿಸಿ, ಬಡಿಸಿ ಕೊಡಬೇಕು. ಊಟವಾದ ಮೇಲೆ ನಾನು ನನ್ನ ಅಧ್ಯಯನದಲ್ಲಿ ತೊಡಗಿದಾಗ ಅವಳು ಮನೆಯ ಕಸ-ಮುಸುರೆ ಸ್ವಚ್ಛಮಾಡಬೇಕು. ನಾನು ಅನಾರೋಗ್ಯದಿಂದಿರುವಾಗ ಅವಳು ನನ್ನ ಕಾಳಜಿ ವಹಿಸಬೇಕು. ನಾನು ನೋವು ಅನುಭವಿಸುವಾಗ, ಶಾಲೆಗೆ ಹೋಗಬೇಕಾದ ನನ್ನ ಅಮೂಲ್ಯ ವೇಳೆ ಹಾಳಾದಾಗ ಆಕೆ ನನಗೆ ಸಹಾನುಭೂತಿ ತೋರುವವಳಾಗಿರಬೇಕು. ರಜೆ ಬಂದಾಗ ಕುಟುಂಬದವರನ್ನೆಲ್ಲ ಸುತ್ತಾಡಲು ಕರೆದೊಯ್ಯಬೇಕು ಹಾಗೂ ನಮ್ಮೆಲ್ಲರ ಕಾಳಜಿ ತೆಗೆದುಕೊಳ್ಳಬೇಕು. ನನಗೆ ವಿಶ್ರಾಂತಿ, ಬದಲಾವಣೆ ಬೇಕೆನಿಸಿ ಹೊರಗೆ ಹೋದಾಗ ನನ್ನ ಮಕ್ಕಳ ಹಾಗೂ ಮನೆಯ ಸಂಪೂರ್ಣ ಜವಾಬ್ದಾರಿ ಹೊರಬೇಕು. ನನ್ನ ಪತ್ನಿಯು ಕೆಲಸಗಳ ಕುರಿತು ತಕರಾರು ಹೇಳಬಾರದು. ಆಕೆ ಅಂತಹ ಕರ್ತವ್ಯನಿಷ್ಠ ಹೆಂಡತಿ ಆಗಿರಬೇಕು. ಪಠ್ಯದಲ್ಲಿ ನನಗೆ ಕಷ್ಟವಾದ ವಿಷಯವನ್ನು ನಾನು ಹೇಳುವಾಗ ಆಕೆ ಗಮನವಿಟ್ಟು ಕೇಳಬೇಕು ಹಾಗೂ ನಾನು ಬರೆದ ಪುಟಗಳನ್ನು ಟೈಪ್ ಮಾಡಿಕೊಡಬೇಕು.

ಅವಳು ನನ್ನ ಸಾಮಾಜಿಕ ಜೀವನದ ಎಲ್ಲ ವಿವರಗಳನ್ನೂ ಅರಿತಿರಬೇಕು. ನಮ್ಮನ್ನು ಮಿತ್ರರು ಆಹ್ವಾನಿಸಿದ ಸಂದರ್ಭದಲ್ಲಿ ಆಕೆ ಮಕ್ಕಳನ್ನು ಬೇಬಿ ಸಿಟ್ಟಿಂಗ್‌ಗೆ ಬಿಡುವ ಕಾಳಜಿ ತೆಗೆದುಕೊಳ್ಳಬೇಕು; ನಾನು ನನ್ನ ಸ್ನೇಹಿತರನ್ನು ಆಹ್ವಾನಿಸಿದಾಗ ಆಕೆ ವಿಶೇಷ ಅಡುಗೆ ಮಾಡಿ ಬಡಿಸಬೇಕು. ಮನೆ ಸ್ವಚ್ಛವಾಗಿರುವಂತೆ ನೋಡಿಕೊಳ್ಳಬೇಕು. ನಾನು ಮಿತ್ರರೊಂದಿಗೆ ಸ್ವಾರಸ್ಯಕರವಾದ ಮಾತುಕತೆಗಳಲ್ಲಿ ತೊಡಗಿದಾಗ ಅವಳು ನಡುವೆ ಮೂಗು ತೂರಿಸಬಾರದು. ಅತಿಥಿಗಳು ಮನೆಗೆ ಬರುವ ಮುನ್ನವೇ ಆಕೆ ಮಕ್ಕಳನ್ನು ಉಣಿಸಿ ಮಲಗಿಸಬೇಕು; ಕಾರಣ, ಮಕ್ಕಳು ನಮ್ಮ ಸಮಯ ಹಾಳು ಮಾಡಬಾರದು. ನಮ್ಮ ಅತಿಥಿಗಳಿಗೆ ಆರಾಮವೆನಿಸುವಂತೆ ವರ್ತಿಸಬೇಕು. ಅವರ ಅಗತ್ಯಗಳನ್ನೆಲ್ಲ ಚಾಚೂ ತಪ್ಪದೇ ಪೂರೈಸಬೇಕು. ಅವರಿಗೆ ಅಗತ್ಯವಿರುವ ಆ್ಯಶ್‌ಟ್ರೇ ಇಡಬೇಕು. ಅಗತ್ಯ ಬಿದ್ದರೆ ಅವರ ಗ್ಲಾಸುಗಳಿಗೆ ಮತ್ತಷ್ಟು ವೈನ್ ಸುರಿಯಬೇಕು. ಊಟಕ್ಕೂ ಮೊದಲು ಅಪ್ಪಿಟೈಸರ್‌ಗಳನ್ನು ಕೊಡಬೇಕು. ಊಟ ಮಾಡುವಾಗ ಮತ್ತೆ ಮತ್ತೆ ಅವರಿಗೇನು ಬೇಕೆಂದು ಕೇಳಿ ಬಡಿಸುತ್ತಿರಬೇಕು. ಅವರಿಗೆ ಬೇಕೆನಿಸಿದಾಗ ಕಾಫಿ ಮಾಡಿಕೊಡಬೇಕು.

ನನಗೆ ಕೆಲಸಲ ನೈಟ್‌ಔಟ್‌ಗೆ ಹೋಗಬೇಕೆಂದೆನಿಸುವುದು ಅವಳಿಗೆ ಗೊತ್ತಿರಬೇಕು. ನನ್ನನ್ನು ಲೈಂಗಿಕವಾಗಿ ಎಲ್ಲ ರೀತಿಯಿಂದ ತೃಪ್ತಿಪಡಿಸಬೇಕು. ಆಕೆ ನನ್ನ ಮನಸ್ಥಿತಿ ಅರಿತವಳಾಗಿರಬೇಕು. ನನಗೆ ಮೂಡ್ ಇಲ್ಲದಿರುವಾಗ ನನ್ನಿಂದ ಯಾವುದೇ ಶಾರೀರಿಕ ತೃಪ್ತಿಯನ್ನು ಬಯಸಬಾರದು. ಜನನ ನಿಯಂತ್ರಣದ ಸಂಪೂರ್ಣ ಜವಾಬ್ದಾರಿ ಹೊರಲು ಅವಳೇ ಸಿದ್ಧಳಿರಬೇಕು ಏಕೆಂದರೆ ನನಗೆ ಹೆಚ್ಚು ಮಕ್ಕಳು ಬೇಡ. ನನ್ನ ಹೆಂಡತಿ ಲೈಂಗಿಕವಾಗಿ ನನಗೆ ನಿಷ್ಠಳಾಗಿರಬೇಕು. ಆ ವಿಷಯದಲ್ಲಿ ನನಗೆ ಮತ್ಸರ ಉಂಟಾಗಿ ನನ್ನ ಬೌದ್ಧಿಕ ಚಟುವಟಿಕೆಗಳಿಗೆ ಧಕ್ಕೆಯಾಗಬಾರದು. ಏಕಪತ್ನಿವ್ರತಕ್ಕೆ ನಾನು ಗಟ್ಟಿಯಾಗಿ ಅಂಟಿಕೊಳ್ಳಲಾರೆ ಹಾಗೂ ನನ್ನ ಲೈಂಗಿಕ ಬೇಡಿಕೆಗಳು ಈ ವ್ಯವಸ್ಥೆಯಾಚೆಗೂ ಚಾಚಬಲ್ಲವು ಎಂಬುದನ್ನು ಅವಳು ಅರಿತವಳಾಗಿರಬೇಕು. ನನ್ನ ಇಚ್ಛೆಗೆ ಅನುಗುಣವಾದ ಸಂಬಂಧಗಳನ್ನು ಪೂರ್ಣಪ್ರಮಾಣದಲ್ಲಿ ಹೊಂದುವ ಸಾಧ್ಯತೆ ನನಗೆ ಮುಕ್ತವಾಗಿರಬೇಕು.

ಅಕಸ್ಮಾತ್ ನನಗೆ ಈಗಿರುವವಳಿಗಿಂತಲೂ ಒಳ್ಳೆಯ ಹೆಂಡತಿ ಸಿಕ್ಕರೆ, ಅವಳನ್ನು ಬದಲಾಯಿಸುವ ಸ್ವಾತಂತ್ರ್ಯವಿರಬೇಕು. ಹೌದು; ನಾನು ಹೊಸ, ತಾಜಾ ಜೀವನ ಬಯಸುತ್ತೇನೆ. ಅಂತಹ ಸಂದರ್ಭದಲ್ಲಿ ಎಂದಿನಂತೆ ನನ್ನ ಹೆಂಡತಿ ನನ್ನ ಮಕ್ಕಳ ಎಲ್ಲಾ ಜವಾಬ್ದಾರಿಯನ್ನೂ ತಕರಾರಿಲ್ಲದೇ ಹೆಗಲಿಗೇರಿಸಿಕೊಂಡು ನನ್ನನ್ನು ಬಂಧಮುಕ್ತಗೊಳಿಸಬೇಕು. ಯಾವಾಗ ನಾನು ನನ್ನ ಶಾಲೆಯ ಕರ್ತವ್ಯಗಳಲ್ಲಿ ತೊಡಗಿರುವೆನೋ ಆಗವಳು ತನ್ನ ಉದ್ಯೋಗವನ್ನು ತ್ಯಜಿಸಿ ಪೂರ್ಣಪ್ರಮಾಣದಲ್ಲಿ ಮನೆಗೆಲಸದಲ್ಲಿ ತೊಡಗಿ ತನ್ನ ಕರ್ತವ್ಯ ನಿರ್ವಹಿಸಲಿಕ್ಕೂ ತಯಾರಿರಬೇಕು.

ಓ ದೇವರೇ !! ಇಂತಹ ಹೆಂಡತಿ ಯಾರಿಗೆ ಬೇಡ?! ಎಂಬ ಪ್ರಶ್ನೆಯೊಂದಿಗೆ ಬರಹ ಕೊನೆಗೊಳ್ಳುತ್ತದೆ.

ಹೀಗೆ ಶಾಲೆಯ ಶಿಕ್ಷಕಿಯಾದ ಲೇಖಕಿಗೆ 'ತನಗೆ ಒಬ್ಬ ಪತ್ನಿ ಇದ್ದು ಆಕೆ ತನ್ನೆಲ್ಲಾ ಜವಾಬ್ದಾರಿಗಳನ್ನು ನಿಭಾಯಿಸುವಂತಾಗಿದ್ದರೆ?' ಎಂದೆನಿಸುವುದಕ್ಕೆ ಹಲವಾರು ಕಾರಣಗಳಿವೆ. ತನ್ನ ಸಮಕಾಲೀನ ಸಮಾಜ ಎಷ್ಟೊಂದು ಪುರುಷಪ್ರಧಾನವಾಗಿದೆ ಎಂದು ಬಿಂಬಿಸುವುದು ಅವಳ ಲೇಖನದ ಉದ್ದೇಶವಾಗಿದೆ. ಹೆಂಡತಿ ಗಂಡನಿಗೆ ವಿಧೇಯಳಾಗಿರಬೇಕೆಂದು ಬಯಸುವುದು ಕೇವಲ ಕೆಲ ಭೂಖಂಡಗಳ ಗುಣಲಕ್ಷಣವಾಗಿರದೇ ಅದೊಂದು ಜಾಗತಿಕ ಕಾಯಿಲೆಯಾಗಿದೆ ಎಂಬುದನ್ನು ಲೇಖಕಿ ಅತ್ಯಂತ ಮಾರ್ಮಿಕವಾಗಿ ಪ್ರಸ್ತುತ ಲೇಖನದಲ್ಲಿ ನಿರೂಪಿಸಿದ್ದಾರೆ. ಸಾಮಾನ್ಯವಾಗಿ ನಾವು ನಮ್ಮ ಸುತ್ತಮುತ್ತ ನಡೆಯುವ ವಿದ್ಯಮಾನಗಳನ್ನಷ್ಟೇ ಗಮನಿಸಿರುತ್ತೇವೆ. ಆದರೆ ಪಾಶ್ಚಾತ್ಯ ದೇಶಗಳಲ್ಲಿಯೂ ಪರಿಸ್ಥಿತಿ ಬೇರೆಯಾಗಿಲ್ಲವೆಂಬುದು ಈ ಪ್ರಬಂಧ ಓದುವಾಗ ನನ್ನ ಗಮನಕ್ಕೆ ಬಂತು. ಪುರುಷನಿಗೊಂದು ಮೌಲ್ಯ, ಮಹಿಳೆಗೊಂದು ಮೌಲ್ಯವೆಂಬುದು ಕೇವಲ ಭಾರತದಲ್ಲಷ್ಟೇ ಒಡೆದು ಕಾಣುವಂತಿದೆ ಎಂದು ತಿಳಿದಿದ್ದ ನನಗೆ ಜೂಡಿಯ ಪ್ರಬಂಧ ಓದಿದಾಗ ಲಿಂಗಾಧಾರಿತ ದ್ವಿಮುಖನೀತಿ ಸಾರ್ವತ್ರಿಕವಾಗಿದೆ ಎಂಬ ಕಲ್ಪನೆ ಬಂತು. ಧರ್ಮ, ವರ್ಣ, ಜಾತಿ, ಭೇದಗಳು ಒಂದು ಪ್ರಾಂತ್ಯದ, ಒಂದು ದೇಶದ, ಒಂದು ಖಂಡಕ್ಕೆ ಅಂಟಿದ ಶಾಪವಾದರೆ, ವೈವಾಹಿಕ ವ್ಯವಸ್ಥೆಯಲ್ಲಿ ಸ್ತ್ರೀಶೋಷಣೆ ಎಂಬುದು ಪ್ರತಿ ಮನೆ, ಪ್ರತಿ ಸಂಸಾರಕ್ಕೆ ಜಾಗತಿಕವಾಗಿ ಅಂಟಿದ ಶಾಪವಾಗಿದೆ.

ಎಲ್ಲ ಪಾಲಕರೂ ತಮ್ಮ ಮಕ್ಕಳಿಗೆ ಹೆಣ್ಣು-ಗಂಡೆಂಬ ಭೇದವಿಲ್ಲದೇ ಚಿಕ್ಕವಯಸ್ಸಿನಿಂದಲೇ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುವುದನ್ನು ಹಾಗೂ ತಮ್ಮ ಸುತ್ತಲಿನ ಪರಿಸರವನ್ನು ಶುಚಿಯಾಗಿಡುವುದನ್ನು ಕಲಿಸಬೇಕು. ವಯಸ್ಸಿಗೆ ಬರುವಷ್ಟರಲ್ಲಿಯೇ ಅಡುಗೆ ಮಾಡುವುದನ್ನೂ ಕಲಿಸಿದರೆ ಇನ್ನೂ ಒಳ್ಳೆಯದು. ನಾವು ಊಟ ಮಾಡುತ್ತೇವೆ ಎಂದಾದರೆ ಅಡುಗೆಯನ್ನೂ ಕಲಿಯಬೇಕು. ಕೊಳೆ ಮಾಡುತ್ತೇವೆ ಎಂದಾದರೆ ಸ್ವಚ್ಛ ಮಾಡಲೂ ಕಲಿಯಬೇಕು. ಆಗ ಮನೆಯಲ್ಲಿ ಎಲ್ಲರಲ್ಲೂ ಶ್ರಮವಿಭಜನೆಯಾಗಿ ಒತ್ತಡಕ್ಕೊಳಗಾಗುವುದನ್ನು ತಪ್ಪಿಸಬಹುದು. ಮಹಿಳೆ ಮಾಡುವ ಮನೆಗೆಲಸ ಕೀಳು, ಹೊರಗೆ ದುಡಿಯುವ ಪುರುಷನ ಕೆಲಸ ಮೇಲು ಎಂಬ ಭಾವನೆಯನ್ನು ಈ ಮೂಲಕ ತಪ್ಪಿಸಬಹುದು.

**ಪ್ರಿಯದರ್ಶಿನಿ ಶೆಟ್ಟರ**
D/O ಡಾ॥ ಶಿವಾನಂದ ಶೆಟ್ಟರ, ನಂ. ೭, 'ಮೇಘಪ್ರಿಯ', ಜಲದರ್ಶಿನಿ ಬಡಾವಣೆ
ಧಾರವಾಡ – ೫೮೦ ೦೦೩

## ಅಭಿನಂದನೆ...

ಮೂಡುಬಿದಿರೆಯ ಶಿವರಾಮ ಕಾರಂತ ಪ್ರತಿಷ್ಠಾನದ ವತಿಯಿಂದ ನೀಡುವ ಇಪ್ಪತ್ತನೇ ವರ್ಷದ 'ಶಿವರಾಮ ಕಾರಂತ' ಪ್ರಶಸ್ತಿಯು ಚಿಂತನಶೀಲ ಲೇಖಕಿ, ಸಂಘಟಕಿ ಡಾ॥ ವಿಜಯಾ ಅವರಿಗೆ ಲಭಿಸಿದೆ. ಡಾ॥ ವಿಜಯಾ ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

# ಮೊದಲ ಸ್ತ್ರೀವಾದಿ ಸಾಹಿತ್ಯ ವಿಮರ್ಶಕಿ ತಾರಾಬಾಯಿ ಶಿಂಧೆ



**ದಕ್ಷಿಣ** ಗುಜರಾತಿನ ಸೂರತ್ ಬಳಿ ಒಂದು ಚಿಕ್ಕ ಹಳ್ಳಿ ಒಲ್‌ಪಾಡ್. ೧೮೮೦ರ ಸರಿ ಸುಮಾರು ಸಂದರ್ಭ. ಇಪ್ಪತ್ತನಾಲ್ಕು ವರ್ಷ ವಯಸ್ಸಿನ ವಿಜಯಲಕ್ಷ್ಮಿ ಎಂಬ ಬ್ರಾಹ್ಮಣ ಯುವತಿ, ವಿಧವೆಯಾಗಿದ್ದವಳು ಗರ್ಭಿಣಿಯಾಗಿದ್ದಾಳೆ ಎಂಬ ಸುದ್ದಿ ಊರಲ್ಲೆಲ್ಲಾ ಹರಡುತ್ತದೆ. ಈ ಸುದ್ದಿಯ ಸತ್ಯಾಸತ್ಯತೆಯನ್ನು ತಿಳಿಯಲು ಸ್ಥಳೀಯ ಪೊಲೀಸನು ಈ ಊರಿಗೆ ಭೇಟಿ ನೀಡುತ್ತಾನೆ. ಈ ಸುದ್ದಿ ನಿಜವೆಂದು ದೃಢಪಡಿಸಿಕೊಂಡು ಅದನ್ನು ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ವರದಿ ಮಾಡುತ್ತಾನೆ. ಇದಾದ ನಂತರ ಮತ್ತೇನೂ ವಿಶೇಷ ನಡೆಯುವುದಿಲ್ಲ. ೧೮೮೧ರ ಮಾರ್ಚ್ ತಿಂಗಳಲ್ಲಿ ಹಳ್ಳಿಯ ಕಸದ ತೊಟ್ಟಿಯಲ್ಲಿ ನವಜಾತ ಶಿಶುವೊಂದರ ದೇಹವು ಪತ್ತೆಯಾಗುತ್ತದೆ. ತಕ್ಷಣವೇ ಸ್ಥಳೀಯ ಪೊಲೀಸ್ ವಿಜಯಲಕ್ಷ್ಮಿಯನ್ನು ಭೇಟಿ ಮಾಡಿ ನಡೆದ ಕೃತ್ಯದ ಸತ್ಯಾಸತ್ಯತೆಯನ್ನು ದೃಢಪಡಿಸಿಕೊಳ್ಳುತ್ತಾನೆ. ಕೂಡಲೇ ಅವಳನ್ನು ಎತ್ತಿನ ಗಾಡಿಯಲ್ಲಿ ಕೂಡಿಸಿಕೊಂಡು ಸೂರತ್‌ಗೆ ಕರೆದುಕೊಂಡು ಹೋಗುತ್ತಾನೆ. ವಿಜಯಲಕ್ಷ್ಮಿ ವಿಧಿಯಿಲ್ಲದೆ ಎರಡನೇ ದರ್ಜೆ ಮ್ಯಾಜಿಸ್ಟ್ರೇಟ್ ಮುಂದೆ ತಾನು ಮಾಡಿದ ತಪ್ಪನ್ನು ಒಪ್ಪಿಕೊಳ್ಳುತ್ತಾಳೆ. ಮಗುವನ್ನು ಹಡೆದ ಮೇಲೆ ಸಮಾಜದ ಮುಂದೆ ಆಗುವ ಅವಮಾನವನ್ನು ಎದುರಿಸಲಾಗದೆ, ಈಳಿಗೆ ಮಣೆಯಿಂದ ತನಗೆ ಹುಟ್ಟಿದ ಮಗುವಿನ ಕುತ್ತಿಗೆಯನ್ನು ಸೀಳಿ ಕೊಂದು, ಮನೆಯ ಕೆಲಸಗಿತ್ತಿಯ ಮೂಲಕ ಅದನ್ನು ತಿಪ್ಪೆಗೆ ಎಸೆದೆ ಎಂದು ನಿವೇದಿಸಿ ಕೊಳ್ಳುತ್ತಾಳೆ. ನಂತರ ಅವಳನ್ನು ಪರೀಕ್ಷಿಸಿದ ಸಿವಿಲ್ ವೈದ್ಯರು ಅವಳು ಬಾಣಂತಿಯೆಂಬುದನ್ನು ದೃಢಪಡಿಸಿದ ನಂತರ ಅವಳನ್ನು ಅವಳ ಹಳ್ಳಿಗೆ ಹಿಂತಿರುಗಿ ಕಳಿಸುತ್ತಾರೆ. ಮತ್ತೆ ೧೮೮೧ರ ಏಪ್ರಿಲ್‌ನಲ್ಲಿ ಅವಳನ್ನು ಸೆಷನ್ ನ್ಯಾಯಾಲಯದ ಮುಂದೆ ಕರೆತಂದು ನಿಲ್ಲಿಸಿದಾಗ, ನ್ಯಾಯಾಲಯವು ಅವಳಿಗೆ ಗಲ್ಲು ಶಿಕ್ಷೆಯನ್ನು ಪ್ರಕಟಿಸುತ್ತದೆ. ನಂತರ ಮೇಲ್ಮನವಿ ಸಲ್ಲಿಸಲಾಗಿ ಮುಂಬೈಯ ಉನ್ನತ ನ್ಯಾಯಾಲಯವು ಅವಳ ಶಿಕ್ಷೆಯನ್ನು ಗಡೀಪಾರಿಗೆ ಸೀಮಿತಗೊಳಿಸುತ್ತದೆ.

ಹತ್ತೊಂಭತ್ತನೇ ಶತಮಾನದ ಸಂದರ್ಭದಲ್ಲಿ ವಿಜಯಲಕ್ಷ್ಮಿಯ ಈ ಪ್ರಕರಣದಂತಹವು ಅಂದಿನ ಬ್ರಾಹ್ಮಣ ಮತ್ತು ಉನ್ನತ ಜಾತಿಯ ಕುಟುಂಬಗಳಲ್ಲಿ ಸರ್ವೇಸಾಧಾರಣವಾದದ್ದು. ಮೈನೆರೆಯುವುದಕ್ಕೆ ಮುಂಚೆಯೇ ಮದುವೆಯಾದ ಹೆಣ್ಣು ಮಕ್ಕಳು, ಚಿಕ್ಕ ವಯಸ್ಸಿನಲ್ಲಿ ತಮ್ಮ ಗಂಡನನ್ನು ಕಳೆದುಕೊಂಡು ವಿಧವೆಯರೂ ಆಗಿಬಿಟ್ಟರಂತೂ ಅವರು ಅನುಸರಿಸಬೇಕಾದ ನೈಷ್ಠಿಕ ನಿಯಮಪಾಲನೆಗಳು ಅತಿ ಕಠೋರವಾಗಿದ್ದವು. ಇಂತಹ ಎಷ್ಟೋ ಪ್ರಕರಣಗಳು ಈ ಹಿಂದೆಯೂ ನಡೆದಿದ್ದರೂ ಈ ವಿಜಯಲಕ್ಷ್ಮಿಯ ಪ್ರಕರಣವನ್ನು ಕುರಿತು 'ಪುಣೆ ವೈಭವ್' ಎನ್ನುವ ವಾರಪತ್ರಿಕೆಯು ಅಂದಿನ ಹೆಂಗಸರ ಕೆಟ್ಟ ಚಾರಿತ್ರ್ಯದ ಬಗ್ಗೆ ಲೇಖನವನ್ನು ಪ್ರಕಟಿಸಿತ್ತು. ಈ ಪ್ರಕರಣವು ಅಂದಿನ ಸಾರ್ವಜನಿಕರಲ್ಲಿ ಚರ್ಚೆಗೊಳಗಾಯಿತು. ಹಾಗಾಗಿ ಇದು ಎಲ್ಲರ ವಿಶೇಷ ಗಮನವನ್ನು ಸೆಳೆಯಿತು. ಈ ಚರ್ಚೆಯು ವಿಜಯಲಕ್ಷ್ಮಿಯ ಪ್ರಕರಣಕ್ಕೆ ಮಾತ್ರ ಸೀಮಿತವಾಗದೆ, ಅಂದಿನ ಹೆಣ್ಣುಮಕ್ಕಳ ಜೀವನದ ಕಷ್ಟಕಾರ್ಪಣ್ಯಗಳ ಮೇಲೂ ಬೆಳಕು ಬೀರುವಲ್ಲಿ ಯಶಸ್ವಿಯಾಯಿತು. ಇದರಿಂದ ಕುಪಿತಳಾದ ಮಹಾರಾಷ್ಟ್ರದ ತಾರಾಬಾಯಿಯೆಂಬ ದಿಟ್ಟ ಹೆಣ್ಣು ಮಗಳು ಈ ಪರಿಸ್ಥಿತಿಯ ಹಿಂದಿನ ಸಾಮಾಜಿಕ ಹಿನ್ನೆಲೆಯನ್ನು ವಿಶ್ಲೇಷಿಸಿ ಅತ್ಯಂತ ನಿಷ್ಠುರವಾದ ಶೈಲಿಯಲ್ಲಿ ಕಿರುಹೊತ್ತಿಗೆಯೊಂದನ್ನು ೧೮೮೨ರಲ್ಲಿ ಪ್ರಕಟಿಸಿದಳು. ಅದೇ 'ಸ್ತ್ರೀ–ಪುರುಷ ತುಲನ'.

೧೮೫೦ರಲ್ಲಿ ಮಹಾರಾಷ್ಟ್ರದ ಬುಲ್ಡಾನದಲ್ಲಿ ಬಾಪೂಜಿ ಹರಿಶಿಂಧೆಯವರಿಗೆ ತಾರಾಬಾಯಿ ಶಿಂಧೆ ಜನಿಸಿದಳು. ಅವರ ಐವರು ಮಕ್ಕಳಲ್ಲಿ ಇವಳೂ ಒಬ್ಬಳು. ಹರಿಶಿಂಧೆಗೆ ಊರ ಹೊರಗೆ ಸ್ವಲ್ಪ ಹೊಲಮನಿ ಇದ್ದರೂ ಅವನು ಡೆಪ್ಯುಟಿ ಕಮಿಷನರ್ ಆಫ್ ರೆವಿನ್ಯೂ ಕಚೇರಿಯಲ್ಲಿ ಗುಮಾಸ್ತನಾಗಿ ಕೆಲಸ ಮಾಡುತ್ತಿದ್ದ. ಅಂದು ಜ್ಯೋತಿಬಾ ಫುಲೆಯವರು ಆರಂಭಿಸಿದ ಸತ್ಯಶೋಧಕ ಸಮಾಜದ ಸಕ್ರಿಯ ಕಾರ್ಯಕರ್ತನಾಗಿದ್ದ ಈತ ಹೊಸ ಹೊಸ ವಿಚಾರಗಳಿಗೆ ತೆರೆದುಕೊಂಡಿದ್ದ. ಅವನು ತುಂಬ ವಿಚಾರವಾದಿಯಾಗಿದ್ದ. ೧೮೭೧ರಲ್ಲಿ 'ಹಿಂಟ್ ಟು ದಿ ಎಜುಕೇಟೆಡ್ ನೇಟಿವ್ಸ್' ಎಂಬ ಪುಸ್ತಕ ಕೂಡ ರಚಿಸಿದ್ದ. ತನ್ನ ಒಬ್ಬಳೇ ಮಗಳಾಗಿದ್ದ ತಾರಾಬಾಯಿಯನ್ನು ಹರಿಶಿಂಧೆ ಪ್ರೀತಿಯಿಂದ ಅತ್ಯಂತ ಮುಚ್ಚಟೆಯಾಗಿ ಬೆಳೆಸಿದ. ಅವರ ಊರಿನಲ್ಲಿ ಬಾಲಕಿಯರ ಶಾಲೆಯಿರಲಿಲ್ಲ. ಆದರೂ ಮಗಳಿಗೆ ಮರಾಠಿಯ ಜೊತೆಗೆ ಇಂಗ್ಲಿಷ್, ಸಂಸ್ಕೃತದ ಶಿಕ್ಷಣವನ್ನು ಮನೆಯಲ್ಲೇ ಕೊಡಿಸಿದ. ನಾಲ್ಕು ಜನ ಗಂಡುಮಕ್ಕಳೊಂದಿಗೆ ಏಕೈಕ ಮಗಳಾಗಿ ಹುಟ್ಟಿದ್ದ ತಾರಾಬಾಯಿಗೆ ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡಿದ್ದ. ಅವನು ಮನೆ ಅಳಿಯನನ್ನೇ ಹುಡುಕಿದ್ದರಿಂದ ಬೇರೆ ಮರಾಠಿ ಗೃಹಿಣಿಯರಿಗಿಂತ ಹೆಚ್ಚು ಸ್ವಾತಂತ್ರ್ಯವನ್ನು ಇವಳು ಅನುಭವಿಸಿದ್ದಳು. ಇವಳಿಗೆ ಮಕ್ಕಳಿರಲಿಲ್ಲ.

೧೮೭೩ರಲ್ಲಿ ಜ್ಯೋತಿಬಾ ಅವರು ಸತ್ಯಶೋಧಕ ಸಮಾಜವನ್ನು ಆರಂಭಿಸಿದಾಗ ತಾರಾಬಾಯಿಯು ಅದರ ಸ್ಥಾಪನೆಯ ಸಂದರ್ಭದಿಂದಲೂ ಜ್ಯೋತಿಬಾ ಮತ್ತು ಸಾವಿತ್ರಿಬಾಯಿಯವರೊಂದಿಗೆ ಸತ್ಯಶೋಧಕ ಸಮಾಜದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದಳು. ಜ್ಯೋತಿಬಾ ಫುಲೆಯವರು ಇವರ ಕುಟುಂಬದ ಸ್ನೇಹಿತರಾಗಿದ್ದರು.

ಹತ್ತೊಂಭತ್ತನೇ ಶತಮಾನದ ವಿಶಿಷ್ಟ ಕಾಲಘಟ್ಟದಲ್ಲಿ ಅಂದಿನ ಸಮಾಜ ಸುಧಾರಕರು ವಿಧವೆಯರ ಸಂಕಷ್ಟಗಳು ಮತ್ತು ಇತರ ಹೆಣ್ಣಿನ ಸಮಸ್ಯೆಗಳ ಬಗ್ಗೆ ಗಮನ ಹರಿಸಿ ಕಾರ್ಯ ನಿರ್ವಹಿಸುತ್ತಿದ್ದಾಗ, ತಾರಾಬಾಯಿ ಶಿಂಧೆಯು ಈ ಸ್ತ್ರೀಶೋಷಣೆಯ ಪರಿಧಿಯನ್ನು ಇನ್ನಷ್ಟು ವಿಸ್ತರಿಸಿ ಪಿತೃಪ್ರಧಾನ ಸಮಾಜದ ಸೈದ್ಧಾಂತಿಕ ರಚನೆಯ ವಿಶ್ಲೇಷಣೆಯನ್ನು ಮುಂದಿಟ್ಟಿದ್ದು ಅವಳ ಹೆಗ್ಗಳಿಕೆಯಾಗಿದೆ. ಹೆಂಗಸರು ಎಲ್ಲೇ ಇರಲಿ ಅವರು ಶೋಷಿತರು, ಎಂಬ ವಾದವನ್ನು ತಮ್ಮ 'ಸ್ತ್ರೀ-ಪುರುಷ್ ತುಲನ' ಬರಹದ ಮೂಲಕ ಪ್ರಸ್ತುತಪಡಿಸುತ್ತಾಳೆ. ೧೮೮೨ರಲ್ಲಿಯೇ ಪ್ರಕಟವಾದ ಈ ಕೃತಿಯನ್ನು ಭಾರತೀಯ ಸ್ತ್ರೀವಾದದ ಮೊದಲ ಪಠ್ಯ ಎಂದು ಗುರುತಿಸಲಾಗುತ್ತದೆ.

**ಡಾ॥ ಎನ್. ಗಾಯತ್ರಿ**

ಇವರು ಸ್ಥಾಪಿಸಿದ ಬಾಲಿಕಾ ಶಾಲೆಗಳು ಮತ್ತು ವಿಧವೆಯರ ಆಶ್ರಮದಲ್ಲೂ ತಾರಾಬಾಯಿ ಸೇವೆ ಮಾಡುತ್ತಿದ್ದಳು. ಇಂದಿಗೂ ತಾರಾಬಾಯಿಯವರನ್ನು ಎಲ್ಲರೂ ನೆನಪಿಸಿಕೊಳ್ಳುವುದು ಆಕೆಯು ಬರೆದ 'ಸ್ತ್ರೀ–ಪುರುಷ ತುಲನ' ಕೃತಿಗಾಗಿ.

ಅವಳು ಬರೆದ 'ಸ್ತ್ರೀ–ಪುರುಷ ತುಲನ' ಕೃತಿಯು ಮರಾಠಿ ಭಾಷೆಯಲ್ಲಿ ಪೂನಾದಲ್ಲಿ ಪ್ರಕಟವಾಗಿದ್ದು ಐವತ್ತೆರಡು ಪುಟಗಳನ್ನು ಹೊಂದಿದೆ. ಮೊದಲು ಪ್ರಕಟವಾದಾಗ ೫೦೦ ಪ್ರತಿಗಳನ್ನು ಮುದ್ರಿಸಲಾಗಿತ್ತು. ಪುಸ್ತಕದಲ್ಲಿ ಯಾವುದೇ ಕ್ರಮಬದ್ಧವಾದ ವಿಂಗಡಣೆಯಿರಲಿಲ್ಲ. ಈ ಪುಸ್ತಕದ ಮುನ್ನುಡಿಯಲ್ಲಿ ಲೇಖಕಿಯು ಹೀಗೆ ಹೇಳಿಕೊಂಡಿದ್ದಾರೆ, "ಇದು ನನ್ನ ಮೊದಲ ನಮ್ರ ಪ್ರಯತ್ನ. ಈ ಪುಸ್ತಕದ ಬರಹದಲ್ಲಿನ ಪ್ಯಾರಾಗಳು ತುಂಡುತುಂಡಾಗಿರಬಹುದು, ಸಂಬಂಧವು ಅಸಮರ್ಪಕವಾಗಿರಬಹುದು. ಇದನ್ನು ಹಳೆಯ ಮರಾಠಿ, ಒರಟು ಭಾಷೆಯಲ್ಲಿ ಬರೆದಿರುವೆ. ಆದರೆ ಪ್ರತಿದಿನ ಪುರುಷರ ದುಷ್ಟ ಹಾಗೂ ನಾಚಿಕೆಗೆಟ್ಟ ಕುತಂತ್ರದ ವರ್ತನೆಯ ಹೊಸ ಹೊಸ ಭಯಾನಕ ಉದಾಹರಣೆಗಳನ್ನು ನೋಡುತ್ತಿದ್ದೇವೆ. ಯಾರೊಬ್ಬರೂ ಇದರ ಬಗ್ಗೆ ಏನನ್ನೂ ಹೇಳುತ್ತಿಲ್ಲ. ಅದರ ಬದಲಿಗೆ ಜನರು ಯಾವಾಗಲೂ ಹೆಂಗಸರದೇ ತಪ್ಪು ಎಂಬಂತೆ ಅವರ ಮೇಲೆ ದೋಷಾರೋಪ ಮಾಡುತ್ತಾ ತಿರುಗುತ್ತಿರುತ್ತಾರೆ. ಇದನ್ನು ನೋಡಿದಾಗ ಸ್ತ್ರೀಕುಲದ ಮರ್ಯಾದೆಗೆ ಒದಗಿದ ದುರವಸ್ಥೆಗಾಗಿ ನನ್ನ ಮನಸ್ಸು ಕಲಕಿದಂತಾಗಿ ವ್ಯಾಕುಲಗೊಳ್ಳುತ್ತದೆ. ಆದ್ದರಿಂದ ನನಗೆ ಈ ವಿಷಯಗಳನ್ನು ಬರೆಯಲು ಯಾವುದೇ ಭಯವಿಲ್ಲ. ಈ ಹರಿತವಾದ ಭಾಷೆಯನ್ನು ಬಳಸದೇ ಇರಲು ನನಗೆ ಸಾಧ್ಯವಿರಲಿಲ್ಲ."

स्त्रीपुरुषतुलना.

अथवा

स्त्रिया व पुरुष यांत साहसी कोण हें स्पष्ट करून दाखविण्याकरितां हा निबंध

ताराबाई शिंदे यानीं रचिला.

बुलढाणें.

प्रांत वऱ्हाड.

पुणें येथें

"श्री शिवाजी" छापखान्यांत छापिलें.

सन १८८२ इ०

किंमत ९ आणे.

"ಸ್ತ್ರೀ–ಪುರುಷ ತುಲನ" ಪುಸ್ತಕದ ಮುಖಪುಟ

ಜ್ಯೋತಿಬಾ ಫುಲೆ ೧೮೮೫ರಲ್ಲಿ ಪ್ರಕಟವಾದ ತಮ್ಮ ಪತ್ರಿಕೆ 'ಸತ್‌ಸಾರ'ದ ಎರಡನೆಯ ಸಂಚಿಕೆಯಲ್ಲಿ ತಾರಾಬಾಯಿಯನ್ನು ಮಹಿಳೆಯರ ಘನತೆ ಮತ್ತು ಹಕ್ಕುಗಳಿಗಾಗಿ ಹೋರಾಡಿದ ದಿಟ್ಟ ಮಹಿಳೆ ಎಂದು ಗುರುತಿಸುತ್ತಾರೆ. ಅವಳನ್ನು ಆಪ್ತವಾಗಿ 'ಚಿರಂಜೀವಿ' ಎಂದು ಸಂಬೋಧಿಸುತ್ತಾರೆ. "ಇಂದು ಇಂಗ್ಲಿಷ್ ಆಳ್ವಿಕೆಯ ಪರಿಣಾಮವಾಗಿ ಕೆಲವರಾದರೂ ಶೋಷಿತ ಮಹಿಳಾ ಸಮುದಾಯಕ್ಕೆ ಸೇರಿದವರು ಹಿಂಜರಿಕೆಯಿಂದಲೇ ಓದು, ಬರಹದಲ್ಲಿ ತೊಡಗಿದ್ದಾರೆ. ಆರ್ಯರು ಸಾವಿರಾರು ವರ್ಷಗಳಿಂದ ಎಲ್ಲ ರೀತಿಯಿಂದಲೂ ಹೆಣ್ಣುಮಕ್ಕಳನ್ನು ಶೋಷಿಸುತ್ತಾ ಬಂದಿರುವ ಮತ್ತು ಈಗಲೂ ಅದನ್ನು ಮುಂದುವರಿಸಿರುವ ಕುತಂತ್ರದ ಬಗ್ಗೆ ಹೆಣ್ಣುಮಕ್ಕಳ ಕಣ್ತೆರೆಸುವ ಒಂದು ಚಿಕ್ಕ ಪ್ರಯತ್ನವನ್ನು ಈ ಪುಸ್ತಕದಲ್ಲಿ ಮಾಡಿದ್ದಾರೆ." ಎಂದು ಹೇಳುತ್ತಾ ತಾರಾಬಾಯಿಯವರನ್ನು ಟೀಕಿಸಿ ದವರನ್ನು ತರಾಟೆಗೆ ತೆಗೆದುಕೊಳ್ಳುತ್ತಾರೆ.

ಇದರಿಂದ ತಾರಾಬಾಯಿ ಮತ್ತು ಫುಲೆಯವರ ಸಾಮಾಜಿಕ ಚಿಂತನೆಯಲ್ಲಿ ಸಾಮ್ಯವಿತ್ತು, ಎನ್ನುವುದು ಸ್ಪಷ್ಟವಾಗುತ್ತದೆ. ಕರ್ಮಠ ಬ್ರಾಹ್ಮಣ ಧರ್ಮದ ಬಗ್ಗೆ ಇಬ್ಬರೂ ಹರಿತವಾದ ನಾಲಿಗೆಯನ್ನೇ ಬಳಸುತ್ತಾರೆ. ಸತ್ಯಶೋಧಕ ಸಮಾಜದ ಭಾಷೆಯ ಶಬ್ದಭಂಡಾರವನ್ನು ಅವಳು ಯಥೇಚ್ಛವಾಗಿ ಬಳಸುತ್ತಾಳೆ. ಬ್ರಾಹ್ಮಣರ ಅತಿ ದುರಾಸೆಯ, ಲೋಲುಪತನದ ವರ್ಣರಂಜಿತ ಚಿತ್ರಗಳನ್ನು ಅವಳದೇ ಶಬ್ದಾಡಂಬರದಲ್ಲಿ ಮತ್ತೆ ಮತ್ತೆ ಬಳಸುತ್ತಾಳೆ. ಫುಲೆಯವರ ಪ್ರಕಾರ ಬ್ರಾಹ್ಮಣರ ಧರ್ಮವು ಕೆಳಜಾತಿ ಸಮುದಾಯದವರನ್ನು ಶೋಷಿಸಿದೆಯೆಂಬುದಾದರೆ, ತಾರಾಬಾಯಿಯವರ ತರ್ಕ ಆ ಧರ್ಮ ಗಂಡಸರಿಂದ ರೂಪಿಸಿರುವುದೇ ಕಾರಣವಾಗಿದೆ, ಎಂಬುದಾಗಿದೆ. ಅವಳು ಬ್ರಾಹ್ಮಣರ ಪುರುಷಾಧಿಕಾರವನ್ನು ಮಾತ್ರ ಧಿಕ್ಕರಿಸುವುದಿಲ್ಲ, ಎಲ್ಲ ರೀತಿಯ ಪುರುಷಾಧಿಕಾರವನ್ನೂ ಧಿಕ್ಕರಿಸುತ್ತಾಳೆ. ಲೇಖಕಿಯಾಗಿ ಅವಳು ತನ್ನ ಪುಸ್ತಕದಲ್ಲಿ ಸಂಬೋಧಿಸುವ ಓದುಗರು ಎಲ್ಲ ಜಾತಿಯ ಪುರುಷರಾಗಿದ್ದಾರೆ. ಅವಳು ಚರ್ಚಿಸುವ ಸ್ತ್ರೀಶಿಕ್ಷಣ, ಮಹಿಳೆಯರ ಮರುಮದುವೆ, ಮಹಿಳೆಯರನ್ನು ಹೊರಕ್ಕೆ ಬಿಡದಿರುವುದು – ಈ ವಿಷಯಗಳೆಲ್ಲ ಅವಳಿಗೆ ತತ್‌ಕ್ಷಣದ ಸಮಸ್ಯೆಗಳಾಗಿ ಕಾಣುತ್ತವೆ.

ಹತ್ತೊಂಭತ್ತನೇ ಶತಮಾನದ ವಿಶಿಷ್ಟ ಕಾಲಘಟ್ಟದಲ್ಲಿ ಅಂದಿನ ಸಮಾಜ ಸುಧಾರಕರು ವಿಧವೆಯರ ಸಂಕಷ್ಟಗಳು ಮತ್ತು ಇತರ ಹೆಣ್ಣಿನ ಸಮಸ್ಯೆಗಳ ಬಗ್ಗೆ ಗಮನ ಹರಿಸಿ ಕಾರ್ಯನಿರ್ವಹಿಸುತ್ತಿದ್ದಾಗ, ತಾರಾಬಾಯಿ ಶಿಂಧೆಯು ಈ ಸ್ತ್ರೀಶೋಷಣೆಯ ಪರಿಧಿಯನ್ನು ಇನ್ನಷ್ಟು ವಿಸ್ತರಿಸಿ ಪಿತೃಪ್ರಧಾನ ಸಮಾಜದ ಸೈದ್ಧಾಂತಿಕ ರಚನೆಯ ವಿಶ್ಲೇಷಣೆಯನ್ನು ಮುಂದಿಟ್ಟಿದ್ದು ಅವಳ ಹೆಗ್ಗಳಿಕೆಯಾಗಿದೆ. ಹೆಂಗಸರು ಎಲ್ಲೇ ಇರಲಿ ಅವರು ಶೋಷಿತರು ಎಂಬ ವಾದವನ್ನು ತಮ್ಮ ಬರಹದ ಮೂಲಕ ಪ್ರಸ್ತುತಪಡಿಸುತ್ತಾಳೆ.

ವಿಜಯಲಕ್ಷ್ಮಿ ಪ್ರಕರಣಕ್ಕೆ ಪ್ರತಿಕ್ರಿಯೆಯಾಗಿ ತಾರಾಬಾಯಿ ಈ ಪುಸ್ತಕವನ್ನು ರಚಿಸಿದರೂ ಮುಂದುವರಿದಂತೆ ಅವಳು ತನ್ನ ಕಾಲದ ಪಿತೃಪ್ರಧಾನ ಸಮಾಜದ ಸಂರಚನೆಗಳನ್ನು ವಿಶ್ಲೇಷಿಸಲು ಹದಿನಾರನೇ ಶತಮಾನದ ಪಂಡರಾಪುರದ ಸಂಸ್ಕೃತ ಪಂಡಿತ ಶ್ರೀಧರ ರಚಿಸಿರುವ 'ರಾಮವಿಜಯ' ಮತ್ತು ಭರ್ತೃಹರಿಯ 'ಶತಕತ್ರಯಂ' ಕೃತಿಯನ್ನು ವಿಶ್ಲೇಷಣೆ ಮಾಡುತ್ತಾಳೆ. ಈ ಕಾರಣದಿಂದಲೂ ಅವಳನ್ನು ಭಾರತದ ಮೊಟ್ಟ ಮೊದಲ ಸ್ತ್ರೀವಾದಿ ಸಾಹಿತ್ಯ ವಿಮರ್ಶಕಿಯೆಂದು ಗುರುತಿಸಲಾಗುತ್ತದೆ. ವಿಶ್ವದ ಪ್ರಮುಖ ಸ್ತ್ರೀವಾದಿ ಚಿಂತಕಿಯೆಂದು ಗುರುತಿಸಲ್ಪಡುವ ಸಿಮನ್ ದ ಬೋವಾಳಿಗಿಂತ ಅರವತ್ತು ವರ್ಷಗಳ ಮುಂಚೆಯೇ ತಾರಾಬಾಯಿ ಸ್ತ್ರೀವಾದಿ ಪಠ್ಯವನ್ನು ರಚಿಸಿದ್ದಳು ಎಂಬುದು ಗಮನಾರ್ಹ.

೧೮೮೨ರಲ್ಲಿ ಸ್ತ್ರೀ–ಪುರುಷ ತುಲನ ಕೃತಿಯ ಮೊದಲ ಮುದ್ರಣ ಪ್ರಕಟವಾದ ನಂತರ ತಾರಾಬಾಯಿ ಅದನ್ನು ಮತ್ತೆ ಪ್ರಕಟಿಸಲಿಲ್ಲ. ಕೃಷ್ಣರಾವ್ ಬಾಳೇಕರ್ ಸಂಪಾದಿಸುತ್ತಿದ್ದ 'ಶೇತ್ಕರಣಾ ಚ ಕೈವಾರಿ' ಎಂಬ ಪ್ರಮುಖ ಮರಾಠಿ ಪತ್ರಿಕೆಯಲ್ಲಿ ತಾರಾಬಾಯಿಯ ಪುಸ್ತಕವನ್ನು ಕುರಿತು ಅವಹೇಳನಕಾರಿ ವಿಮರ್ಶೆಯು ಪ್ರಕಟವಾಯಿತು. ಈ ಕಟು ಟೀಕೆಯನ್ನು ಕುರಿತು ಜ್ಯೋತಿಬಾ ಫುಲೆ ಬರೆಯುತ್ತಾರೆ: "ಒಬ್ಬ ಮೂರ್ಖ ಪತ್ರಿಕೆಯ ಸಂಪಾದಕ ತಾರಾಬಾಯಿ ಬರೆದುದನ್ನು ಇಷ್ಟಪಟ್ಟಿಲ್ಲ. ಬಹುಶಃ ಅವಳ ಎಲ್ಲ ಆರೋಪಗಳು ಅವನ ಕುತ್ತಿಗೆಗೆ ಸುತ್ತುಕೊಳ್ಳುತ್ತದೆಂದು ಹೆದರಿರಬೇಕು. ಆದ್ದರಿಂದ ತಾರಾಬಾಯಿಯ ಪುಸ್ತಕವನ್ನು ಖಂಡಿಸಲು ಅವಳು ಆ ಪುಸ್ತಕದಲ್ಲಿ ಸೂಚಿಸಿರುವ ಎಲ್ಲ ಸಲಹೆಗಳನ್ನು ಕಸದ ಬುಟ್ಟಿಗೆ ಎಸೆದಿದ್ದಾನೆ. ತಾರಾಬಾಯಿಯ ಎಲ್ಲ ಪ್ರಯತ್ನಗಳನ್ನು ನಿಂದಿಸಿದ್ದಾನೆ."

ಇಂತಹ ಸಾರ್ವಜನಿಕ ಟೀಕೆಗಳು ಅವಳು ನೇಪಥ್ಯಕ್ಕೆ ಸರಿಯಲು ಕಾರಣವಾಗಿರಬಹುದು. ೧೯೭೦ರವರೆಗೆ ಎಸ್. ಜಿ. ಮಾಲ್‌ಶೆ ಈ ಪುಸ್ತಕವನ್ನು ಕುರಿತು ಮಾತನಾಡುವವರೆಗೆ ಯಾರೂ ಈ ಪುಸ್ತಕದತ್ತ ಗಮನ ಹರಿಸಿರಲಿಲ್ಲ. ೧೯೭೫ರಲ್ಲಿ ಈ ಪುಸ್ತಕ ಎರಡನೆಯ ಮುದ್ರಣ ಕಂಡಿತು ಮತ್ತು ಸಾರ್ವಜನಿಕರ ಗಮನಕ್ಕೆ ಬಂತು. ಪ್ರಸಿದ್ಧ ಚರಿತ್ರಕಾರ ರಾಮಚಂದ್ರ ಗುಹಾ ಅವರು ತಮ್ಮ ಆಧುನಿಕ ಭಾರತದ ನಿರ್ಮಾಪಕರು ಕೃತಿಯಲ್ಲಿ ತಾರಾಬಾಯಿ ಶಿಂಧೆಯವರ ಬರಹವನ್ನು ಕುರಿತು ಹೇಳುತ್ತಾ "ಪಿತೃಪ್ರಾಧಾನ್ಯತೆ ಮತ್ತು ಪುರುಷ ಆಧಿಪತ್ಯವು ರೂಪಿಸಿರುವ ಸಾಮಾಜಿಕ ವ್ಯವಸ್ಥೆ, ಸಾಂಸ್ಕೃತಿಕ ಪೂರ್ವಗ್ರಹಗಳನ್ನು ಇಷ್ಟೊಂದು ನೇರವಾಗಿ ಮತ್ತು ಧೈರ್ಯದಿಂದ ಈ ಮುಂಚೆ ಯಾರೂ ಪ್ರಶ್ನಿಸಿರಲಿಲ್ಲ" ಎಂದು ಅಭಿಪ್ರಾಯಪಡುತ್ತಾರೆ. ಸೂಸಿ ಥಾರು ಮತ್ತು ಲಲಿತಾ ಅವರು ಗಮನಿಸುವಂತೆ ಇದು ಭಾರತದ ಮೊದಲ ಸ್ತ್ರೀವಾದಿ ಪಠ್ಯವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇಂತಹ ಪಠ್ಯವೊಂದನ್ನು ಕೊಟ್ಟ ಸ್ತ್ರೀವಾದಿ ಸಾಮಾಜಿಕ ಕಾರ್ಯಕರ್ತೆಯಾದ ತಾರಾಬಾಯಿ ಶಿಂಧೆ ಭಾರತೀಯ ಮಹಿಳಾವಾದದ ಮೊದಲಗಿತ್ತಿಯರಲ್ಲಿ ಪ್ರಮುಖಳು.

**ಡಾ|| ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್'
ಛತ್ರಂ ಬ್ಲಾಕ್, ಕೆಂಪೇಗೌಡ ನಗರ, ಗವೀಪುರಂ ಬೆಂಗಳೂರು – ೫೬೦ ೦೧೯
ಇಮೇಲ್ : mygaven3@gmail.com

# ಚಿಮಮಾಂಡಳ ಫೆಮಿನಿಸ್ಟ್ ಮ್ಯಾನಿಫೆಸ್ಟೋ ಹದಿನೈದು ಸಲಹೆಗಳು

ಡಾ॥ ಕಾವ್ಯಶ್ರೀ ಹೆಚ್.

'ಡಿಯರ್ ಐಜಾವಿಲೆ ಆರ್ ಎ ಫೆಮಿನಿಸ್ಟ್ ಮ್ಯಾನಿಫೆಸ್ಟೊ ಇನ್ ಫಿಫ್ಟೀನ್ ಸಜೆಷನ್ಸ್' ಅಮೆರಿಕದ ಪ್ರಸಿದ್ಧ ಲೇಖಕಿ ಚಿಮಮಾಂಡ ಎನ್‌ಗೋಝಿ ಅಡಿಚಿ ಅವರ ಪ್ರಸಿದ್ಧ ಪ್ರಬಂಧ. ಇವರ ಗೆಳತಿ ಐಜಾವಿಲೆ ತನ್ನ ನವಜಾತ ಹೆಣ್ಣುಮಗುವನ್ನು ಸ್ತ್ರೀವಾದಿಯಾಗಿ ಹೇಗೆ ಬೆಳೆಸಬೇಕೆಂದು ಕೇಳಿದಾಗ ಚಿಮಮಾಂಡ ಈ-ಮೇಲ್ ಮೂಲಕ ಸಲಹೆಗಳನ್ನು ನೀಡಿದ್ದರು. ಅದಕ್ಕೆ ದೀರ್ಘ ಪ್ರಬಂಧದ ಸ್ವರೂಪವನ್ನು ನೀಡಿ ೨೦೧೬ರಲ್ಲಿ ಫೇಸ್‌ಬುಕ್‌ನಲ್ಲಿ ಚಿಮಮಾಂಡ ಪ್ರಕಟಿಸಿದ್ದರು. ಸ್ತ್ರೀವಾದಿ ಚಿಂತನೆಯನ್ನು ಹೊಸ ಆಯಾಮದಲ್ಲಿ ನೋಡುವಂತೆ ಮಾಡಿದ ಈ ಪ್ರಬಂಧ ಪುಟ್ಟ ಪುಸ್ತಕ ರೂಪದಲ್ಲಿ ಪ್ರಕಟಗೊಂಡು ಹಲವು ಭಾಷೆಗಳಿಗೆ ಅನುವಾದವಾಗಿದೆ. ಪತ್ರರೂಪದಲ್ಲಿರುವ ಈ ಪ್ರಬಂಧದಲ್ಲಿ ಪುರುಷ ಪ್ರಧಾನ ಆಲೋಚನೆಗಳು ಹೆಣ್ಣಿನ ಮನೋಲೋಕವನ್ನು ನಿಯಂತ್ರಿಸಲು ಬಣ್ಣ, ಮಾತು, ನಡೆ, ನುಡಿ, ಉಡುಗೆ, ಅಲಂಕಾರ, ಸ್ವಾತಂತ್ರ್ಯ ಎಲ್ಲವನ್ನೂ ಹೇಗೆ ಬಳಸಿಕೊಳ್ಳುತ್ತದೆ ಎಂಬುದನ್ನು ಚರ್ಚಿಸಿದ್ದಾರೆ. ಸ್ತ್ರೀವಾದ, ಲಿಂಗಸಮಾನತೆ ಎಂಬುದು ಹಕ್ಕಷ್ಟೇ ಅಲ್ಲ, ಸಹಜ ಮತ್ತು ಮಾನವೀಯ ಎಂಬುದನ್ನು ಪ್ರತಿಪಾದಿಸುವ ಈ ಸಲಹೆಗಳು ಅಪಾರ ಮೆಚ್ಚುಗೆಯನ್ನು ಪಡೆದಿವೆ. ದಿ ಗಾರ್ಡಿಯನ್ ಪತ್ರಿಕೆ ಈ ಪುಟ್ಟ ಪುಸ್ತಕ ಕುರಿತು, "ಈ ಪುಸ್ತಕವನ್ನು ಇಷ್ಟಪಡದಿರುವುದು ತುಂಬಾ ಕಷ್ಟ. ಚಿಮಮಾಂಡ ಎನ್‌ಗೋಜಿ ಅಡಿಚಿ ಅವರ ವೈಶಿಷ್ಟ್ಯವಾದ ಬಿಸುಪು, ತಿಳಿವು ಮತ್ತು ನೇರತನವನ್ನು ಈ ಪುಸ್ತಕ ಪ್ರತಿಫಲಿಸುತ್ತದೆ'' ಎಂದು ಶ್ಲಾಘಿಸಿದೆ.

**ಡಿಯರ್ ಐಜಾವಿಲೆ**

**ಸಲಹೆ ೧ : ಒಬ್ಬ ಪರಿಪೂರ್ಣ ವ್ಯಕ್ತಿಯಾಗಿರು.**

ತಾಯ್ತನ ಎನ್ನುವುದು ಭವ್ಯವಾದ ಉಡುಗೊರೆ. ಆದರೆ ಅದೊಂದರ ಮೂಲಕವೇ ನಿನ್ನನ್ನು ನೀನು ಗುರುತಿಸಿಕೊಳ್ಳಬೇಡ. ಪರಿಪೂರ್ಣ ವ್ಯಕ್ತಿಯಾಗುವುದರಿಂದ ನಿನ್ನ ಮಗುವಿಗೂ ಲಾಭಗಳಿವೆ. ಅಮೆರಿಕನ್ ಪತ್ರಕರ್ತೆ ಮರ್ಲಿನ್ ಸ್ಯಾಂಡರ್ಸ್, ವಿಯಟ್ನಾಂನಿಂದ ಯುದ್ಧದ ವರದಿ ಮಾಡಿದ ಮೊದಲ ಮಹಿಳಾ ಪತ್ರಕರ್ತೆ. ತನ್ನ ಒಬ್ಬ ಕಿರಿಯ ಪತ್ರಕರ್ತೆಗೆ ನೀಡಿದ ಸಲಹೆ ಹೀಗಿತ್ತು – "ದುಡಿಮೆಯ ಕಾರಣಕ್ಕಾಗಿ ಎಂದೂ ಕ್ಷಮೆ ಕೇಳಬೇಡ. ನೀನು ಮಾಡುವ ಕೆಲಸವನ್ನು ಪ್ರೀತಿಸುವುದೇ ನಿನ್ನ ಮಗುವಿಗೆ ನೀನು ಕೊಡುವ ಉಡುಗೊರೆ."

ನನಗೆ ಈ ಮಾತು ಬಹಳ ಜಾಣ್ಮೆಯದ್ದೆನಿಸಿತು. ನೀನು ನಿನ್ನ ಉದ್ಯೋಗವನ್ನು ಪ್ರೀತಿಸಬೇಕಾಗಿಲ್ಲ. ಮಾಡುವ ಕೆಲಸ ಮತ್ತು ಅದರಿಂದಾಗುವ ಸಂಪಾದನೆಯಿಂದ ನಿನಗೆ ಲಭಿಸುವ ಆತ್ಮವಿಶ್ವಾಸ ಮತ್ತು ಆತ್ಮತೃಪ್ತಿಯನ್ನು ಪ್ರೀತಿಸಿದರೆ ಸಾಕು. ನೀನು ಸಂಪ್ರದಾಯಸ್ಥ ತಾಯಿಯಂತೆ ಮನೆಯಲ್ಲಿರಬೇಕು ಎಂಬ ನಿನ್ನ ವಾರಗಿತ್ತಿಯ ಮಾತು ಕೇಳಿ ನನಗೆ ಆಶ್ಚರ್ಯವಾಗುವುದಿಲ್ಲ. ಏನನ್ನು ಬೇಕಾದರೂ, ಯಾವುದನ್ನಾದರೂ ಸಮರ್ಥಿಸಿಕೊಳ್ಳಲು ಜನ 'ಸಂಪ್ರದಾಯ'ವನ್ನು ಆರಿಸಿಕೊಳ್ಳುತ್ತಾರೆ. ಅವಳಿಗೆ ಹೇಳು ಇಬ್ಬರ ಆದಾಯವಿರುವ ಕುಟುಂಬವೇ ನಿಜವಾದ 'ಇಗ್ಬೊ' ಸಂಪ್ರದಾಯವೆಂದು. ಏಕೆಂದರೆ ಬ್ರಿಟಿಷ್ ವಸಾಹತುಶಾಹಿಗೂ ಮುನ್ನ ತಾಯಂದಿರು ಕೃಷಿ ಮತ್ತು ವ್ಯಾಪಾರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರು.

ನೀನು ಏನು ಮಾಡಬೇಕು ಎಂಬುದರ ಬಗ್ಗೆ ಪ್ರತಿಯೊಬ್ಬರೂ ತಮ್ಮದೇ ಆದ ಅಭಿಪ್ರಾಯ ಹೊಂದಿರುತ್ತಾರೆ. ಆದರೆ ನಿನಗೆ ಏನು ಬೇಕು ಎನ್ನುವುದು ಬಹಳ ಮುಖ್ಯವೇ ಹೊರತು, ಬೇರೆಯವರು ನೀನು ಏನು ಮಾಡಬೇಕು ಎನ್ನುತ್ತಾರೆ ಎನ್ನುವುದಲ್ಲ. ತಾಯ್ತನ ಮತ್ತು ಉದ್ಯೋಗ ಇವೆರಡೂ ಒಂದಕ್ಕೊಂದು ಹೊರತಾದುದು ಎಂಬ ಭಾವನೆಯನ್ನು ಬಿಡು.

ನಾವು ಬೆಳೆಯುವಾಗ ನಮ್ಮ ತಾಯಂದಿರು ಪೂರ್ಣ ಪ್ರಮಾಣದ ಕೆಲಸಗಾರರಾಗಿದ್ದರೂ ನಾವೆಲ್ಲರೂ ಚೆನ್ನಾಗಿಯೇ ಬದುಕುತ್ತಿಲ್ಲವೇ?

ತಾಯ್ತನದ ನಿನ್ನ ಈ ಆರಂಭದ ದಿನಗಳಲ್ಲಿ, ನಿನ್ನ ಬಗ್ಗೆ ಮೃದು



ಧೋರಣೆ ಇಟ್ಟುಕೋ, ಬೇರೆಯವರ ಬಳಿ ಸಹಾಯ ಕೇಳು, ಸಹಾಯವನ್ನು ನಿರೀಕ್ಷಿಸು. 'ಸೂಪರ್ ವುಮನ್' ಎಂಬುವಂತಹದ್ದೆಲ್ಲಾ ಏನೂ ಇಲ್ಲ. ನಿನ್ನ ಸೋಲುಗಳಿಗೆ ಅವಕಾಶ ನೀಡು. ಒಬ್ಬ ಹೊಸ ತಾಯಿಗೆ ಅಳುವ ಮಗುವನ್ನು ಸಮಾಧಾನಪಡಿಸುವುದು ಗೊತ್ತಿರಲೇ ಬೇಕೆಂದೇನಿಲ್ಲ. ನಿನಗೆ ಎಲ್ಲವೂ ಗೊತ್ತಿರಬೇಕು ಎಂದುಕೊಳ್ಳಬೇಡ. ಪುಸ್ತಕ ಓದು, ಇಂಟರ್ನೆಟ್ ನೋಡು. ಹಿರಿಯ ಪೋಷಕರನ್ನು ಕೇಳು ಅಥವಾ ನೀನೇ ಪರೀಕ್ಷಿಸಿ ತಿಳಿದುಕೊ, ನಿನಗಾಗಿ ಸಮಯ ಮೀಸಲಿಡು, ನಿನ್ನ ಅಗತ್ಯಗಳನ್ನು ಪೂರೈಸಿಕೋ.

ಎಲ್ಲವನ್ನೂ ಮಾಡಬೇಕು ಎಂದುಕೊಳ್ಳಬೇಡ. ಹೀಗೆ ಎಲ್ಲವನ್ನೂ ನಿಭಾಯಿಸುವ ಹೆಂಗಸರನ್ನು ನಮ್ಮ ಸಂಸ್ಕೃತಿ ವಿಜೃಂಭಿಸುತ್ತದೆ. ಆರೈಕೆ ಮಾಡುವುದು ಮತ್ತು ಗೃಹಕೃತ್ಯಗಳು ಹೆಂಗಸರ ವಿಭಾಗಕ್ಕೆ ಸೇರಿದ್ದು ಎಂಬ ಅಭಿಪ್ರಾಯವನ್ನೂ ಹೊಂದಿದೆ. ನಾನಂತೂ ಇದನ್ನು ಸಂಪೂರ್ಣವಾಗಿ ನಿರಾಕರಿಸುತ್ತೇನೆ. ಗೃಹಕೃತ್ಯ ಮತ್ತು ಆರೈಕೆ 'ಜೆಂಡರ್ ನ್ಯೂಟ್ರಲ್' (ಲಿಂಗ ತಟಸ್ಥ) ಆಗಿರಬೇಕು.

**ಸಲಹೆ ೨ : ಒಟ್ಟಿಗೆ ಮಾಡಿ**

ನಿನ್ನ ಪತಿ ಚೂಡಿ, ಅವನು ಮಾಡಲು ಸಾಧ್ಯವಿರುವ ಎಲ್ಲ ಕೆಲಸಗಳನ್ನೂ ಮಾಡಬೇಕು. ಅಂದರೆ ಮೊಲೆಯೂಡಿಸುವುದೊಂದು ಬಿಟ್ಟು. ತಾಯಂದಿರಿಗೆ ಎಲ್ಲವನ್ನೂ ತಾವೇ ಮಾಡಿ ಎಷ್ಟು ಅಭ್ಯಾಸವಾಗಿಬಿಟ್ಟಿರುತ್ತದೆ ಎಂದರೆ, ಎಲ್ಲವೂ ತಾವೇ ಆಗಿ ತಂದೆಯ ಭಾಗವಹಿಸುವಿಕೆಯನ್ನು ಕುಗ್ಗಿಸುವಲ್ಲಿ ಅವರ ಪಾತ್ರವೂ ಇದೆ.

ಮಗುವಿನ ಆರೈಕೆಯನ್ನು ಇಬ್ಬರೂ ಹಂಚಿಕೊಳ್ಳಿ. ಸಹಾಯದ ಭಾಷೆಯನ್ನು ನಿರಾಕರಿಸು. ಚೂಡಿ ಮಗುವಿನ ಆರೈಕೆ ಮಾಡುವುದರ ಮೂಲಕ ನಿನಗೆ ಸಹಾಯ ಮಾಡುತ್ತಿಲ್ಲ. ಅವನು ಮಾಡಬೇಕಾದ ಕೆಲಸವನ್ನು ಮಾಡುತ್ತಿದ್ದಾನೆ. ತಂದೆಯಂದಿರು ಸಹಾಯ ಮಾಡುತ್ತಿದ್ದಾರೆ ಎಂದಾಕ್ಷಣ ಮಗುವಿನ ಆರೈಕೆ ತಾಯಿಯ ವಲಯಕ್ಕೆ ಸೇರಿದ್ದು, ತಂದೆ ಆ ಗಡಿಯನ್ನು ದಾಟಿದ ಸಾಹಸಿ ಎಂದು ಸೂಚಿಸಿದಂತಾಗುತ್ತದೆ. ಮತ್ತು ಈ ಕೆಲಸಕ್ಕಾಗಿ ಚೂಡಿ ವಿಶೇಷ ಕೃತಜ್ಞತೆಗೋ, ಹೊಗಳಿಕೆಗೋ ಪಾತ್ರನಾಗುವುದಿಲ್ಲ ಅಥವಾ ನೀನು ಕೂಡ, ಏಕೆಂದರೆ ಈ ಮಗುವನ್ನು ಈ ಲೋಕಕ್ಕೆ ತರುವುದು ನಿಮ್ಮಿಬ್ಬರದೇ ಆಯ್ಕೆಯಾಗಿತ್ತು ಮತ್ತು ಅದರ ಜವಾಬ್ದಾರಿ ಕೂಡ ನಿಮ್ಮದು.

**ಸಲಹೆ ೩ :** ಲಿಂಗಾಧಾರಿತ ನಡವಳಿಕೆ ಎಂಬ ಪರಿಕಲ್ಪನೆಯೇ ಅರ್ಥಹೀನ ಎಂಬುದನ್ನು ಅವಳಿಗೆ ಕಲಿಸು. ನೀನು ಹುಡುಗಿ, ಆದ್ದರಿಂದ ಇದನ್ನು ಮಾಡಬಾರದು, ಇದನ್ನು ಮಾಡಬೇಕು ಎಂದು, ಎಂದಿಗೂ ಹೇಳಬೇಡ.

ನಾನು ಚಿಕ್ಕವಳಾಗಿದ್ದಾಗ ಕೇಳುತ್ತಿದ್ದ ಒಂದು ಮಾತು ಚೆನ್ನಾಗಿ ನೆನಪಿದೆ. 'ನಡುಬಗ್ಗಿಸಿ ಕಸಗುಡಿಸು, ಹುಡುಗಿಯ ಹಾಗೆ' ಇದರರ್ಥ ಕಸ ಗುಡಿಸುವುದು ಹೆಣ್ಣು ಮಕ್ಕಳು ಮಾತ್ರ ಎಂದು.

ನೈಜೀರಿಯಾದ ಸಾಮಾಜಿಕ ಮಾಧ್ಯಮದಲ್ಲಿ ಮತ್ತೊಂದು ಪ್ರಚಲಿತ ವಾದವೆಂದರೆ – ಹೆಂಡತಿಯರು ಗಂಡನಿಗಾಗಿ ಅಡುಗೆ ಮಾಡಬೇಕೆಂಬುದು. ಅಡುಗೆ ಮಾಡುವುದು, ಮದುವೆಯ ಅರ್ಹತಾ ಪರೀಕ್ಷೆಯಾಗಿದೆ. ಹೆಣ್ಣಿಗೆ ಹುಟ್ಟಿನೊಂದಿಗೆ ಅಡುಗೆಯ ಜ್ಞಾನ ಬರುವುದಿಲ್ಲ. ಅದೊಂದು ಕಲಿತ ಕ್ರಿಯೆ–ಮನೆಗೆಲಸ. ಜೀವನ ನಿರ್ವಹಣೆಗಾಗಿ ಹೆಣ್ಣು–ಗಂಡು ಇಬ್ಬರಿಗೂ ಅಗತ್ಯವಾದ ಒಂದು ಕೌಶಲ್ಯ, ಅಷ್ಟೇ.

ಪ್ರಶ್ನಿಸಬೇಕಾದ ಮತ್ತೊಂದು ವಿಚಾರವೆಂದರೆ ಹೆಣ್ಣಿಗೆ ಮದುವೆ ದೊಡ್ಡ ಬಹುಮಾನ ಎಂದು ಬಿಂಬಿಸುವ ಪ್ರಚಲಿತ ಕಲ್ಪನೆಯನ್ನು, ಹೆಣ್ಣು ಈ ರೀತಿ ಪರಿಭಾವಿಸುವುದನ್ನು ನಿಲ್ಲಿಸಿದರೆ, ಮದುವೆ ಎಂಬ ಬಹುಮಾನವನ್ನು ಪಡೆಯಲೆಂದೇ ಅಡುಗೆ ಮಾಡುವ ಅರ್ಹತೆ ಗಳಿಸಿಕೊಳ್ಳಬೇಕೆಂಬ ವಾದವೂ ನೆಲೆ ಕಳೆದುಕೊಳ್ಳುತ್ತದೆ.

ಜಗತ್ತು ಬಹಳ ಬೇಗನೆ 'ಲಿಂಗಾಧಾರಿತ ನಡವಳಿಕೆಗಳನ್ನು ಹುಟ್ಟುಹಾಕುತ್ತದೆ. ನಿನ್ನೆ ನಿನ್ನ ಮಗುವಿಗೊಂದು ಉಡುಪನ್ನು ಕೊಳ್ಳಲು ಬಟ್ಟೆಯಂಗಡಿಗೆ ಹೋಗಿದ್ದೆ. ಹೆಣ್ಣುಮಕ್ಕಳ ವಿಭಾಗದಲ್ಲಿ ಇದ್ದ ಉಡುಪುಗಳೆಲ್ಲ ತಿಳಿ ಗುಲಾಬಿ ಬಣ್ಣದ, ಮಾಸಲು ಛಾಯೆಯ ವಸ್ತ್ರಗಳು. ನನಗೆ ಅವು ಹಿಡಿಸಲಿಲ್ಲ. ಹುಡುಗರ ವಿಭಾಗದಲ್ಲಿ ಎದ್ದು ಕಾಣುವ ನೀಲಿ ಬಣ್ಣದ ಬಗೆ ಬಗೆ ಉಡುಪುಗಳಿದ್ದವು. ಇದನ್ನು ಕಂಡುಹಿಡಿದವರಾರು? ಹಾಗೆಯೇ ಆಟಿಕೆಗಳ ವಿಭಾಗದಲ್ಲಿ ಕೂಡ, ಹುಡುಗರಿಗೆ–ರೈಲು, ಕಾರು, ಹುಡುಗಿಯರಿಗೆ ಗೊಂಬೆಗಳು. ಸಮಾಜ ಎಷ್ಟು ಚಿಕ್ಕ ವಯಸ್ಸಿನಿಂದಲೇ ಒಬ್ಬ ಹುಡುಗ ಏನು ಮಾಡಬೇಕು, ಒಬ್ಬ ಹುಡುಗಿ ಏನು ಮಾಡಬೇಕು ಎಂಬ ಕಲ್ಪನೆಯನ್ನು ಬಿತ್ತತೊಡಗುತ್ತದೆ. ಚಿಕ್ಕ ಮಕ್ಕಳ ಮೇಲೆ ಇಂತಹ ವಿಭಾಗೀಕರಣವನ್ನು ಹೇರದಿದ್ದರೆ ಅವರಲ್ಲಿ ಅಡಗಿರುವ ಪೂರ್ಣ ಸಾಮರ್ಥ್ಯ ಹೊರಬರಲು ಅವಕಾಶ ನೀಡಿದಂತಾಗುತ್ತದೆ.

ಇವುಗಳಿಂದ ಬಿಡಿಸಿಕೊಳ್ಳುವುದು ಬಹಳ ಕಷ್ಟ. ಹೀಗಾಗಿ ನಿನ್ನ ಮಗಳಿಗೆ ಚಿಕ್ಕಂದಿನಿಂದಲೇ ಇವುಗಳನ್ನು ನಿರಾಕರಿಸುವುದನ್ನು ಕಲಿಸು. ಅಂತಹ ಆಲೋಚನೆ ಮತ್ತು ವಿಚಾರಗಳನ್ನು ಮೈಗೂಡಿಸಿಕೊಳ್ಳುವ ಬದಲು ಸ್ವಾವಲಂಬಿಯಾಗುವುದನ್ನು ಕಲಿಸು.

**ಸಲಹೆ ೪ : ಲಘು ಸ್ತ್ರೀವಾದದ ಅಪಾಯಗಳು**

'ಫೆಮಿನಿಸಂ ಲೈಟ್' ಎಂದು ನಾನು ಯಾವುದನ್ನು ಕರೆಯುತ್ತೇನೋ ಅದರ ಬಗ್ಗೆ ಬಹಳ ಜಾಗರೂಕರಾಗಿರಬೇಕು. ಏಕೆಂದರೆ ಆ ಕಲ್ಪನೆಯು ಷರತ್ತುಬದ್ಧ ಸ್ತ್ರೀ ಸಮಾನತೆಯನ್ನು ಎತ್ತಿ ಹಿಡಿಯುತ್ತದೆ. ಅದೊಂದು ಟೊಳ್ಳಾದ, ಓಲೈಕೆಯ ಮತ್ತು ಬೌದ್ಧಿಕ ದಿವಾಳಿತನದಿಂದ ಕೂಡಿದ ಪರಿಕಲ್ಪನೆ.

ಇಬ್ಬರೂ ಸಮಾನರು ಎಂದು ಒಪ್ಪಿಕೊಳ್ಳಬೇಕು ಅಥವಾ ಸಮಾನರಲ್ಲ ಎಂಬುದನ್ನು!

ಆದರೆ ಲಘು ಸ್ತ್ರೀವಾದ ಹಾಗಲ್ಲ. ಅದು ಸಾದೃಶ್ಯಗಳನ್ನು ಬಳಸುತ್ತದೆ. ಉದಾಹರಣೆಗೆ, ಅವನು ತಲೆಯಾದರೆ, ಅವಳು ಕೊರಳು ಅಥವಾ ಗಂಡು ಚಾಲಕ, ಆದರೆ ಹೆಣ್ಣನ್ನು ಮುಂದಿನ ಸೀಟಿನಲ್ಲಿ ಕೂರಿಸಿದ್ದಾನೆ... ಹೀಗೆ. ಅಂದರೆ ಸ್ವಾಭಾವಿಕವಾಗಿಯೇ ಪುರುಷ ಶ್ರೇಷ್ಠ. ಆದರೆ ಅವನು ಮಹಿಳೆಯನ್ನೂ ಉತ್ತಮವಾಗಿ ನಡೆಸಿಕೊಳ್ಳಬೇಕು ಎಂದು ನಿರೀಕ್ಷಿಸಲಾಗುತ್ತದೆ. ಇಲ್ಲ, ಪುರುಷನ ಕರುಣೆಯೇ ಹೆಣ್ಣಿನ ಹಿತಕ್ಕೆ ಆಧಾರವಾಗಬಾರದು.

ಫೆಮಿನಿಸಂ ಲೈಟ್ 'ಅಂಗೀಕಾರದ' ಭಾಷೆಯನ್ನು ಬಳಸುತ್ತದೆ. ಉದಾಹರಣೆಗೆ, ತೆರೆಸಾ ಮೇ ಬ್ರಿಟಿಷ್ ಪ್ರಧಾನಮಂತ್ರಿಯಾದಾಗ ಅಲ್ಲಿನ ಪತ್ರಿಕೆಗಳು ವರದಿ ಮಾಡಿದ್ದು ಹೀಗೆ; 'ಫಿಲಿಪ್ ಮೇ ಸ್ವತಃ ರಾಜಕಾರಣಿಯಾಗಿದ್ದೂ ತಾನು ಹಿಂದೆ ಸರಿದು ತನ್ನ ಪತ್ನಿ ತೆರೆಸಾ ಮೇ ಮೇಲೇರಲು ಅವಕಾಶ ನೀಡಿದ್ದಾರೆ.' ಹೀಗೆ ಅನುಮತಿಯನ್ನು ನೀಡಲು ಪತಿಯಾದವನು ಹೆಡ್‌ಮಾಸ್ಟರ್ ಅಲ್ಲ ಮತ್ತು ಪತ್ನಿ ಶಾಲಾ ಬಾಲಕಿಯೂ ಅಲ್ಲ. 'ಅನುಮತಿ' ನೀಡುವುದು, ಅನುವು ಮಾಡಿಕೊಡುವುದು ಏಕಪಕ್ಷೀಯವಾಗಿರಬಾರದು. ಒಂದು ವೇಳೆ ಹಾಗಿದ್ದರೆ ಗಂಡು–ಹೆಣ್ಣನ್ನು ಸಮಾನವಾಗಿ ಸ್ವೀಕರಿಸಬೇಕಾದ ವಿವಾಹದಂತಹ ಚೌಕಟ್ಟಿನಲ್ಲಿ ಅಂತಹ ಭಾಷೆಯನ್ನು ಬಳಸಬಾರದು.

ಮಹಿಳಾ ದೌರ್ಜನ್ಯವನ್ನು ನಂಬದ ನನ್ನ ಗೆಳೆಯನೊಬ್ಬ ಒಮ್ಮೆ ಹೇಳುತ್ತಿದ್ದ, "ಮೇಲ್ನೋಟಕ್ಕೆ ನಮ್ಮ ತಂದೆಯ ಉಸ್ತುವಾರಿಯಲ್ಲೇ ಮನೆ ನಡೆಯುತ್ತಿದ್ದರೂ ತೆರೆಯ ಹಿಂದೆ ನೋಡಿದಾಗ ನಿಜವಾಗಿಯೂ ನನ್ನ ತಾಯಿಯೇ ಎಲ್ಲವನ್ನೂ ನೋಡಿಕೊಳ್ಳುವವಳು" ಎಂದು. ಈ ಮಾತುಗಳ ಮೂಲಕ ಅವನು ಲಿಂಗತಾರತಮ್ಯವನ್ನು ನಿರಾಕರಿಸುತ್ತಿದ್ದಾನೆ ಎಂದೇ ತಿಳಿದಿದ್ದ, ಆದರೆ ಅವನ ಮಾತು ಅದನ್ನು ಪುಷ್ಟೀಕರಿಸುತ್ತಿದೆ ಎನ್ನುವ ಅರಿವು ಅವನಿಗೇ ಇರಲಿಲ್ಲ. ಹೆಣ್ಣಿಗೆ ಆ ಶಕ್ತಿ ಇದ್ದರೆ, ಅದನ್ನು ತೆರೆಯ ಹಿಂದೆ ಮರೆಮಾಡಬೇಕು ಏಕೆ?

**ಸಲಹೆ ೫ : ಓದಲು ಕಲಿಸು**

ನಿನ್ನ ಮಗಳು ಚಿಝೂಲಮ್‌ಗೆ ಓದುವುದನ್ನು, ಪುಸ್ತಕಗಳನ್ನು ಪ್ರೀತಿಸುವುದನ್ನು ಕಲಿಸು. ನೀನು ಓದುವುದನ್ನು ನೋಡುತ್ತಿದ್ದರೆ, ಅವಳಿಗೆ ಅದು ಮೌಲ್ಯಯುತವಾದುದು ಎಂದು ಅರಿವಾಗುತ್ತದೆ. ಅವಳು ಶಾಲೆಗೆ ಹೋಗದಿದ್ದರೂ, ಕೇವಲ ಪುಸ್ತಕಗಳನ್ನು ಓದಿದರೂ, ಸಾಂಪ್ರದಾಯಿಕ ಶಿಕ್ಷಣ ಪಡೆದ ಮಗುವಿಗಿಂತ ಜ್ಞಾನವಂತಳಾಗುತ್ತಾಳೆ. ಈ ಜಗತ್ತನ್ನು ಅರ್ಥಮಾಡಿಕೊಳ್ಳಲು ಪ್ರಶ್ನಿಸಲು ಪುಸ್ತಕಗಳು ಸಹಾಯ ಮಾಡುತ್ತವೆ. ಮುಂದೆ ಅವಳು ಏನಾಗಬೇಕೆಂದು ಬಯಸುವವಳೋ, ಬಾಣಸಿಗಳೊ, ವಿಜ್ಞಾನಿಯೋ, ಗಾಯಕಿಯೋ, ಎಲ್ಲಕ್ಕೂ ಓದಿನಿಂದ ಲಾಭವೇ ಆಗುತ್ತದೆ. ಇಲ್ಲಿ ನಾನು ಶಾಲಾ ಪಠ್ಯ ಪುಸ್ತಕಗಳ ಬಗ್ಗೆ ಹೇಳುತ್ತಿಲ್ಲ. ಅವುಗಳ ಹೊರತು, ಆತ್ಮಚರಿತ್ರೆ, ಕಾದಂಬರಿ, ಇತಿಹಾಸ,

**ಅಂತರ**

ಇದ್ದವರು
ಹೇಳುವುದು ಕಡಿಮೆ
ಇಲ್ಲದವರೂ ಅಷ್ಟೇ;
ಹೇಳುವುದಿಲ್ಲ ತಮ್ಮನ್ನು
ಯಾರೇ ಮಾಡಿದರೂ
ಹೆಚ್ಚು ಕಡಿಮೆ...!

ವಿ. ಸುಬ್ರಹ್ಮಣ್ಯ ಭಟ್
ಉಪನ್ಯಾಸಕರು, ತುಂಬೆ – ೫೭೪೧೪೩

ಯಾವುದಾದರೂ ಸರಿ. ಯಾವುದೂ ಸಾಧ್ಯವಾಗದಿದ್ದರೆ, ಉಡುಗೊರೆಗಳ ಆಮಿಷವೊಡ್ಡು. ಓದುವುದಕ್ಕಾಗಿ ಅವಳಿಗೆ ವೇತನ ನೀಡು. ಏಂಜೆಲಾ ಎಂಬ ನೈಜೀರಿಯಾದ 'ಒಬ್ಬಂಟಿ ತಾಯಿಯೊಬ್ಬಳು ಓದಲು ಆಸಕ್ತಿಯಿಲ್ಲದ ತನ್ನ ಮಗಳಿಗೆ, ಪುಟವೊಂದನ್ನು ಓದಲು ಐದು ಸೆಂಟ್ ನೀಡುತ್ತಿದ್ದಳಂತೆ. ಇದೊಂದು ದುಬಾರಿ ಸಾಹಸವಾಗಿದ್ದರೂ ಮೌಲ್ಯಯುತವಾದ ಹೂಡಿಕೆ.

**ಸಲಹೆ ೬ : ಭಾಷೆಯನ್ನು ಪ್ರಶ್ನಿಸುವುದನ್ನು, ಸಂದೇಹಿಸುವುದನ್ನು ಕಲಿಸು.**

ಭಾಷೆ ನಮ್ಮ ಪೂರ್ವಾಗ್ರಹ, ನಮ್ಮ ನಂಬಿಕೆ, ನಮ್ಮ ಊಹೆಗಳ ಭಂಡಾರ. ಆದರೆ ಅವಳಿಗೆ ಕಲಿಸುವುದಕ್ಕೆ ಮೊದಲು ನಿನ್ನ ಭಾಷೆಯನ್ನು ನೀನು ಪ್ರಶ್ನೆ ಮಾಡಿಕೊಳ್ಳಬೇಕು. ನನ್ನ ಗೆಳತಿಯೊಬ್ಬಳು ಅವಳ ಮಗಳನ್ನು ತಾನೆಂದಿಗೂ 'ರಾಜಕುಮಾರಿ' ಎಂದು ಕರೆಯುವುದಿಲ್ಲ ಎನ್ನುತ್ತಾಳೆ. ಏಕೆಂದರೆ ರಾಜಕುಮಾರಿ ಎಂಬ ಪದ ಹೆಣ್ಣಿನ ನಯ, ನಾಜೂಕು, ಯಾವುದೋ ರಾಜಕುಮಾರ ಬಂದು ಅವಳನ್ನು ಉಳಿಸಬೇಕು ಎಂಬ ಪೂರ್ವಾಗ್ರಹಗಳಿಂದ ತುಂಬಿದೆ.




ಹೀಗಾಗಿ ನಿನ್ನ ಮಗಳಿಗೆ ನೀನು ಏನು ಹೇಳಬಾರದು ಎಂಬುದನ್ನು ಮೊದಲಿಗೆ ನೀನು ನಿರ್ಧರಿಸು. ಏಕೆಂದರೆ ನೀನು ಏನು ಹೇಳುವೆಯೋ, ಅದು ಅವಳಿಗೆ ಮುಖ್ಯ ವಾಗುತ್ತದೆ. ಯಾವುದಕ್ಕೆ ಪ್ರಾಶಸ್ತ್ಯ ಕೊಡಬೇಕು ಎಂಬುದನ್ನು ಅವಳಿಗೆ ಕಲಿಸುತ್ತದೆ.

ಬಾಲಿಶವಾಗಿ ವರ್ತಿಸುವ ಹುಡುಗಿಯರನ್ನು ರೇಗಿಸಲು ನಮ್ಮ ಇಗ್ಬೋ ಜನರು ತಮಾಷೆ ಮಾಡುವುದನ್ನು ಕೇಳಿಲ್ಲವೇ ನೀನು– "ಗಂಡನನ್ನು ಹುಡುಕಿಕೊಳ್ಳುವ ವಯಸ್ಸಾಯ್ತು ನಿನಗೆ. ಇನ್ನು ಏನು ಮಾಡುತ್ತಿರುವೆ?"ಎಂದು. ಮೊದಲಿಗೆ ನಾನೂ ಹೀಗೆ ಹೇಳುತ್ತಿದ್ದೆ. ಆದರೆ ಈಗ ನನ್ನ ಆಯ್ಕೆ ಬೇರೆಯಾಗಿದೆ. "ಉದ್ಯೋಗ ಹುಡುಕಿಕೊಳ್ಳುವ ವಯಸ್ಸಾಗಿದೆ ನಿನಗೆ" ಎಂದೇ ಹೇಳುತ್ತೇನೆ.

ಸ್ತ್ರೀ–ದ್ವೇಷ, ಪಿತೃಪ್ರಧಾನತೆಯಂತಹ ಪದಗಳನ್ನು ಪದೇಪದೇ ಅವಳೊಂದಿಗೆ ಬಳಸಬೇಡ. ಇಂತಹ ಪಾರಿಭಾಷಿಕ ಪದಗಳು ಅಮೂರ್ತವಾಗಿರುತ್ತವೆ. 'ಸ್ತ್ರೀ ವಿರೋಧಿ', ಎಂದು ಹಣೆಪಟ್ಟಿ ಹಚ್ಚುವುದರ ಬದಲು ಅವು ಏಕೆ? ಹೇಗೆ? ಎಂಬುದನ್ನು ತಿಳಿಸು ಮತ್ತು 'ಸ್ತ್ರೀ ವಿರೋಧಿ' ಆಗದಂತೆ ಯಾವುದು ಮಾಡುತ್ತದೆ ಎಂಬುದನ್ನು ತಿಳಿಸು. ಉದಾಹರಣೆಯ ಮೂಲಕ ಸ್ತ್ರೀ ವಿರೋಧಿ ಎಂಬುದು ಬಹಿರಂಗವಾಗಿರಬಹುದು ಅಥವಾ ಸೂಕ್ಷ್ಮವಾಗಿರಬಹುದು, ಆದರೆ ಎರಡೂ ಅಸಹ್ಯಕರ ಎಂಬುದನ್ನು ಅರ್ಥ ಮಾಡಿಸು.

**ಸಲಹೆ ೭ : ಮದುವೆಯನ್ನು ಒಂದು ಸಾಧನೆ ಎಂಬಂತೆ ಎಂದಿಗೂ ಮಾತನಾಡಬೇಡ.**

ಮದುವೆಯೇ ಜೀವನದ ಸಾಧನೆ ಅಲ್ಲ ಎಂಬುದನ್ನು ಸ್ಪಷ್ಟಪಡಿಸು. ಎಂದಿಗೂ ಅದೇ ಅವಳ ಅಪೇಕ್ಷೆ ಆಗಿರಬಾರದು. ಮದುವೆ ಸುಖಕರವಾಗಿರಬಹುದು ಅಥವಾ ದುಃಖಕರ, ಆದರೆ ಅದೊಂದು ಸಾಧನೆಯಂತೂ ಅಲ್ಲ. ಹುಡುಗಿಯರನ್ನು ಮದುವೆಯ ಅಭಿಲಾಷೆಯೊಂದಿಗೇ ಬೆಳೆಸುವ ನಾವು, ಹುಡುಗರನ್ನು ಹಾಗೆ ಬೆಳೆಸುವುದಿಲ್ಲ. ಹೀಗೆ ಆರಂಭದಿಂದಲೇ ತೀವ್ರವಾದ ಅಸಮಾನತೆಯಿದೆ. ಹುಡುಗರು ಆರಂಭದಿಂದಲೇ ಮದುವೆಯ ವಿಚಾರದಲ್ಲೇ ಮುಳುಗಿರುವುದಿಲ್ಲ. ಇಂತಹ ಹುಡುಗರನ್ನು ಅಂತಹ ಹುಡುಗಿಯರು ಮದುವೆಯಾದಾಗ ಈ ಸಂಬಂಧ ಏರುಪೇರಾಗುತ್ತದೆ. ಏಕೆಂದರೆ ಈ ಸಂಬಂಧದಲ್ಲಿ ಮದುವೆ ಮುಖ್ಯವಾಗಿರುವುದು ಇಬ್ಬರಿಗಿಂತ ಒಬ್ಬರಿಗೆ ಮಾತ್ರ.

ಹೀಗಾಗಿ ಅನೇಕ ಮದುವೆಗಳಲ್ಲಿ ಹೆಣ್ಣೇ ಹೆಚ್ಚು ತ್ಯಾಗ ಮಾಡಿ ತನಗೆ ಹಾನಿ ಮಾಡಿಕೊಳ್ಳುತ್ತಾಳೆ. ಏಕೆಂದರೆ ಮದುವೆಯೆಂಬ ಅಸಮಾನವಾದ ಕೊಡು ಕೊಳ್ಳುವಿಕೆಯನ್ನು ಉಳಿಸಿಕೊಳ್ಳಲು ನಿರಂತರವಾಗಿ ಯತ್ನಿಸುತ್ತಲೇ ಇರಬೇಕು. ಇಂತಹ ಅಸಮಾನತೆಯ ಮತ್ತೊಂದು ಪರಿಣಾಮವೆಂದರೆ ಒಬ್ಬ ಪುರುಷನಿಗಾಗಿ ಇಬ್ಬರು ಮಹಿಳೆಯರು ಸಾರ್ವಜನಿಕವಾಗಿ ಕಿತ್ತಾಡುವುದು, ಆ ಪುರುಷ ತನ್ನ ಪಾಡಿಗೆ ತಾನು ಸುಮ್ಮನಿರುವಂತಹ ಕೀಳು ವಿದ್ಯಮಾನಗಳು.

ಮತ್ತೊಂದು ಮುಖ್ಯ ವಿಷಯವೆಂದರೆ ಮದುವೆಯ ನಂತರವೂ ಹೆಣ್ಣಿಗೆ ತನ್ನ ಹೆಸರನ್ನೇ ಉಳಿಸಿಕೊಳ್ಳುವ ಆಯ್ಕೆ ಇರಬೇಕು. ಆದರೆ ವಾಸ್ತವದಲ್ಲಿ ಹಾಗೆ ಮಾಡಲು ಅಗಾಧವಾದ ಸಾಮಾಜಿಕ ಒತ್ತಡವನ್ನನುಭವಿಸಬೇಕಾಗುತ್ತದೆ. ಎಷ್ಟು ಜನ ಪುರುಷರು ತಾನೇ ತಮ್ಮ ಮದುವೆಯ ನಂತರ ಹೆಸರು ಬದಲಾಯಿಸಿಕೊಳ್ಳಲು ಇಚ್ಛಿಸುತ್ತಾರೆ ಹೇಳು?

"ಶ್ರೀಮತಿ" ಎಂಬ ಬಿರುದು ಹೆಣ್ಣಿನ ಸ್ಥಾನಮಾನ ವನ್ನು ಮದುವೆಯ ನಂತರ ಬದಲಾಯಿಸುತ್ತದೆ. ಆದರೆ 'ಶ್ರೀ' ಎಂಬ ಪುರುಷನ ಸ್ಟೇಟಸ್ ಬದಲಾಗು ವುದಿಲ್ಲ. ಸಮಾಜ ಪುರುಷರ ಹೆಸರನ್ನೂ ಕೂಡ ಮದುವೆಯ ನಂತರ ಬದಲಾಯಿಸುವಂತಿದ್ದರೆ, ಅವರ ನಡವಳಿಕೆಯೂ ಬದಲಾಗುತ್ತಿತ್ತೇನೋ (ಮದುವೆ ಯಾಗಿದ್ದರೂ, ಆಗಿಲ್ಲದವರಂತೆ ನಟಿಸುವ ಪುರುಷರ ಬಗ್ಗೆ ಹೆಣ್ಣು ಮಕ್ಕಳು ದೂರುವುದೂ ತಪ್ಪುತ್ತಿತ್ತೇನೋ).

**ಸಲಹೆ ೮ : ತಾನು ಎಲ್ಲರಿಗೂ ಪ್ರಿಯಳಾಗಿರ ಬೇಕೆಂಬುದನ್ನು ನಿರಾಕರಿಸಲು ಕಲಿಸು.**

ಎಲ್ಲರನ್ನೂ ಮೆಚ್ಚಿಸುವುದು, ಅವಳ ಕೆಲಸವಲ್ಲ. ಬದಲಿಗೆ ಸ್ವಯಂ ಪೂರ್ಣ ವ್ಯಕ್ತಿಯಾಗಿರುವುದು ಮುಖ್ಯ. ಅವಳ ಮೇಲೆ ಎಂದಿಗೂ ಒತ್ತಡವನ್ನು ಹೇರಬೇಡ. ಹೆಣ್ಣು ಮಕ್ಕಳಿಗೆ ಯಾವಾಗಲೂ ನಾವು ಎಲ್ಲರಿಗೂ ಮೆಚ್ಚುಗೆಯಾಗುವಂತೆ ಇರಲು, ಇಷ್ಟವಾಗುವಂತೆ ಇರುವುದನ್ನು, ಕೃತ್ರಿಮವಾಗಿರುವುದನ್ನು ಕಲಿಸುತ್ತೇವೆ. ಆದರೆ ಗಂಡು ಮಕ್ಕಳಿಗೆ ಹೇಳಿಕೊಡುವುದಿಲ್ಲ. ಇದು ಬಹಳ ಅಪಾಯಕಾರಿಯಾದುದು. ಲೈಂಗಿಕ ದೌರ್ಜನ್ಯ ಎಸಗುವವರು ಇದನ್ನೇ ಬಂಡವಾಳ ಮಾಡಿಕೊಳ್ಳುತ್ತಾರೆ. ಅನೇಕ ಹುಡುಗಿಯರು ತಾವು ಒಳ್ಳೆಯವರಾಗಿರಬೇಕೆಂಬ ಕಾರಣಕ್ಕೆ ತಮ್ಮ ಮೇಲೆ ದೌರ್ಜನ್ಯ ನಡೆದಾಗಲೂ ಮೌನವಾಗಿಯೇ ಉಳಿದುಬಿಡುತ್ತಾರೆ. ಎಲ್ಲರಿಗೂ ಮೆಚ್ಚುಗೆ ಯಾಗುವಂತಹ ಆಕಾರಕ್ಕೆ ತಮ್ಮನ್ನು ತಾವು ಒಗ್ಗಿಸಿ / ಬಗ್ಗಿಸಿಕೊಳ್ಳುವುದರಲ್ಲೇ ವ್ಯಸ್ತರಾಗಿ, ಉಸಿರು ಬಿಡಲೂ ಸಾಧ್ಯವಿಲ್ಲದಂತಹ ಮಹಿಳೆಯರಿಂದಲೇ ಈ ಜಗತ್ತು ತುಂಬಿ ಹೋಗಿದೆ. ಹೀಗಾಗಿ ನಿನ್ನ ಮಗಳಿಗೆ ಎಲ್ಲರಿಗೂ ಇಷ್ಟವಾಗುವಂತೆ ಬದುಕುವು ದಕ್ಕಿಂತ, ಪ್ರಾಮಾಣಿಕಳಾಗಿರುವುದನ್ನು ಕಲಿಸು, ಕರುಣಾಳು ಆಗಿರುವುದನ್ನು ಕಲಿಸು ಮತ್ತು ಅವಳು ಹಾಗೆ ನಡೆದುಕೊಂಡಾಗ ಅವಳನ್ನು ಪ್ರಶಂಸಿಸು.

ಹಾಗೆಯೇ ಅವಳ ಕರುಣೆಯನ್ನು ಯಾರೂ ದುರುಪಯೋಗಪಡಿಸಿಕೊಳ್ಳಲು ಬಿಡಬಾರದೆನ್ನುವುದನ್ನು ಕಲಿಸು. ಏಕೆಂದರೆ ಬೇರೆಯವರು ಕೂಡ ಅವಳನ್ನು ಒಳ್ಳೆಯ ರೀತಿಯಲ್ಲಿ ನಡೆಸಿಕೊಳ್ಳಬೇಕು. ಅವಳ ಆಟಿಕೆಯನ್ನು, ಅವಳ ಅನುಮತಿ ಇಲ್ಲದೆ ಯಾವುದೇ ಮಗು ತೆಗೆದುಕೊಂಡರೆ, ಅದನ್ನು ಹಿಂಪಡೆದುಕೊಳ್ಳಲು ಹೇಳು. ಏಕೆಂದರೆ ಅವಳ ಅನುಮತಿ ಬಹಳ ಮುಖ್ಯ. ಅವಳಿಗೆ ಇರುಸುಮುರುಸಾಗು ವಂತಹದ್ದು ಏನಾದರೂ ಇದ್ದರೆ ಅದರ ಕುರಿತು ಮಾತನಾಡಲು ಹೇಳು. ಅವಳದನ್ನು ಹೇಳಬೇಕು, ಜೋರಾಗಿ ಕೂಗಿ ಹೇಳಬೇಕು.

**ಸಲಹೆ ೯ : ಅಸ್ಮಿತೆಯ ಪ್ರಜ್ಞೆ**

ಉದ್ದೇಶಪೂರ್ವಕವಾಗಿ ಚಿಝೂಲಮ್‌ಗೆ ಅಸ್ಮಿತೆಯ ಅರಿವು ಮೂಡಿಸು. ಅದು ಬಹಳ ಮುಖ್ಯ. ಈ ಕೆಲಸವನ್ನು ಎಚ್ಚರಿಕೆಯಿಂದ ಮಾಡಬೇಕು. ಎಲ್ಲರ ಮಧ್ಯೆ ತಾನು ಒಬ್ಬ ಹೆಮ್ಮೆಯ ಇಗ್ಬೋ ಮಹಿಳೆ ಎನಿಸುವಂತೆ ಬೆಳೆಯಲಿ. ಇದರಲ್ಲಿ ಆಯ್ಕೆಯೂ ಸರಿಯಾಗಿರಬೇಕು. ಇಗ್ಬೋ ಸಂಸ್ಕೃತಿಯ ಒಳ್ಳೆಯ ಅಂಶಗಳನ್ನು ಸ್ವೀಕರಿಸುವುದನ್ನು ಕಲಿಸುವುದರೊಂದಿಗೇ, ಋಣಾತ್ಮಕ ಅಂಶಗಳನ್ನು ನಿರಾಕರಿಸುವುದನ್ನೂ ಕಲಿಸಬೇಕು.

ಅವಳಿಗೆ ಹೀಗೆ ಹೇಳಬಹುದು – "ಇಗ್ಬೋ ಸಂಸ್ಕೃತಿ ಬಹಳ ಸುಂದರವಾದುದು. ಏಕೆಂದರೆ ಅದು ಸಹಜೀವನ, ಸಾಮರಸ್ಯ, ಹೊಂದಾಣಿಕೆ ಮತ್ತು ಶ್ರಮಕ್ಕೆ ಬೆಲೆ ಕೊಡುತ್ತದೆ. ಅದರ ಭಾಷೆ, ಗಾದೆಗಳು, ಸೊಗಸಾಗಿದ್ದು, ವಿವೇಕ ಪೂರ್ಣವಾಗಿದೆ. ಆದರೆ ಇಗ್ಬೋ ಸಂಸ್ಕೃತಿ ಒಬ್ಬ ಮಹಿಳೆ, ಅವಳು ಮಹಿಳೆ ಎನ್ನುವ ಕಾರಣಕ್ಕೇ ಕೆಲವು ಕೆಲಸಗಳನ್ನು ಮಾಡುವಂತಿಲ್ಲ ಎನ್ನುವುದನ್ನು ಕಲಿಸುತ್ತದೆ ಮತ್ತು ಇದು ತಪ್ಪು."

ಆಫ್ರಿಕನ್ನರ ಚರಿತ್ರೆಯ ಬಗ್ಗೆ ಹೆಮ್ಮೆಪಡುವುದನ್ನೂ ಹೇಳಿಕೊಡು. ನೈಜೀರಿಯಾದ ಶಾಲಾ ಪಠ್ಯಕ್ರಮಗಳಲ್ಲಿ ಇವು ಇಲ್ಲದ ಕಾರಣ, ಇವು ನಿನಗೆ

ಸವಾಲಾಗಬಹುದು. ಶಿಕ್ಷಕರು ಗಣಿತ, ವಿಜ್ಞಾನ, ಕಲೆ ಮತ್ತು ಸಂಗೀತವನ್ನು ಬಹಳ ಚೆನ್ನಾಗಿ ಹೇಳಿ ಕೊಡಬಹುದು. ಆದರೆ ಹೆಮ್ಮೆಪಡು ವುದನ್ನು ನೀನೇ ಹೇಳಿಕೊಡಬೇಕು.

**ಸಲಹೆ ೧೦ :** ಅವಳು ಮತ್ತು ಅವಳ ಉಡುಗೆ ತೊಡುಗೆಗಳ ಬಗ್ಗೆ ಎಚ್ಚರಿಕೆಯಿಂದ ನಡೆದುಕೊ.

ಕ್ರೀಡೆಗಳಲ್ಲಿ ಅವಳು ಭಾಗವಹಿಸುವುದನ್ನು ಪ್ರೋತ್ಸಾಹಿಸು. ದೈಹಿಕವಾಗಿ ಚಟುವಟಿಕೆಯಿಂದ ಇರುವುದನ್ನು ಕಲಿಸು. ಈಜು, ಓಡು, ಟೆನ್ನಿಸ್ ಆಟ, ಫುಟ್‌ಬಾಲ್, ಟೇಬಲ್ ಟೆನ್ನಿಸ್ ಯಾವ ರೀತಿಯ ಕ್ರೀಡೆಯಾದರೂ ಸರಿ, ಆಡುವುದು ಮುಖ್ಯ. ಕೇವಲ ದೇಹದ ಆರೋಗ್ಯದ ಮೇಲಾಗುವ ಲಾಭಗಳಿಗಷ್ಟೇ ಅಲ್ಲ, ಬದಲಿಗೆ ಈ ಜಗತ್ತು ಹುಡುಗಿಯರ ಮೇಲೆ ಹೇರುವ ದೇಹಾಕೃತಿಯ ಅಭದ್ರತೆಯನ್ನೆದುರಿಸಲು ಸಹಾಯವಾಗುತ್ತದೆ. ವರದಿಗಳು ಹೇಳುವಂತೆ ಹುಡುಗಿಯರು ಪ್ರಾಯಕ್ಕೆ ಬರುತ್ತಿದ್ದಂತೆ ಕ್ರೀಡೆಗಳಲ್ಲಿ ಭಾಗವಹಿಸುವುದನ್ನು ನಿಲ್ಲಿಸಿ ಬಿಡುತ್ತಾರೆ. ನಾನು ಕೂಡ ಮೊಲೆಗಳು ಮೂಡುತ್ತಿದ್ದಂತೆಯೇ ಆಡುವುದನ್ನು ನಿಲ್ಲಿಸಿಬಿಟ್ಟೆ, ಏಕೆಂದರೆ ನನ್ನ ಮೊಲೆಗಳ ಇರುವಿಕೆಯನ್ನೇ ನಾನು ಮರೆಮಾಡಬೇಕಾಗಿತ್ತು. ದಯವಿಟ್ಟು ಅವಳಿಗೆ ಹೀಗೆ ಆಗದಂತೆ ನೋಡಿಕೋ.

ಅವಳಿಗೆ ಮೇಕಪ್ ಇಷ್ಟವಾದರೆ ಮಾಡಿಕೊಳ್ಳಲಿ, ಫ್ಯಾಷನಬಲ್ ಉಡುಪು ಇಷ್ಟವಾದರೆ ಧರಿಸಿಕೊಳ್ಳಲಿ. ಇಷ್ಟವಿಲ್ಲವಾದರೆ ಬೇಡ. ಬಿಡಲಿ. ಅವಳನ್ನು 'ಸ್ತ್ರೀವಾದಿ ಯನ್ನಾಗಿ ಬೆಳೆಸುವುದು ಎಂದರೆ' ಹೆಣ್ಣುತನದ ರಚನೆ ಗಳನ್ನು ತಿರಸ್ಕರಿಸುವಂತೆ ಒತ್ತಾಯಿಸುವುದು ಎಂದು ತಿಳಿಯಬೇಡ. ಸ್ತ್ರೀವಾದ ಮತ್ತು ಹೆಣ್ಣುತನದ ರಚನೆಗಳು ಒಂದಕ್ಕೊಂದು ಹೊರತಾದುದಲ್ಲ. ಆದರೆ ಇತ್ತೀಚೆಗೆ, ಸಾಂಪ್ರದಾಯಿಕವಾಗಿ ಹೆಣ್ಣಿಗೇ ಸೇರಿದ ಮೇಕಪ್, ಫ್ಯಾಷನ್, ಮಾಡಿಕೊಳ್ಳುವುದನ್ನು ಹೆಂಗಸರು– ಅವಮಾನಕರ ಎಂದು ಭಾವಿಸುತ್ತಿರುವುದು ದುಃಖದ ವಿಚಾರ. ಹೆಣ್ಣು ಗಾಢವರ್ಣದ ಲಿಪ್‌ಸ್ಟಿಕ್ ಹಚ್ಚಿಕೊಂಡರೆ, ಚೆನ್ನಾಗಿ ಅಲಂಕಾರ ಮಾಡಿಕೊಂಡರೆ, ಅವಳನ್ನು ಕೆಲಸಕ್ಕೆ ಬಾರದ ಬೆಡಗಿ ಎಂದೇ ಭಾವಿಸುವ ಸಮಾಜ, ಗಂಡಸರು ಅಂದವಾಗಿ ಸಿದ್ಧವಾದರೆ ಅನುಮಾನಪಡುವುದಿಲ್ಲ, ಆ ಗಂಡಸರೂ ಕೂಡ ತನ್ನ ಬುದ್ಧಿವಂತಿಕೆ, ಸಾಮರ್ಥ್ಯ, ಗಾಂಭೀರ್ಯದ ಬಗ್ಗೆ ಜನ ಏನೆಂದುಕೊಂಡಾರು ಎಂದು ಚಿಂತಿಸುವುದಿಲ್ಲ.

ಚಿಝೂಲಮ್‌ಳ ಉಡುಗೆ–ತೊಡುಗೆಗಳನ್ನು ಎಂದೂ ನೈತಿಕತೆಯೊಂದಿಗೆ ತಳಕು ಹಾಕಬೇಡ. ಅಲಂಕರಿಸಿಕೊಳ್ಳುವುದನ್ನು ನೈತಿಕತೆಯ ಪ್ರಶ್ನೆ ಆಗಿಸದೆ, ಅಭಿರುಚಿ ಮತ್ತು ಆಕರ್ಷಣೆಯ ಪ್ರಶ್ನೆಯಾಗಿಸು. ಅವಳು ಧರಿಸುವುದರ ಬಗ್ಗೆ ನಿನಗೆ ತಕರಾರಿದ್ದರೆ ಎಂದೂ 'ವೇಶ್ಯೆಯ ಹಾಗೆ ಕಾಣಿಸುತ್ತೀಯಾ' ಎನ್ನಬೇಡ. ಬದಲಿಗೆ ಇದು ನಿನಗೆ ಸರಿಹೊಂದುವುದಿಲ್ಲ, ಆಕರ್ಷಕವಾಗಿ ಕಾಣುವುದಿಲ್ಲ ಎಂದೋ ಅಥವಾ ಕುರೂಪವಾಗಿದೆ ಎಂದಷ್ಟೇ ಹೇಳು. ಏಕೆಂದರೆ ಉಡುಗೆಗಳಿಗೂ ನೈತಿಕತೆಗೂ ಸಂಬಂಧವಿಲ್ಲ.

**ಸಲಹೆ ೧೧ : ಸಾಮಾಜಿಕ ನಡಾವಳಿಗಳ ಸಮರ್ಥನೆಗಾಗಿ ಜೀವಶಾಸ್ತ್ರದ ಬಳಕೆಯ ನಿರಾಕರಣೆ.**

ಸಾಮಾಜಿಕ ನಡಾವಳಿಗಳ ಸಮರ್ಥನೆಗಾಗಿ ನಮ್ಮ ಸಂಸ್ಕೃತಿ ತನಗೆ ಬೇಕಾದಾಗ ಜೀವಶಾಸ್ತ್ರವನ್ನು ಕಾರಣವಾಗಿ ಬಳಸಿಕೊಳ್ಳುವುದನ್ನು ನಿರಾಕರಿಸಲು ಕಲಿಸು.

ನನಗೆ ಗೊತ್ತಿರುವ 'ಯೋರುಬಾ' ಮಹಿಳೆ ಯೊಬ್ಬಳು 'ಇಗ್ಬೋ' ಪುರುಷನೊಬ್ಬನನ್ನು ಮದುವೆ ಯಾಗಿದ್ದಳು. ಗರ್ಭಿಣಿಯಾಗಿದ್ದಾಗ, ಮಗುವಿಗೆ ಹೆಸರು ಹುಡುಕುತ್ತಿದ್ದಳು. ಅವಳು ಆಯ್ಕೆ ಮಾಡಿದ್ದ ಎಲ್ಲಾ ಹೆಸರುಗಳೂ ಕೂಡ ಇಗ್ಬೋಗೆ ಸೇರಿದ್ದವು. ಅವಳ ಮಕ್ಕಳಿಗೆ 'ಯೋರುಬಾ' ಧರ್ಮದ ಹೆಸರನ್ನೇ ಇಡಬಹುದಲ್ಲವೇ, ಹೇಗಿದ್ದರೂ ತಂದೆಯ ಇಗ್ಬೋ ಹೆಸರು ಉಪನಾಮವಾಗಿ ಬಂದೇ ಬರುತ್ತದೆ ಎಂದು ನಾನು ಕೇಳಿದಾಗ, ಅವಳು ಹೇಳಿದಳು. ಮಗು ಮೊದಲಿಗೆ ತಂದೆಗೆ ಸೇರಿದ್ದು, ಅದು ಹಾಗೇ ಇರಬೇಕು ಎಂದು.

ಪುರುಷರಿಗೆ ಇರುವ ಸವಲತ್ತುಗಳನ್ನು ವಿವರಿಸಲು ನಾವು ಅನೇಕ ಬಾರಿ ಜೀವಶಾಸ್ತ್ರ ಬಳಸುತ್ತೇವೆ. ಹೆಚ್ಚಾಗಿ ಪುರುಷರ ದೈಹಿಕ ಮೇಲ್ಮೆಯ ಕಾರಣದಿಂದ, ದೈಹಿಕವಾಗಿ ಅವರು ಬಲಿಷ್ಠರು ನಿಜ. ಆದರೆ ನಾವು ನಿಜವಾಗಿ ಎಲ್ಲ ಸಾಮಾಜಿಕ ರೂಢಿಗಳ ಮೂಲವಾಗಿ ಜೀವಶಾಸ್ತ್ರವನ್ನೇ ಅವಲಂಬಿಸಿದರೆ ಮಕ್ಕಳು ತಮ್ಮ ತಂದೆಗಿಂತ ಹೆಚ್ಚಾಗಿ ತಾಯಿಯೊಂದಿಗೆ ಗುರುತಿಸಿಕೊಳ್ಳಬೇಕಲ್ಲವೆ?

ಏಕೆಂದರೆ ಮಗು ಹುಟ್ಟಿದಾಗ ನಿರ್ವಿವಾದವಾಗಿ ಮತ್ತು ಜೈವಿಕವಾಗಿ, ತಾಯಿಯೇ ಪೋಷಕಿ ಎಂಬುದು ಖಚಿತವಾಗಿರುತ್ತದೆ. ಆ ತಾಯಿ ಯಾರನ್ನು ತಂದೆ ಎಂದು ಹೇಳುವಳೋ ಅದನ್ನೇ ನಂಬುತ್ತೇವೆ. ಎಷ್ಟೋ ಕೆಟ್ಟ ಮದುವೆಗಳಿಂದ ಹೊರಬಂದ ಮಹಿಳೆಯರಿಗೆ ತಮ್ಮ ಮಕ್ಕಳನ್ನು ತಮ್ಮೊಂದಿಗೆ ಕರೆ ದೊಯ್ಯಲು ಅಥವಾ ನೋಡಲು ಕೂಡ ಬಿಡುವುದಿಲ್ಲ. ಏಕೆಂದರೆ ಅವರು ತಂದೆಗೆ ಸೇರಿದವರೆಂದು.



ಚಿಝೂಲಮ್‌ಗೆ ಜೀವಶಾಸ್ತ್ರ ಒಂದು ಕುತೂಹಲಕಾರಿ ಮತ್ತು ಆಕರ್ಷಕ ವಿಷಯ ಎಂಬುದನ್ನೂ ಕಲಿಸು. ಆದರೆ ಯಾವುದೇ ಸಾಮಾಜಿಕ ರೂಢಿ, ಸಂಪ್ರದಾಯಗಳಿಗೆ ಅದನ್ನು ಸಮರ್ಥನೆಯಾಗಿ ಒಪ್ಪಿಕೊಳ್ಳಬಾರದು. ಏಕೆಂದರೆ ರೂಢಿ, ಸಂಪ್ರದಾಯಗಳು ಮಾನವ ನಿರ್ಮಿತ ಮತ್ತು ಯಾವುದೇ ಸಂಪ್ರದಾಯವನ್ನು ಬದಲಾಯಿಸುವುದು ಅಸಾಧ್ಯವಲ್ಲ.

**ಸಲಹೆ ೧೨ : ಲೈಂಗಿಕತೆಯ ಬಗ್ಗೆ ಅವಳೊಂದಿಗೆ ಮಾತನಾಡು, ಮುಂಚಿತವಾಗಿಯೇ ಆರಂಭಿಸು.**

ಬಹುಮಟ್ಟಿಗೆ ಇರುಸುಮುರುಸು ಉಂಟು ಮಾಡುವ ವಿಷಯವಿದು ಆದರೆ, ಅಗತ್ಯವಾದುದು.

ಲೈಂಗಿಕ ಕ್ರಿಯೆ ಎಂಬುದು ಕೇವಲ ಸಂತಾನೋತ್ಪತ್ತಿಗಾಗಿ ಇರುವ ನಿಯಂತ್ರಿತ ಕ್ರಿಯೆ ಎಂದು ಸೋಗು ಹಾಕಬೇಡ ಅಥವಾ ಮದುವೆಯ ಒಳಗೆ ಮಾತ್ರ ನಡೆಯುವ ಒಂದು ಕ್ರಿಯೆ ಎಂದೂ. ಲೈಂಗಿಕ ಕ್ರಿಯೆ ಒಂದು ಮನೋಹರವಾದ ವಿಚಾರ ಎಂದು ತಿಳಿಸು. ಅದರೊಂದಿಗೆ ಅನಿವಾರ್ಯವಾಗಿ ಎದುರಿಸಬೇಕಾದ ದೈಹಿಕ ಪರಿಣಾಮಗಳೊಂದಿಗೆ (ಒಬ್ಬ ಹೆಣ್ಣಾಗಿ), ಭಾವನಾತ್ಮಕ ಪರಿಣಾಮಗಳನ್ನು ಹೊಂದಿರುತ್ತವೆ ಎಂದು ತಿಳಿಸು. ಅವಳ ದೇಹ ಅವಳಿಗೆ ಮಾತ್ರ ಸೇರಿದ್ದು, ಅವಳಿಗೆ ಇಷ್ಟವಿಲ್ಲದ ಯಾವುದಕ್ಕೂ ಒಪ್ಪಿಗೆ ನೀಡುವ ಅಗತ್ಯವಿಲ್ಲ, ಯಾವುದೇ ಒತ್ತಡ ಇದ್ದಾಗಲೂ ಕೂಡ. ಬೇಡ ಎಂದು ಹೇಳುವುದೇ ಸರಿ ಎಂಬ ಸಂದರ್ಭಗಳಲ್ಲಿ ಬೇಡ ಎನ್ನುವುದು ಹೆಮ್ಮೆಯ ಸಂಗತಿ ಎಂಬುದನ್ನೂ ಕಲಿಸು.

ಹದಿನೆಂಟು ವಯಸ್ಸು ದಾಟುವವರೆಗೂ ಕಾಯುವುದು ಉತ್ತಮವೆಂದು ಹೇಳು. ನೀನು ಸಿದ್ಧಳಾಗಿರು. ಅವಳು ಅಲ್ಲಿಯವರೆಗೆ ಕಾಯದಿರ ಬಹುದು. ಕಾಯದಿದ್ದರೆ, ನಿನಗೆ ತಿಳಿಸಲು ಸಾಧ್ಯವಾಗು ವಂತಿರಬೇಕು. ಹೆಣ್ಣು ಮಕ್ಕಳು ಎಲ್ಲವನ್ನೂ ಹೇಳಿ ಕೊಳ್ಳುವಂತೆ ಬೆಳೆಸಬೇಕೆಂದರೆ ಸಾಲದು, ಎಲ್ಲವನ್ನೂ ಹೇಳಿಕೊಳ್ಳಲು ಅಗತ್ಯವಾದ ಭಾಷೆಯನ್ನೂ ಅವಳಿಗೆ ನೀಡಬೇಕು. ಅಂದರೆ ಅಕ್ಷರಶಃ ಅವಳು ಅದನ್ನು ಏನೆಂದು ಕರೆಯಬೇಕು? ಯಾವ ಪದವನ್ನೂ ಬಳಸಬೇಕು?

ತಜ್ಞರ ಪ್ರಕಾರ ಮಕ್ಕಳು ತಮ್ಮ ಅಂಗಾಂಗಳನ್ನು ಜೈವಿಕ ಹೆಸರುಗಳಿಂದ ಕರೆಯುವುದೇ ಉತ್ತಮ. ಆದರೆ ಆ ಹೆಸರುಗಳೊಂದಿಗೆ ಯಾವುದೇ ಅವಮಾನ, ನಾಚಿಕೆ ಗಂಟುಹಾಕಿಕೊಂಡಿರಬಾರದು.

ಲೈಂಗಿಕತೆಯನ್ನು ಎಂದಿಗೂ ನಾಚಿಕೆಯೊಂದಿಗೆ ತಳಕು ಹಾಕಬೇಡ. ಕನ್ಯತ್ವದ ಕಡೆ ಗಮನ ಕೇಂದ್ರೀಕರಿಸುವುದು ಬೇಡ, ಏಕೆಂದರೆ ಅದು ಕೊನೆಯಾಗುವುದು ಅವಮಾನದಲ್ಲೇ. ನಮ್ಮೆಲ್ಲರಿಗೂ ಋತುಚಕ್ರದ ಬಗ್ಗೆ ಇಳಿದನಿಯಲ್ಲಿ ಮಾತನಾಡು ವುದನ್ನೇ ಕಲಿಸಲಾಗಿದೆ. ಆದರೆ ಅದು ಅವಮಾನಕರ ಸಂಗತಿಯಲ್ಲ. ಅದು ಸಹಜ ಮತ್ತು ಸ್ವಾಭಾವಿಕ, ಅದಿಲ್ಲದಿದ್ದರೆ ಮನುಕುಲ ಅಸ್ತಿತ್ವದಲ್ಲಿರಲು ಸಾಧ್ಯವೇ ಇರಲಿಲ್ಲ. ಯಾರೋ ಒಬ್ಬ ವ್ಯಕ್ತಿ ಋತುಚಕ್ರವನ್ನು ಅಸಹ್ಯ ಎಂದು ಕರೆದಿದ್ದ. ನಾನು ಅವನಿಗೆ ಹೇಳಿದೆ,

ಅದು ಪವಿತ್ರವಾದ ಅಸಹ್ಯ ಏಕೆಂದರೆ ಅದಿಲ್ಲದಿದ್ದರೆ ನೀನು ಇರುತ್ತಿರಲಿಲ್ಲ ಎಂದೆ.

**ಸಲಹೆ ೧೩ :** ಪ್ರೇಮ ಪ್ರಸಂಗವಂತೂ ನಡೆದೇ ನಡೆಯುತ್ತದೆ ಸಿದ್ಧವಾಗಿರು.

ಪ್ರೀತಿಸುವುದು ಎಂದರೆ ಕೇವಲ ಕೊಡುವುದಲ್ಲ, ಪಡೆದುಕೊಳ್ಳುವುದೂ ಕೂಡ ಎಂಬುದನ್ನು ಕಲಿಸು. ಏಕೆಂದರೆ ಅವರ ಬದುಕಿನ ಬಗ್ಗೆ ಸೂಕ್ಷ್ಮ ಸುಳಿವುಗಳನ್ನು ನೀಡುವುದು ಬಹಳ ಮುಖ್ಯ. ಪ್ರೀತಿಸುವುದು ಎಂದರೆ ತಮ್ಮನ್ನು ತಾವೇ ಸಮರ್ಪಿಸಿಕೊಳ್ಳುವುದು ಎಂದೇ ಹೆಣ್ಣು ಮಕ್ಕಳಿಗೆ ಹೇಳಿ ಕೊಡುತ್ತೇವೆ. ಆದರೆ ಹುಡುಗರಿಗೆ ಇದನ್ನು ಕಲಿಸುವುದಿಲ್ಲ.

ಬದುಕಿನಲ್ಲಿ ಪ್ರೀತಿ ಬಹಳ ಮುಖ್ಯವಾದ ಸಂಗತಿಯಾಗಿದೆ. ಅದನ್ನು ಹೇಗೆ ನಿರ್ವಚಿಸಿದರೂ, ನನ್ನ ಪ್ರಕಾರ ಪ್ರೀತಿ ಎಂದರೆ ಮತ್ತೊಬ್ಬ ವ್ಯಕ್ತಿಯಿಂದ ಆದರಿಸಲ್ಪಡುವುದು ಮತ್ತು ಆ ವ್ಯಕ್ತಿಗೆ ಗೌರವವನ್ನು ನೀಡುವುದೇ ಆಗಿದೆ. ಆದರೆ ಜಗತ್ತಿನ ಅರ್ಧದಷ್ಟು ಜನರನ್ನು ಮಾತ್ರ ಹೀಗೆ ಬೆಳೆಸುತ್ತೇವೆ. ಇತ್ತೀಚೆಗೆ ಯುವಮಹಿಳೆಯರೇ ತುಂಬಿದ್ದ ಕೋಣೆಯೊಂದರಲ್ಲಿ ಇದ್ದೆ. ಆಶ್ಚರ್ಯವೆಂದರೆ, ಅವರ ಸಂಭಾಷಣೆಯೆಲ್ಲಾ ಪುರುಷರ ಕುರಿತೇ ಇತ್ತು. ಈ ಮನುಷ್ಯ ಸುಳ್ಳು ಹೇಳಿದ – ಅವನು ಮೋಸ ಮಾಡಿದ, ಇವನು ಮದುವೆಯಾಗುವುದಾಗಿ ಮಾತು ಕೊಟ್ಟು ಕಣ್ಮರೆಯಾದ. ಈ ಗಂಡ ಹೀಗೆ ಮಾಡಿದ, ಹಾಗೆ ಮಾಡಿದ ಹೀಗೆ ಗಂಡಸರು ಎಸಗಿದ ಭಯಂಕರ ವಿಚಾರಗಳ ಬಗ್ಗೆಯೇ ಮಾತನಾಡುತ್ತಿದ್ದರು.

ಇದು ತಿರುಗುಮುರುಗಾದರೆ, ಆ ಕೋಣೆಯ ತುಂಬ ಪುರುಷರೇ ಇದ್ದಿದ್ದರೆ ಮಹಿಳೆಯರ ಬಗ್ಗೆಯೇ ಮಾತನಾಡುತ್ತಿರಲಿಲ್ಲ. ಮಾತನಾಡಿದರೆ ಹುಡುಗಾಟಿಕೆ, ಚೆಲ್ಲಾಟದ ಮಾತುಗಳಾಗಿರುತ್ತವೇ ಹೊರತು, ಬದುಕಿನ ಗೋಳಾಟದ ಕುರಿತು ಆಗಿರುತ್ತಿರಲಿಲ್ಲ.

**ಸಲಹೆ ೧೪ : ದಬ್ಬಾಳಿಕೆಯ ಕುರಿತು ಹೇಳಿ ಕೊಡುವಾಗ ಎಚ್ಚರಿಕೆಯಿಂದಿರು, ಶೋಷಿತರನ್ನು ಸಂತರನ್ನಾಗಿಸುವುದು ಬೇಡ.**

ಸಂತತನ ಗೌರವ ಗಳಿಸಲು ಪೂರ್ವಾಪೇಕ್ಷಿತ ಅಲ್ಲ. ನಿರ್ದಯಿ ಮತ್ತು ಅಪ್ರಾಮಾಣಿಕ ವ್ಯಕ್ತಿಗಳೂ ಮನುಷ್ಯರೇ ಹಾಗೂ ಗೌರವಕ್ಕೆ ಅರ್ಹರು ಕೂಡ.

ಗ್ರಾಮೀಣ ನೈಜೀರಿಯಾದ ಮಹಿಳೆಯರಿಗೆ ಆಸ್ತಿ ಹಕ್ಕು ಒಂದು ಸ್ತ್ರೀವಾದೀ ಸಮಸ್ಯೆಯೇ ಆಗಿದೆ ಮತ್ತು ತಮ್ಮ ಆಸ್ತಿ ಹಕ್ಕನ್ನು ಪಡೆದುಕೊಳ್ಳಲು ಒಳ್ಳೆಯವರಾಗಿ, ದೇವತೆಗಳಂತೆ ಇರಬೇಕಾಗಿಲ್ಲ.

ಲಿಂಗತ್ವ ಚರ್ಚೆ ನಡೆಯುವಾಗ ಮಹಿಳೆಯರು ಪುರುಷರಿಗಿಂತ ನೈತಿಕವಾಗಿ ಉತ್ತಮರಾಗಿರಬೇಕೆಂದು ಭಾವಿಸಲಾಗುತ್ತದೆ. ಅವರು ಹಾಗಿರಬೇಕಾಗಿಲ್ಲ, ಮಹಿಳೆಯರು ಪುರುಷರಂತೆಯೇ ಮನುಷ್ಯರು. ಸ್ತ್ರೀಯರ ಸದ್ಗುಣಗಳಷ್ಟೇ ಸ್ತ್ರೀ ದುಷ್ಟತನವೂ ಸಹಜವಾದುದು. ಮಹಿಳೆಯರಲ್ಲೂ ಸ್ತ್ರೀ ದ್ವೇಷಿಗಳಿದ್ದಾರೆ. ಇದನ್ನು ಒಪ್ಪಿಕೊಳ್ಳುವುದರಿಂದ ತಪ್ಪಿಸಿಕೊಳ್ಳುವುದು ಎಂದರೆ, ಅನಗತ್ಯವಾಗಿ ಸ್ತ್ರೀವಾದಿ ವಿರೋಧಿಗಳಿಗೆ ಸ್ತ್ರೀವಾದವನ್ನು ತಳ್ಳಿಹಾಕಲು ಅವಕಾಶ ಸೃಷ್ಟಿಸಿಕೊಟ್ಟಂತೆ.

ಹೆಣ್ಣಾಗಿ ಹುಟ್ಟಿ 'ನಾನು ಸ್ತ್ರೀವಾದಿ ಅಲ್ಲ' ಎಂದು ಹೇಳುವ ಮಹಿಳೆಯರ ಉದಾಹರಣೆಯನ್ನು ಉತ್ಸುಕದಿಂದ ಕೊಡುವ ಸ್ತ್ರೀವಾದಿ ವಿರೋಧಿಗಳು, ಇಂತಹ ಹೇಳಿಕೆಯನ್ನು ಕೊಡುವುದು ಸ್ತ್ರೀವಾದದ ಮೌಲ್ಯವನ್ನು ಕಡಿಮೆ ಮಾಡಿಬಿಡುತ್ತದೆ ಎಂದು ಕೊಂಡಿರುವಂತೆ ಯಾವುದೋ ಮಹಿಳೆ ತಾನು ಸ್ತ್ರೀವಾದಿ ಅಲ್ಲ ಎಂದು ಸಾಧಿಸಿದರೆ, ಅದರಿಂದ ಸ್ತ್ರೀವಾದದ ಪ್ರಸ್ತುತತೆ ಕಡಿಮೆಯಾಗುವುದಿಲ್ಲ. ಏನಿದ್ದರೂ ಅದು ಪಿತೃಪ್ರಧಾನತೆಯ ಯಶಸ್ಸನ್ನು ಮತ್ತು ಸಮಸ್ಯೆಯ ಹರವನ್ನು ಎದ್ದುಕಾಣುವಂತೆ ಮಾಡುತ್ತದಷ್ಟೇ. ಅದರೊಂದಿಗೇ ಎಲ್ಲ ಮಹಿಳೆಯರೂ ಸ್ತ್ರೀವಾದಿಗಳಲ್ಲ ಮತ್ತು ಎಲ್ಲ ಪುರುಷರೂ ಸ್ತ್ರೀ ದ್ವೇಷಿಗಳಲ್ಲ ಎಂಬುದನ್ನು ತೋರಿಸಿಕೊಡುತ್ತದೆ.

**ಸಲಹೆ ೧೫: ಭಿನ್ನತೆಯ ಬಗ್ಗೆ ಅವಳಿಗೆ ತಿಳಿಸು.**

ಭಿನ್ನತೆ ಎಂಬುದು ಸಾಮಾನ್ಯವಾದುದು ಮತ್ತು ಸಹಜವಾದುದು. ಇದರ ಹಿಂದಿನ ಕಾರಣ ಒಳ್ಳೆಯವರಾಗಿರಬೇಕು ಎಂದಲ್ಲ ಬದಲಿಗೆ ಮಾನವೀಯವಾಗಿರಬೇಕು ಮತ್ತು ವಾಸ್ತವಿಕವಾಗಿರಬೇಕೆಂದು. ಭಿನ್ನತೆಯನ್ನು ಕಲಿಸುವುದರೊಂದಿಗೆ ಈ ವೈವಿಧ್ಯಮಯವಾದ ಜಗತ್ತಿನಲ್ಲಿ ಉಳಿದುಕೊಳ್ಳಲು ಅವಳನ್ನು ಸಜ್ಜುಗೊಳಿಸುವೆ.

ಪ್ರತಿಯೊಬ್ಬರೂ ತಮ್ಮದೇ ಆದ ಹಾದಿಯಲ್ಲಿ ನಡೆಯುತ್ತಿರುತ್ತಾರೆ. ಎಲ್ಲಿಯವರೆಗೆ ಅದು ಬೇರೆಯವರಿಗೆ ಹಾನಿಯುಂಟುಮಾಡುವುದಿಲ್ಲವೋ ಅಲ್ಲಿಯವರೆಗೆ ಅವು ಮಾನ್ಯವಾಗಿರುತ್ತವೆ ಮತ್ತು ಅವುಗಳನ್ನು ಅವಳು ಗೌರವಿಸಬೇಕು. ನಮಗೆ ಬದುಕಿನ ಬಗ್ಗೆ ಎಲ್ಲವೂ ತಿಳಿದಿರುವುದಿಲ್ಲ. ತಿಳಿಯಲು ಸಾಧ್ಯವೂ ಇಲ್ಲ ಎಂಬುದನ್ನು ಕಲಿಸು, ಧರ್ಮ ಮತ್ತು ವಿಜ್ಞಾನದಲ್ಲಿ ನಮಗೆ ತಿಳಿಯದಂತಹ ಅನೇಕ ವಿಚಾರಗಳಿಗೆ ಸ್ಥಾನವಿದೆ.

ತನ್ನ ಗುಣಮಟ್ಟ ಮತ್ತು ಅನುಭವವನ್ನು ಸಾರ್ವತ್ರಿಕಗೊಳಿಸದಿರುವುದನ್ನು ಕಲಿಸು, ಅವಳ ಗುಣಮಟ್ಟ ಅವಳಿಗೆ ಮಾತ್ರ ಬೇರೆಯವರಿಗಲ್ಲ. ಇದು ವಿನಯವಂತಿಕೆಯ ಅತ್ಯಗತ್ಯ ರೂಪವಾಗಿದೆ ಮತ್ತು ಭಿನ್ನವಾಗಿರುವುದು ಸಹಜ ಎಂಬ ಅರಿವನ್ನು ಪಡೆಯುವುದಾಗಿದೆ.

ಇದರರ್ಥ ಯಾರ ಬಗೆಗೂ ಯಾವುದೇ ನಿಲುವನ್ನು ಹೊಂದಿರಬಾರದು ಎಂದಲ್ಲ. ಇತ್ತೀಚೆಗೆ ಈ ಮನೋವೃತ್ತಿ ಹೆಚ್ಚಾಗಿದೆ. ಇದು ಆತಂಕಕಾರಿ ಕೂಡ ಹೌದು. ಒಂದೇ ನಿಲುವಿಗೆ ಬದ್ಧರಾಗಿರಬಾರದು ಎಂದರೆ, ಯಾವುದೇ ಅಭಿಪ್ರಾಯ ಹೊಂದಿರಬಾರದು ಎಂದು ಸುಲಭವಾಗಿ ಅರ್ಥೈಸಲಾಗುತ್ತದೆ ಅಥವಾ ನನ್ನ ಅಭಿಪ್ರಾಯವನ್ನು ನನ್ನೊಳಗೇ ಇಟ್ಟುಕೊಳ್ಳುತ್ತೇನೆ ಎಂದಾಗುತ್ತದೆ. ಅದರ ಬದಲಿಗೆ ನಾನು ಆಶಿಸುವುದೇನೆಂದರೆ ಚಿಝಾಲಮ್ ತನ್ನದೇ ಅಭಿಪ್ರಾಯಗಳನ್ನು ಹೊಂದಿರಬೇಕು ಮತ್ತು ಆ ಅಭಿಪ್ರಾಯಗಳನ್ನು ಮಾಹಿತಿಪೂರ್ಣ, ಮಾನವೀಯ ಮತ್ತು ವಿಶಾಲ ಮನೋಭಾವದಿಂದ ಪಡೆದಿರಬೇಕು.

ಅವಳು ಸಂತೋಷ ಮತ್ತು ಆರೋಗ್ಯದಿಂದಿರಲಿ. ಅವಳ ಬದುಕು ಅವಳಿಗೆ ಬೇಕಾದಂತಿರಲಿ.

ಇದನ್ನೆಲ್ಲ ಓದಿದ ಮೇಲೆ ನಿನಗೆ ತಲೆ ನೋವು ಬಂತೇ? ಕ್ಷಮಿಸು, ಇನ್ನೊಮ್ಮೆ ನಿನ್ನ ಮಗಳನ್ನು ಸ್ತ್ರೀವಾದಿಯಾಗಿ ಬೆಳೆಸುವುದು ಹೇಗೆ ಎಂದು ಕೇಳಬೇಡ.

ಪ್ರೀತಿಯಿಂದ **– ಚಿಮಮಾಂಡ**




**ಚಿಮಮಾಂಡ ಎನ್‌ಗೋಝಿ ಅಡಿಚಿ**

ನೈಜೀರಿಯಾ ಮೂಲದವರಾದ ಚಿಮಮಾಂಡ ಪ್ರಸ್ತುತ ಅಮೆರಿಕದ ಪ್ರಮುಖ ಲೇಖಕರಲ್ಲಿ ಒಬ್ಬರು. ಅವರ ಕೃತಿಗಳು ಜಗತ್ತಿನ ೩೦ ಭಾಷೆಗಳಿಗೆ ಅನುವಾದಗೊಂಡಿದೆ. ದಿ ನ್ಯೂಯಾರ್ಕರ್, ಗ್ರಾಂಟಾ, ದಿ ಒ ಹೆನ್ರಿ ಪ್ರೈಜ್ ಸ್ಟೋರೀಸ್, ಫೈನಾನ್ಷಿಯಲ್ ಟೈಮ್ಸ್, ಝೋಟ್ರೋಪ್, ಸೇರಿದಂತೆ ಹಲವು ಅಂತಾರಾಷ್ಟ್ರೀಯ ಪತ್ರಿಕೆಗಳಲ್ಲಿ ಇವರ ಕತೆಗಳು ಪ್ರಕಟಗೊಂಡಿವೆ. ಅಡಿಚಿ ಡಿಸಿಷನ್ಸ್ ಕವನ ಸಂಕಲನ ಪ್ರಕಟವಾದ ಮೊದಲ ಕೃತಿ. ನಂತರ ಫಾರ್ ಲವ್ ಆಫ್ ಬಯಾಫ್ರಾ ನಾಟಕ ಪ್ರಕಟವಾಯಿತು. ಆದರೆ ಲೇಖಕಿಯಾಗಿ ಜಗತ್ತಿನ ಗಮನಸೆಳೆದದ್ದು – ಪರ್ಪಲ್ ಹೈಬಿಸ್ಕಸ್, ಹಾಫ್ ಆಫ್ ಎ ಯೆಲ್ಲೋ ಸನ್, ದಿ ತಿಂಗ್ ಅರೌಂಡ್ ಯುವರ್ ನೆಕ್, ಅಮೆರಿಕಾನ ಈ ಕೃತಿಗಳಿಂದ. 'ವಿ ಶುಡ್ ಆಲ್ ಬಿ ಫೆಮಿನಿಸ್ಟ್ಸ್' ಮತ್ತು 'ಡಿಯರ್ ಐಜಾವಿಲೆ ಆರ್ ಎ ಫೆಮಿನಿಸ್ಟ್ ಮ್ಯಾನಿಫೆಸ್ಟೊ ಇನ್ ಫಿಫ್ಟಿನ್ ಸಜೆಷನ್ಸ್' ಪ್ರಸಿದ್ಧ ಪ್ರಬಂಧಗಳು. ಕಾಮನ್ ವೆಲ್ತ್ ರೈಟರ್ಸ್, ಹರ್ಸ್ಟನ್ ರೈಟ್ ಲೆಗಸಿ, ಪೆನ್, ಡೇಟನ್ ಲಿಟರರಿ ಪೀಸ್ ಪ್ರಶಸ್ತಿಗಳು ಲಭಿಸಿವೆ. ಜಾನ್ ಹಾಪ್‌ಕಿನ್ಸ್ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪಡೆದಿದ್ದಾರೆ. ೨೦೦೯ರಲ್ಲಿ ಇವರ ಟೆಡ್‌ಟಾಕ್‌ನಲ್ಲಿ ನೀಡಿದ 'ದಿ ಡೇಂಜರ್ ಆಫ್ ಎ ಸಿಂಗಲ್ ಸ್ಟೋರಿ' ಅತ್ಯಂತ ಪ್ರಸಿದ್ಧ ಭಾಷಣವಾಗಿದ್ದು, ಕನ್ನಡವೂ ಸೇರಿದಂತೆ ಜಗತ್ತಿನ ಹಲವು ಭಾಷೆಗಳಿಗೆ ಅನುವಾದಗೊಂಡಿದೆ.

**ಡಾ॥ ಕಾವ್ಯಶ್ರೀ ಹೆಚ್.**
'ಹೊಸಕಾವ್ಯ', ನಂ. ೨೬೬, ೫೩ನೇ ಕ್ರಾಸ್
೬ನೇ ಮೇನ್, ೪ನೇ ಹಂತ, ರಾಜಾಜಿನಗರ
ಬೆಂಗಳೂರು – ೫೬೦ ೦೧೦



# ರಂಗದ ಮೇಲೆ ಮೂಡಿದ ಅವತಾರಗಳು

ಮೂಢನಂಬಿಕೆ ವಿರುದ್ಧದ ಧ್ವನಿ, ಹೆಣ್ಣಿನ ಶೋಷಣೆ.... ಹೀಗೆ ಹತ್ತು ಹಲವಾರು ಅವತಾರಗಳು. ಈ ಅವತಾರಗಳು ಕಂಡುಬಂದದ್ದು ಕೊಪ್ಪಳದ ವಿಸ್ತಾರ ರಂಗ ಶಾಲೆಯಲ್ಲಿ. ಇವು ರಂಗದ ಮೇಲೆ ಮೂಡಿದ ಅವತಾರಗಳು. ರಂಗ ನಿರ್ದೇಶಕ ಲಕ್ಷ್ಮಣ ಪಿರಗಾರ ಅವರ ಗರಡಿಯಲ್ಲಿ ಪಳಗಿದ ವಿಸ್ತಾರ ರಂಗಶಾಲೆಯ ರಂಗಾರ್ಥಿಗಳು ವಾಸ್ತವವಾದ ಅಭ್ಯಾಸ ಮಾಲಿಕೆ ಯಲ್ಲಿ ಪ್ರದರ್ಶಿಸಿದ ನಾಟಕ. ಪ್ರಯೋಗಾತ್ಮಕ ನಾಟಕ ಅವತಾರಗಳು.

ದಲಿತ ಕವಿ ಸಿದ್ಧಲಿಂಗಯ್ಯ, ಸಾವಿತ್ರಿ ಮುಜುಂದಾರ, ಶ್ರೀನಿವಾಸ ವೈದ್ಯ, ಶರಣಕುಮಾರ ಲಿಂಬಾಳೆ ಇವರೆಲ್ಲರ ಕಥೆಗಳನ್ನಾಧರಿಸಿದ ಈ ರಂಗರೂಪ ನಿಜಕ್ಕೂ ಪ್ರೇಕ್ಷಕನಲ್ಲಿ ಹಲವಾರು ವಿಷಯಗಳನ್ನು ಚರ್ಚಿಸುವಂತೆ ಮಾಡಿತು. ಬೇರೆ ಬೇರೆ ಕಾಲಘಟ್ಟದ ಕನ್ನಡದ ಕಥೆಗಳನ್ನು ಪಿರಗಾರ ಅವರು ಆಯ್ದುಕೊಂಡಿದ್ದಾರೆ. ಕಥೆಗೆ ಧಕ್ಕೆ ಬಾರದಂತೆ ಒಂದಕ್ಕೊಂದನ್ನು ಪೋಣಿಸಿದ್ದಾರೆ. ಪ್ರೇಕ್ಷಕನೆದುರಲ್ಲಿ ಇಟ್ಟ ನಿರ್ದೇಶಕ ನಿಜಕ್ಕೂ ಇಲ್ಲಿ ಜಾಣ್ಮೆ ಮೆರೆದಿದ್ದಾನೆ. ನಡುನಡುವೆ ನಟರಿಂದ ಹೊರಡುವ ಡೈಲಾಗ್‌ಗಳು, ನಾಟಕಕ್ಕೆ ಮತ್ತಷ್ಟು ಮುದನೀಡುವ ಆಯ್ಕೆಮಾಡಿಕೊಂಡ ಹಾಡುಗಳು, ನೋಡುಗರಿಗೆ ಹಾಡುಗಳು ಕಚಗುಳಿ ಇಟ್ಟರೆ, ಸಂಭಾಷಣೆಗಳು ಚರ್ಚಿಸುವಂತೆ ಮಾಡುತ್ತವೆ. ಹೆಸರೇ ಹೇಳುವಂತೆ ಇದು ವಾಸ್ತವಾಭ್ಯಾಸ. ನಿಜ, ಯಾಕೆಂದರೆ ನಮ್ಮ ನಿಮ್ಮಗಳ ಮಧ್ಯೆ ನಡೆಯುವ ಹಲವಾರು ಘಟನೆಗಳಿಗೆ ಈ ಅವತಾರಗಳು ಸಾಕ್ಷಿಯಾಗುತ್ತವೆ. ಜಾಣ್ಮೆಯಿಂದಲೇ ಜಡೆ ಜೋಗತಿಯೊಬ್ಬಳನ್ನು ಮೂಢನಂಬಿಕೆಯಿಂದ ಹೊರತರಿಸಿದ ನಂತರ ಆ ಗ್ರಾಮದಲ್ಲಿ ಅಲ್ಲಿಯ ವರೆಗೂ ಪೂಜ್ಯಭಾವನೆಯಿಂದ ನೋಡಿದ ಜಡೆ ಜೋಗತಿಯನ್ನು ಅನಿಷ್ಟವೆನ್ನುತ್ತಾರೆ. ನಮ್ಮೊಳಗೆ ಇನ್ನೂ ಮಲಗಿರುವ ಮೂಢನಂಬಿಕೆಯನ್ನು ತೋರಿಸುತ್ತದೆ. ಅಲ್ಲಿಯವರೆಗೂ ಜಡೆ ಜೋಗತಿ ಕೇಳಿದಾಗಲೆಲ್ಲ ದುಡ್ಡು ನೀಡುವ ಗ್ರಾಮದ ಜನತೆ, ಜಡೆ ತೆಗೆದ ಆ ಯುವತಿಗೆ ಬಿಡಿ ಕಾಸೂ ನೀಡದೆ ಅನಿಷ್ಟ ಅಂತ ಹಿಂಸಿಸುತ್ತಾರೆ.

ಮನೆಯ ಪಕ್ಕದಲ್ಲಿರುವುದು ಕಸದ ತೊಟ್ಟಿ. ಆ ತೊಟ್ಟಿಗೆ ಸುತ್ತಮುತ್ತಲಿನವರೆಲ್ಲಾ ಬಂದು ಕಸ ಹಾಕುತ್ತಾರೆ. ಕಸ ತೆಗೆಯುವವರು ಮಾತ್ರ ಯಾರೂ ಇಲ್ಲ. ಕಸದ ತೊಟ್ಟಿಗೆ ನಾಯಿಗಳು ತಿನ್ನಲು ಬರುತ್ತವೆ. ಅವುಗಳನ್ನೋಡಿಸಿ ಚಿಂದಿ ಆಯುವವರು ಬರುತ್ತಾರೆ. ಯಾವಾಗ ಸ್ವಾಮಿ ಕಸ ತೆಗೆದಿದ್ದು ಅಂದದ್ದಕ್ಕೆ, "ಅದು ನೀವು ನಾಲ್ಕು ತಿಂಗಳ ಹಿಂದೆ ಈ ಮನೆಗೆ ಬಾಡಿಗೆ ಬರೋ ಮುಂಚೆ ಅದೇ ಹೊಸ ಸರ್ಕಾರ ರಚನೆ ಆಯ್ತಲ್ಲ ಅಂದು ಸ್ವಚ್ಛಮಾಡಿದ್ದು" ಅಂತ ನಟರಿಂದ ನಿರ್ದೇಶಕರು ಹೇಳಿಸುತ್ತಾರೆ. ಮುಂದುವರೆದು, ಮನೆ ಮುಂದೆ ಕಸ, ಪೇಪರ್ ಓದೋಣ ಅಂದ್ರೂ ಅಲ್ಲೂ ಕಸ, ನೀರವಮೋದಿ, ವಿಜಯಮಲ್ಯ ಎಲ್ಲ ದೇಶ ಬಿಟ್ಟುಹೋದವರದೆ ಕಥೆ ಅನ್ನುವ ಸಂಭಾಷಣೆ ಪ್ರೇಕ್ಷಕರಿಂದ ಚಪ್ಪಾಳೆ ಗಿಟ್ಟಿಸುತ್ತದೆ.

ಮಹಿಳೆಯ ಜೀವನದಲ್ಲಿ ಆಟ ಆಡುವ ಊರ ಗೌಡ, ಬಡಕುಟುಂಬದ ಮಹಿಳೆಯ ಜೀವನವನ್ನು ತನ್ನ ಸ್ವಾರ್ಥಕ್ಕಾಗಿ ಮೂರಾಬಟ್ಟೆ ಮಾಡುತ್ತಾನೆ. ಮುಂದೆ ತಾನೇ ಆಶ್ರಯ ನೀಡಿ ಸಲಹುತ್ತಾನೆ, ಗೌಡ ಮತ್ತು ಮಾಸಿಗೆ ಮಗುವಾದೊಡನೆ ಅವಳನ್ನು ಅನುಮಾನಿಸಿ ಮನೆಯಿಂದ ಹೊರದಬ್ಬುತ್ತಾನೆ. ಪುರುಷರ ದಬ್ಬಾಳಿಕೆಗೆ ಸಿಗುವ ಮಾಸಿಯು ಮಕ್ಕಳಿಗೆ ತಂದೆಯ ಹೆಸರನ್ನು ಹೇಳಲು ಪರದಾಡುವ ದೃಶ್ಯ ಪ್ರೇಕ್ಷಕರನ್ನು ಕಾಡದೇ ಇರಲಾರದು.

ಕನ್ನಡ ಸಾಹಿತ್ಯದ ಬೇರೆ ಬೇರೆ ಕಾಲಘಟ್ಟದ ಕಥೆಗಳನ್ನು ರಂಗದ ಮೇಲೆ ಪ್ರೇಕ್ಷಕರು ಮೆಚ್ಚುವಂತೆ ಪ್ರದರ್ಶಿಸಿದ್ದಾರೆ. ಸಂಗೀತ, ರಂಗಸಜ್ಜಿಕೆ, ಸಂಭಾಷಣೆ, ಚೆನ್ನಾಗಿದ್ದು, ಕಲಾವಿದರು ಮೆಚ್ಚುವಂತೆ ಅಭಿನಯಿಸಿದ್ದಾರೆ. ಬೆಳಕಿನ ವಿನ್ಯಾಸ ಇನ್ನಷ್ಟು ಉತ್ತಮವಾದರೆ ನಿಜಕ್ಕೂ ಅವತಾರಗಳು ನಾಟಕ ಉತ್ತಮ ಪ್ರಯೋಗ. ಕನ್ನಡದ ಕತೆಗಳಾಗಿದ್ದರಿಂದ ನಮ್ಮ ಭಾಷೆಯ ಸೊಗಡು ಎದ್ದುಕಾಣುತ್ತದೆ. ಈ ನೆಲದ ಜಾಡು ಇರುವುದರಿಂದಲೋ ಏನೋ ನೋಡುಗರಿಗೆ ನಾಟಕ ಆಪ್ತವಾಗುತ್ತದೆ. ನಾಟಕ ಪ್ರೇಕ್ಷಕರೆಲ್ಲರಿಗೂ, ಇನ್ನೂ ನಾವೆಷ್ಟು ಮೂಢ ರಾಗಿದ್ದೇವೆ. ತಾಯಿಯನ್ನು ದೇವರೆನ್ನುವ ನಾವು ನೀವೆಲ್ಲಾ ಅದೇ ತಾಯಿ ಸ್ವರೂಪದ ಮಹಿಳೆ ದೇವಾಲಯ ಪ್ರವೇಶಿಸಿದರೆ ಶುಚಿ ಮಾಡುತ್ತಾರಲ್ಲ ಎನ್ನುವ ಪ್ರಶ್ನೆ ನೋಡುಗನನ್ನು ಕಾಡದೇ ಇರಲಾರದು.

**ನಾಗರಾಜ ನಾಯಕ ಡಿ. ಡೊಳ್ಳಿನ**
"ತಾಯಿ ನೆರಳು" ಪ್ರಗತಿನಗರ, ಕಿನ್ನಾಳ ರಸ್ತೆ
ಕೊಪ್ಪಳ – ೫೮೩ ೨೩೧

# ನಾವು ಕೂಡಾ ನಿಮ್ಮಂತೆ ಮನುಷ್ಯರು – ಚಾಂದಿನಿ




ಸಂದರ್ಶನ
**ಡಾ॥ ಸುಧಾ ಬಿ. ಎಸ್.**

ಭಾರತದಲ್ಲಿ ಮಾರ್ಚ್ ೧೫ನ್ನು ಟ್ರಾನ್ಸ್ ಜೆಂಡರ್‌ಗಳ ದಿನವೆಂದು ಸಂಭ್ರಮದಿಂದ ಆಚರಿಸಲಾಗುತ್ತದೆ. ಸುಪ್ರೀಂ ಕೋರ್ಟ್ ತೃತೀಯ ಲಿಂಗೀಯರ ಪರವಾದ ಐತಿಹಾಸಿಕ ತೀರ್ಪು ನೀಡಿದ ದಿನ ಅದು. ಇದರ ನೆನಪಿಗೆ ಕನ್ನಡದ ಮೊದಲ ಟ್ರಾನ್ಸ್ ಜೆಂಡರ್ ಕವಿಯತ್ರಿ ಚಾಂದಿನಿಯವರ ಸಂದರ್ಶನವನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ. ಕುವೆಂಪು ವಿಶ್ವವಿದ್ಯಾಲಯದ ಬಿ. ಎ. ಕನ್ನಡ ಪಠ್ಯ ಪುಸ್ತಕಕ್ಕೆ ಚಾಂದಿನಿಯವರ 'ಮನದ ಕಣ್ಣು' ಕವನ ಸಂಕಲನದ ಕವನವೊಂದು ಆಯ್ಕೆಯಾದದ್ದು ಚರಿತ್ರೆಯನ್ನು ಸೃಷ್ಟಿಸಿದೆ.

**ಪ್ರಶ್ನೆ :** ನಮಸ್ಕಾರ ಚಾಂದಿನಿಯವರೇ, ಟ್ರಾನ್ಸ್ ಜೆಂಡರ್ ಅಥವಾ ತೃತೀಯ ಲಿಂಗಿಗಳ ಬಗ್ಗೆ ನಮ್ಮ ಸಮಾಜದಲ್ಲಿ ಬಹಳ ತಪ್ಪು ಕಲ್ಪನೆಗಳಿವೆ. ಅದನ್ನು ಕುರಿತು ನಿಮ್ಮೊಂದಿಗೆ ಸ್ವಲ್ಪ ಮಾತನಾಡುವಾ, ಅಂತ.

**ಚಾಂದಿನಿ :** ನಮಸ್ಕಾರ. ಸಂತೋಷವಾಗಿ ಈ ಬಗ್ಗೆ ಮಾತನಾಡೋಕೆ ಇಷ್ಟಪಡುತ್ತೀನಿ.

**ಪ್ರಶ್ನೆ :** ಟ್ರಾನ್ಸ್ ಜಂಡರ್‌ಗಳ ಬಗ್ಗೆ ಇತ್ತೀಚೆಗೆ ಕೇಳಿಬರುತ್ತಿರುವ ತಕರಾರು 'ಲಿಂಗ ಪರಿವರ್ತನೆ ಒಂದು ಮಾನಸಿಕ ಸಮಸ್ಯೆ, ಇಂತಹ ವ್ಯಕ್ತಿಗಳನ್ನು ಸೂಕ್ತ ಸಮಯದಲ್ಲಿ ಆಪ್ತ ಸಮಾಲೋಚನೆಗೆ ಒಳಪಡಿಸುವ ಅವಶ್ಯಕತೆ ಇದೆ' ಎನ್ನುವುದು. ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ಚಾಂದಿನಿ :** ಇಲ್ಲ, ಅದು ತಪ್ಪು ಅಭಿಪ್ರಾಯ. ಸೂಕ್ತ ಸಮಯದಲ್ಲಿ ಅವರಿಗೆ ಟ್ರೀಟ್‌ಮೆಂಟ್ ಕೊಟ್ರೆ, ಒಂದು ಮಾನಸಿಕ ತಜ್ಞರ ಹತ್ತಿರ ಕರೆದುಕೊಂಡೋದ್ರೆ ಸರಿಹೋಗುತ್ತೆ ಅನ್ನೋದು ತಪ್ಪು ಕಲ್ಪನೆ. ವರ್ಲ್ಡ್ ಹೆಲ್ತ್ ಆರ್ಗನೈಜೇಷನ್‌ನವರೇ ಡಿಕ್ಲೇರ್ ಮಾಡಿದ್ದಾರೆ ಇದೊಂದು ಕಾಯಿಲೆ ಅಲ್ಲ ಅಂತ. ಅದೊಂದು ರೀತಿಯ ಭಾವನೆ ಅಷ್ಟೇ.

**ಪ್ರಶ್ನೆ :** ಲಿಂಗ ಪರಿವರ್ತನೆಗೆ ನಿಮ್ಮನ್ನು ಒತ್ತಾಯಿಸುವ ದೈಹಿಕ ಮತ್ತು ಮಾನಸಿಕ ಒತ್ತಡಗಳನ್ನು ವಿವರಿಸಲು ಸಾಧ್ಯವೇ?

**ಚಾಂದಿನಿ :** ಮೊದಲಿಗೆ ನಾನು ಲಿಂಗ ಪರಿವರ್ತನೆ ಮಾಡ್ಕೊಬೇಕು ಅಂತ ಅಂದುಕೊಂಡಿರಲಿಲ್ಲ. ನಾನು ಈ ಕಮ್ಯುನಿಟಿಗೆ ಬಂದ ಮೇಲೆ ಆ ತರದ ಅನುಭವ. ಅದಕ್ಕಿಂತ ಮುಂಚೆ ನಾನು ನನ್ನ ವಿರುದ್ಧ ಸೆಕ್ಸ್ ಅಂತ ನೋಡಿದ್ದು ನನ್ನಮ್ಮನ್ನ, ಜೊತೆಗೆ ಓದ್ತಾಯಿದ್ದ ಹುಡುಗಿಯರನ್ನ, ಅಕ್ಕಂದಿರನ್ನ ಇವರನ್ನಷ್ಟೇ. ಅದೂ ನನ್ನ

ಡ್ರೆಸ್ಸೂ ಅವರ್ ಡ್ರೆಸ್ಸೂ ಬೇರೆ ಇರ್‍ತಿತ್ತು. ಅವರು ಹೆಣ್ಣು, ಜೊತೆಗೆ ದೇಹದ ಅಂಗ ಕೂಡ ಬೇರೆ ರೀತಿ ಇರ್‍ತಿತ್ತು. ಆ ಸಮಯದಲ್ಲಿ ನನಗೆ ಆಕರ್ಷಣೆ ಹುಟ್ಟಿದ್ದು ಅವರ ಡ್ರೆಸ್ ಬಗ್ಗೆ. ನನ್ಗೆ ಆ ತರ ಹಾಕೊಬೇಕು, ಇರ್‍ಬೇಕು ಅಂತ ಮನಸ್ಸಿನಲ್ಲಿ ಬಂತು. ಅಷ್ಟೇ. ಅವಾಗೆಲ್ಲಾ ಲಿಂಗ ಪರಿವರ್ತನೆ ಅನ್ನೋದು ಗೊತ್ತೇ ಇರಲಿಲ್ಲ. ಯಾವಾಗ ಕಮ್ಯುನಿಟಿ ಲಿಂಕ್ ಸಿಕ್ತೋ ಆಗ ಲಿಂಗ ಪರಿವರ್ತನೆ ಮಾಡ್ಕೋಬೋದು ಅಂತ ಅನಿಸ್ತು.

**ಪ್ರಶ್ನೆ :** ಕರ್ನಾಟಕದಲ್ಲಿ ನಿಮ್ಮಂಥವರ ಕಾರ್ಯ ಯೋಜನೆಯ ಬಗ್ಗೆ ತಿಳಿಸಿಕೊಡುವಿರಾ?

**ಚಾಂದಿನಿ :** ಭಾರತದಲ್ಲಿ ಮಾರ್ಚ್ ೧೫ನೇ ತಾರೀಕು ಟ್ರಾನ್ಸ್ ಜೆಂಡರ್‌ಗಳ ದಿನಾಚರಣೆ ಅಂತ ಆಚರಿಸುತ್ತೇವೆ. ಏಕೆಂದರೆ ಅವತ್ತೇನೇ ನಮ್ಮ ಪರವಾಗಿ ಸುಪ್ರೀಂ ಕೋರ್ಟ್ ತೀರ್ಪು ಹೊರಬಿದ್ದಿದ್ದು. ಅದು ನಮ್ಮ ಪರವಾಗಿತ್ತು. ಒಂದು ಐತಿಹಾಸಿಕವಾದ ತೀರ್ಪಿನಿಂದಾಗಿ ನಮ್ಮ ಕೆಲವು ಹಕ್ಕುಗಳ ಬಗ್ಗೆ ಸಮಾಜದ ಕಣ್ತೆರೆಸಲು ಸಾಧ್ಯವಾಯಿತು.

**ಪ್ರಶ್ನೆ :** ಟ್ರಾನ್ಸ್ ಜೆಂಡರ್‌ಗಳ ರಾಜಕೀಯ ಮತ್ತು ಸಾಮಾಜಿಕ ಹಕ್ಕುಗಳಿಗಾಗಿ ಹೋರಾಡುತ್ತಿರುವವರಲ್ಲಿ ನೀವು ಕೂಡ ಒಬ್ಬರು. ಈ ಪಯಣದ ಸಾಧ್ಯಾಸಾಧ್ಯತೆಗಳನ್ನು, ಸವಾಲುಗಳನ್ನು ವಿವರಿಸಲು ಸಾಧ್ಯವೇ?

**ಚಾಂದಿನಿ :** ಹೌದು, ಇದು ನಮ್ಮ ಮುಖ್ಯ ಕರ್ತವ್ಯ. ಸುಪ್ರೀಂ ಕೋರ್ಟ್ ತೀರ್ಪು ನಮ್ಮ ಪರವಾಗಿ ಆಗಿದ್ದೇ ನಮ್ಮ ಸಮುದಾಯದ ರಾಜಕೀಯ ಹೋರಾಟದ ಫಲ ಅಂತ ಅನ್ಸುತ್ತೆ. ಇನ್ನು ಸಾಮಾಜಿಕ ಹೋರಾಟ ಅಂತ ಅಂದ್ರೆ ನಮ್ಮ ಕುಟುಂಬಗಳು ನಮ್ಮನ್ನು ಒಪ್ಪಿಕೊಳ್ಳುವುದರ ಬಗೆಗೆ ಹೋರಾಟ ಮಾಡ್ತಾ ಇದ್ದೀವಿ. ಇದು ಸಿಕ್ಕಿದ್ರೆ ಎಲ್ಲಾನೂ ಸಿಕ್ದಂಗೆ. ಇದು ಮೊದಲನೇ ಹಂತ. ಸ್ವಲ್ಪಮಟ್ಟಿನ ಯಶಸ್ಸು ಸಿಕ್ಕಿದೆ. ಸಿಕ್ತಾ ಇದೆ. ನಮ್ಮ ಜನರೇಶನ್‌ನಲ್ಲಿ ಬೇರೆ ರೀತಿ ಇತ್ತು. ಈಗಿನ ಜನರೇಶನ್‌ನಲ್ಲಿ ಸ್ವಲ್ಪ ಬದಲಾವಣೆ ಆಗಿದೆ. ತುಂಬ ಜನಗಳಿಗೆ ಮಾಹಿತಿ ಇದೆ ಈವಾಗ. ಟ್ರಾನ್ಸ್ ಜೆಂಡರ್ ಅಂದ್ರೆ ಹೀಗಿರ್‍ತಾರೆ ಅಂತ ಸಾಮಾನ್ಯ ಎಲ್ರಿಗೂ ಗೊತ್ತಿದೆ.

**ಪ್ರಶ್ನೆ :** ಸರ್ಕಾರದೋರು ನಿಮಗಾಗಿ ನೀಡಿರುವ ಸವಲತ್ತುಗಳಾವುವು? ಇವು ಸರಿಯಾದ ರೀತಿಯಲ್ಲಿ ಬಳಕೆಯಾಗುತ್ತಿವೆಯೇ? ಇಲ್ಲವಾದಲ್ಲಿ ಆಗಬೇಕಾದ ಸುಧಾರಣೆಗಳೇನು?

**ಚಾಂದಿನಿ :** ಸರ್ಕಾರದೋರು ನಮ್ಗೆ ಕೆಲವೊಂದು ಯೋಜನೆಗಳ ಮೂಲಕ ಸವಲತ್ತುಗಳನ್ನು ನೀಡಿದ್ದಾರೆ. 'ಮೈತ್ರಿ' ಅನ್ನೋ ಯೋಜನೆಯಡಿ ೫೦೦ ರೂ. ಪೆನ್‌ಶನ್ ಸಿಗ್ತಿದೆ. ಅದೊಂದು ತತ್‌ಕ್ಷಣದ ಪರಿಹಾರ.

ಅದರ ಜೊತೆಗೆ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಕಡೆಯಿಂದ ಇಪ್ಪತ್ತು ಸಾವಿರ ರೂಪಾಯಿ ಸಹಾಯ ಧನ ಅಂತ ಕೆಲವರಿಗೆ ಸಿಗ್ತಾ ಇದೆ. ಆದರೆ ಈ ಇಪ್ಪತ್ತು ಸಾವಿರ ರೂಪಾಯಿ, ತಿಂಗಳಿಗೆ ಐನೂರು ರೂಪಾಯಿಗಳಿಂದ ಏನು ಮಾಡೋಕು ಸಾಧ್ಯ ಇಲ್ಲ. ನಾವು ಅದನ್ನು ವಿರೋಧಿಸುತ್ತೇವೆ. ಏಕೆಂದರೆ ನಾನು ಬೆಂಗಳೂರಿನಲ್ಲಿ ವಾಸಮಾಡೋದ್ರಿಂದ ಆ ದುಡ್ಡಿಂದ ಏನೂ ಆಗಲ್ಲ. ಈಗ ಬೆಂಗಳೂರಲ್ಲಿ ಮನೇದೆ ದೊಡ್ಡ ಪ್ರಾಬ್ಲಂ ನಮ್ಗೆ. ಮನೆ ಕೊಡಿ ಅಂತ ಕೇಳ್ತಿದೀವಿ.

**ಪ್ರಶ್ನೆ :** ಸಮಾನತೆಯ ಹೋರಾಟದ ಜೊತೆಗೆ ಸಾಹಿತ್ಯ ರಚನೆಯಲ್ಲಿ ಕೂಡ ನಿಮ್ಮನ್ನು ತೊಡಗಿಸಿಕೊಂಡಿದ್ದೀರಿ. ಇದಕ್ಕೆ ಪ್ರೇರಕವಾದ ಅಂಶಗಳು ಯಾವುವು? ಅಂದರೆ ನಿಮಗೆ ಕವನಗಳನ್ನು ಬರೀಬೇಕು ಅಂತ ಯಾಕೆ ಅನ್ನಿಸಿತು? ಯಾವಾಗಿಂದ ಬರೆಯೋಕೆ ಶುರು ಮಾಡಿದಿರಿ.

**ಚಾಂದಿನಿ :** ನಾನು ಹೊಸದಾಗಿ ಈವಾಗ ಬರಿಯೋಕೆ ಶುರು ಮಾಡಿರೋ ಕವಯತ್ರಿ ಅಲ್ಲ. ನಾನು ಹುಡುಗನಾಗಿದ್ದಾಗಿಂದ ಬರೀತಿದ್ದೆ. ನನ್ನ ಬಾಯ್‌ಫ್ರೆಂಡ್ ಬಗ್ಗೆ ಪ್ರೇಮ ಕವಿತೆಗಳನ್ನ ಬರೀತಿದ್ದೆ. ನಾನು ಆವಾಗ ಪುಸ್ತಕಗಳಲ್ಲಿ ಓದ್ತಾ ಇದ್ದ ಕವಿತೆಗಳು ಹೆಣ್ಣನ್ನ ವರ್ಣನೆ ಮಾಡಿ ಮತ್ತೆ ಪ್ರಕೃತಿಯನ್ನು ವರ್ಣನೆ ಮಾಡಿರೋ ಅಂಥ ಕವಿತೆಗಳು.

ಮತ್ತೆ ಮನೆಯಲ್ಲಿ ಅಪ್ಪ ಅಮ್ಮ ಯಾಕೆ ನಮ್ಮನ್ನ ಒಪ್ಪಿಕೊಳ್ಳೋಲ್ಲ, ಮತ್ತೆ ನಾನು ಏನೆಲ್ಲಾ ಆಗ್ಬೇಕು ಅಂತ ಕನಸು ಕಾಣ್ತೀನಿ, ನನ್ನ ಈ ಭಾವನೆಗಳನ್ನ ನನ್ನ ಕವನದ ಮೂಲಕ ತರ್‍ತಾ ಇದ್ದೀನಿ.

**ಪ್ರಶ್ನೆ :** 'ಮನದ ಕಣ್ಣು' ಕವನ ಸಂಕಲನದ ಬಗ್ಗೆ ಪ್ರತಿಕ್ರಿಯೆ ಹೇಗೆ ಬಂತು? ನಿಮ್ಮ ಸಮುದಾಯದ ಕಡೆಯವರಿಂದ ಮತ್ತು ಸಮಾಜದಲ್ಲಿ?

**ಚಾಂದಿನಿ :** ತುಂಬ ತುಂಬ ಒಳ್ಳೆ ಪ್ರತಿಕ್ರಿಯೆ ಬಂತು. ನನಗೆ ನನ್ನ ಕವನದ ಒಂದೊಂದು ಪದಗಳೂ ತುಂಬ ಸರಳ ಅಂತ ಅನ್ಸುತ್ತೆ. ಇವತ್ತು ಅವುಗಳನ್ನು ಮತ್ತೆ ಓದಿದಾಗ ಇನ್ನು ಸ್ವಲ್ಪ ಬೆಟರ್ ಆಗಿ ಅವುಗಳನ್ನ ಮಾಡ್ಬೋದಿತ್ತೇನೋ! ರಾಘವೇಂದ್ರ ರಾವ್ ಅವರು ಪ್ಯಾರಿಸ್‌ನಿಂದ ಅದಕ್ಕೆ ಮುನ್ನುಡಿ ಬರೆದು ಕಳಿಸಿದ್ರು. ಅವರ ಸಾಲುಗಳಿಂದ ನನ್ನ ಕವಿತೆಗಳ ವ್ಯಾಲ್ಯೂ ಏನು ಅಂತ ಗೊತ್ತಾಯ್ತು. ತುಂಬ ಸಿಂಪಲ್ ಕನ್ನಡದಲ್ಲೇ ಬರೆದಿದ್ದೇನೆ. ಆ ಮೇಲೆ ಜನಗಳಿಗೆ ಈ ಕವನಗಳು ಒಂದು ರೀತಿಯಲ್ಲಿ ಹೊಸದಾಗಿ ಕಾಣಿಸ್ತಾ ಇರೋದರಿಂದ, ನಮ್ಮ ಸಮುದಾಯದ ಭಾವನೆಗಳನ್ನು ತಿಳಿಸ್ತಾ ಇರೋದ್ರಿಂದ ತುಂಬ ಜನ ಓದಿದವರು ನನ್ನನ್ನ ಪ್ರೋತ್ಸಾಹಿಸಿದ್ರು.

**ಪ್ರಶ್ನೆ :** ನಿಮ್ಮ ಕಮ್ಯುನಿಟಿ ಇದನ್ನ ಓದಿದಾರಾ? ಏನಂತಾರೆ?

**ಚಾಂದಿನಿ :** ತುಂಬ ಜನ ಓದಿದಾರೆ, ತುಂಬ ಖುಷಿ ಕೂಡಾ ಪಟ್ಟಿದ್ದಾರೆ. ಏಕೆಂದ್ರೆ ನಮ್ಗೆ ಇದನ್ನೆಲ್ಲಾ ಹೇಳಕಾಗಿಲ್ಲ. ನಾವು ಹೇಳಕ್ಕಾಗ್ದೆ ಇರೋದನ್ನ ನೀನು ಹೇಳಿದ್ದೀಯ, ತುಂಬ ಚೆನ್ನಾಗಿದೆ ಬರೀ ಅಂದ್ರು,

**ಪ್ರಶ್ನೆ :** ನೀವು ಚಿತ್ರರಂಗದಲ್ಲಿ ಅಸಿಸ್ಟೆಂಟ್ ಡೈರೆಕ್ಟರ್ ಆಗಿ ಕೆಲಸ ನಿರ್ವಹಿಸಿದ್ದೀರಿ ಈ ಅನುಭವಗಳನ್ನು ಕುರಿತು ವಿವರಿಸಿ.

**ಚಾಂದಿನಿ :** 'ಪುಂಸ್ತ್ರೀ' ಚಿತ್ರದ ಡೈರೆಕ್ಟರ್ ಬಂದು ನನ್ನನ್ನ ಅವರ ಫಿಲಂನಲ್ಲಿ ಆಕ್ಟಿಂಗ್ ಮಾಡೋಕೆ ಕೇಳಿದ್ರು. ಹಾಗೆ ನಾನು ಬರಹಗಾರ್ತಿ ಅಂತನೂ ಕೂಡ ಅವರ್ಗೆ ಹೇಳಿದ್ದೆ. ಈ ಚಿತ್ರ ಕಮ್ಯುನಿಟಿ ವಿಷಯ ಆಗಿರೋದ್ರಿಂದ ನೀವ್ಯಾಕೆ ನನ್ಜೊತೆ ಅಸಿಸ್ಟೆಂಟ್ ಆಗಿ ಕೆಲಸ ಮಾಡ್ಬಾರ್‍ದು ಅಂತಾನೂ ಕೇಳಿದ್ರು. ಹಾಗಾಗಿ ಕಮ್ಯುನಿಟಿಗೆ ಸಂಬಂಧಿಸಿದಂತೆ ಕೆಲಸ ಮಾಡೋಕೆ ಇಲ್ಲೊಂದು ಅವಕಾಶ ಸಿಗುತ್ತೆ ಅಂತ ಮತ್ತೆ ಅಲ್ಲಿ ನಮ್ಮಗಳ ಬಗೆಗೆ ಸರಿಯಾದ ರೀತಿಯಲ್ಲಿ ರೆಪ್ರೆಸೆಂಟ್ ಮಾಡ್ಬೋದು ಅಂತ ನಾನು ಆ ಕೆಲ್ಸಕ್ಕೆ ಒಪ್ಕೊಂಡೆ.

**ಪ್ರಶ್ನೆ :** ನಿಮ್ಮ ಸಮುದಾಯದವರ ನಡುವಿನ ಬಾಂಧವ್ಯ ಹಾಗೂ ನಿಮ್ಮ ಏಳಿಗೆಯಲ್ಲಿ ಈ ಚಿತ್ರದ ಪಾತ್ರವೇನು ತಿಳಿಸಿ?

**ಚಾಂದಿನಿ :** 'ಪುಂಸ್ತ್ರೀ' ತುಂಬ ಚೆನ್ನಾಗಿದೆ. ನಮ್ಮವರ ಸಂಬಂಧಗಳನ್ನು ಕುರಿತದ್ದು... ಏಕೆಂದ್ರೆ ಈ ಸಂಬಂಧ ಒಂದು ಅಮ್ಮ ಮಗಳ ಸಂಬಂಧದ ತರಾ ಇದೆ; ಮೊಮ್ಮಗಳು ಅಜ್ಜಿ ಸಂಬಂಧ ಇಲ್ಲಿದೆ. ಒಂದು ಬಿಡಿಸಿಕೊಳ್ಳೋಕಾಗದೆ ಇರೋ ಸಂಬಂಧ ನಮ್ದು.


*ಸಂದರ್ಶಕಿಯೊಂದಿಗೆ ಚಾಂದಿನಿ*

ಏಕೆಂದರೆ ನಾನು ಅಪ್ಪ ಅಮ್ಮನ ಬಿಟ್ಟು ಬಂದಾಗ ನನ್ನ ಆದರಿಸಿದ್ದು ನನ್ನ ಸಮುದಾಯ. ಇಷ್ಟು ವರ್ಷ ನಾನು ಊಟ ಮಾಡಿದ್ದು ನನ್ನ ಸಮುದಾಯದಿಂದ. ಈಗ ನಾನು ಏನೇ ಸಾಧನೆ ಮಾಡಿದ್ರು ಸಾಧ್ಯವಾಗಿದ್ದು ನನ್ನ ಸಮುದಾಯದ ಕಾರಣದಿಂದ. ಬೇರೆ ಬೇರೆ ವೇದಿಕೆಗಳಲ್ಲಿ ನನ್ನ ಸಮುದಾಯದ ಬಗ್ಗೆ ಮಾತಾಡಲಿಕ್ಕೆ ಒಂದು ಕಡೆ ನನಗೆ ಪ್ರೋತ್ಸಾಹ ಸಿಕ್ಕಿದೆ. ಅದೇ ಸಮಯದಲ್ಲಿ ನನ್ನನ್ನು ತುಳಿಯುವ ಪ್ರಯತ್ನವೂ ನಡೆದಿದೆ. ಅಲ್ಲದೆ ನಮ್ಮಲ್ಲಿರುವ ಸಂಸ್ಕೃತಿಯ ಆಧಾರದ ಮೇಲೂ ನನಗೆ ಪ್ರಧಾನ ವಾಹಿನಿಗೆ ಹೋಗಿ ಕೆಲಸ ಮಾಡಬಾರ್ದು ಅಂತಾನೂ ಹೇಳುತ್ತಾರೆ. ಆದರೂ ನಾನು ಮೊದಲಿನಿಂದಲೂ ನನ್ನ ಕಮ್ಯುನಿಟಿಯನ್ನೂ ಪ್ರತಿನಿಧಿಸುತ್ತೇನೆ, ಹಾಗೆ ನಾನು ಒಬ್ಬ ಕಾರ್ಯಕರ್ತಳಾಗಿ ಮತ್ತು ನಾನು ಒಂದು ಹೆಂಗಸು ಅನ್ನೋದನ್ನ ಸಮಾಜದಲ್ಲಿ ಗುರುತಿಸಿಕೊಂಡಿದೀನಿ.

**ಪ್ರಶ್ನೆ :** ಟ್ರಾನ್ಸ್ ಜೆಂಡರ್‌ಗಳು ಮುಖ್ಯವಾಹಿನಿಗೆ ಬರುವಲ್ಲಿ ಸರ್ಕಾರ, ಸಮಾಜ ಹಾಗೂ ನಿಮ್ಮ ಸಂಘಟನೆಗಳು ಹೇಗೆ ಕಾರ್ಯಕ್ರಮಗಳನ್ನು ರೂಪಿಸಿಕೊಂಡರೆ ಅನುಕೂಲ ಎಂದೆನಿಸುತ್ತದೆ? ಅದರ ರೂಪುರೇಷೆಗಳನ್ನು ಕುರಿತಂತೆ ಏನಾದರೂ ಆಲೋಚನೆಗಳಿವೆಯೇ?

**ಚಾಂದಿನಿ :** ನಾವು ಮುಖ್ಯವಾಹಿನಿಗೆ ಬರುವಲ್ಲಿ ಸರ್ಕಾರದಿಂದ ಅಷ್ಟೊಂದು ಅವಕಾಶಗಳು ಇಲ್ಲ. ಸಂಘ ಸಂಸ್ಥೆಗಳಿಂದ ಕೆಲವೊಂದು ಅವಕಾಶಗಳು ಸಿಕ್ಕಿವೆ. ನಾನು ಕವಿ ಅನ್ನೋದನ್ನು ಗುರುತಿಸುತ್ತಿದ್ದಾರೆ. ಕೆಲವೊಂದು ಸಂಸ್ಥೆಗಳು ಅದನ್ನ ಗುರುತಿಸ್ತಾ ಇದಾರೆ. ಉದಾ: ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಬೇರೆ ಬೇರೆ ಕವಿಗೋಷ್ಠಿಗಳಿಗೆ ನನ್ನನ್ನ ಕರೀತಾರೆ. ಕೆಲವೊಂದು ಸಂಘಸಂಸ್ಥೆಗಳು ಮತ್ತು ಎನ್.ಜಿ.ಓಗಳಿಂದಲೂ ನನಗೆ ಆಹ್ವಾನ ಸಿಕ್ಕಿವೆ.

**ಪ್ರಶ್ನೆ :** ಟ್ರಾನ್ಸ್ ಜೆಂಡರ್‌ಗಳು ನಡೆಸುವ ಭಿಕ್ಷಾಟನೆ, ಲೈಂಗಿಕ ವೃತ್ತಿಗಳನ್ನು ನೀವು ಸಮರ್ಥಿಸುವಿರಾ? ಅವರಿಗಿರುವ ಇತರ ಪರ್ಯಾಯ ಮಾರ್ಗಗಳಾವುವು?

**ಚಾಂದಿನಿ :** ನಮ್ಮಲ್ಲಿ ಭಿಕ್ಷಾಟನೆಗೂ ಒಂದು ಇತಿಹಾಸ ಇದೆ. ಸೆಕ್ಸ್‌ವರ್ಕ್‌ಗೂ ಕೂಡ ಒಂದು ಇತಿಹಾಸ ಇದೆ. ಇದು ನಾವು ಇವತ್ತು ನಿನ್ನೆಯಿಂದ ಮಾಡ್ತಿರೋದು ಅಲ್ಲ. ನಮ್ಮವರ ಸೃಷ್ಟಿ ಯಾವಾಗ ಆಯ್ತೋ ಅವತ್ತಿಂದಾನೂ ಇದೆ. ಭಿಕ್ಷಾಟನೆ ಎನ್ನುವುದು 'ಆಶೀರ್ವಾದ' ಮಾಡೋದು ಅನ್ನುವುದರಿಂದ ಶುರುವಾಯಿತು. ಯಾರಿಗಾದರೂ ಹೋಗಿ ನಾವು ನಮ್ಮ ಆಶೀರ್ವಾದ ಕೊಡ್ತಿವಿ, ಅವ್ರು ಏನೋ ಕೊಡ್ತಾರೆ ತಗೊಂಡು ಬರ್ತಿವಿ. ಅದು ಕಾಲಾನಂತರದಲ್ಲಿ ಬದಲಾವಣೆ ಆಗಿ ಈ ಮಟ್ಟಕ್ಕೆ ಬಂದು ನಿಂತಿದೆ. ಕಾನೂನು ರೀತಿಯಲ್ಲೂ ಭಿಕ್ಷಾಟನೆ ಎನ್ನುವುದು ಅಪರಾಧ, ಭಿಕ್ಷೆ ಬೇಡಬಾರದು ಅಂತ ಇದೆ, ಆದ್ರೆ ನಮ್ಗೆ ಬೇರೆ ಆಯ್ಕೆಯೇ ಇಲ್ಲ, ನಮ್ಮೋರು ನಮ್ಗೆ ಕಲಿಸಿಕೊಟ್ಟಿರೋದು ಅದನ್ನೇ. ನಾನು ಬಂದು ಕಮ್ಯುನಿಟಿಗೆ ಸೇರಿದಾಗ ನಮ್ಮವರು ನನಗೆ ಮಗು ನೀನು ಓದ್ತಾ ಇದ್ದಾ, ಯಾವ ಸ್ಕೂಲಿಗೆ ಹೋಗ್ತಾ ಇದ್ದೆ, ಯಾವ ಮೀಡಿಯಂ, ಸರ್ಟಿಫಿಕೇಟ್ ಇದೆಯಾ, ಬಾಪ್ಪ ನಿನ್ನ ಸ್ಕೂಲ್‌ಗೆ ಸೇರಿಸ್ತೀನಿ ಅಂತ ನಮ್ಮೋರು ನನ್ಗೆ ಹೇಳಿಕೊಟ್ಟಿಲ್ಲ.

ನಾನು ಸೀರೆ ಹಾಕೋಬೇಕು, ಹೆಂಗಸ್ರ ತರ ಕಾಣಿಸ್ಬೇಕು ಅಂತ ಇಲ್ಲಿಗೆ ಬಂದೆ, ಆದ್ರೆ ಅವ್ರು ನಮ್ಗೆ ಹೇಳಿದ್ದು ಇಷ್ಟೆ ಮಗಾ ನಮ್ಗೆ ಇರೋ ಆಪ್ಷನ್ಸ್ ಇದೆ ಒಂದು ಬೆಗ್ಗಿಂಗ್ ಮಾಡ್ಬೇಕು, ಇಲ್ಲಾ ಸೆಕ್ಸ್ ವರ್ಕ್ ಮಾಡ್ಬೇಕು. ಇದರಲ್ಲಿ ನಿನ್ಗೆ ಯಾವುದು ಬೇಕು ಆರಿಸ್ಕೊ ಅಂದ್ರು, ಅದನ್ನು ಬಿಟ್ಟು ಅಡ್ಗೆ ಮಾಡ್ಬೇಕ ಮಾಡು. ಡ್ಯಾನ್ಸ್ ಕಲಿಬೇಕ ಕಲಿ ಅಂತದ್ರು. ಆದ್ರೆ ನಮ್ಮೋರೆಲ್ಲರೂ ಆ ಕೆಲ್ಸ ಮಾಡ್ತಿದ್ರು, ಹೌದು ನಾನು ಇದಕ್ಕೂ ಹೋಗ್ಬೋದು, ನನ್ಗೆ ಇದ್ರಲ್ಲಿ ಖುಷಿ ಇದೆ ಅಂತ ನಾನು ಎರಡನ್ನೂ ಒಪ್ಕೊಂಡೆ. ಆದ್ರೆ ಇವತ್ತು ನಮ್ಗೆ ಅರಿವು ಬಂದಿದೆ. ಇವತ್ತಿನ ಸಮಯದಲ್ಲಿ ನಾಲೆಜ್ಡ್ ಸಿಕ್ಕಿರೊ ಕಾರಣ ಕಾನೂನು ರೀತಿಯಲ್ಲಿ ಅದು ಅಪರಾಧ ಅಂತ ಗೊತ್ತು. ಆದ್ರೆ ನಮ್ಗೆ ಬೇರೆ ವಿಧಿ ಇಲ್ಲ. ಅದರಿಂದನೆ ನಮ್ಮ ಜೀವನ, ಆದ್ರೆ ನಾನೇಳೋದು ಏನು ಅಂತಂದ್ರೆ ನೀವ್ಯಾರೆ ಭಿಕ್ಷೆ ಬೇಡೋಕೋದ್ರು ಡಿಮ್ಯಾಂಡ್ ಮಾಡ್ಬೇಡಿ ಜನಗಳತ್ರ. ರಿಕ್ವೆಸ್ಟ್ ಮಾಡಿ, ಕೈ ತೋರಿಸಿ ಅವ್ರು ಖಂಡಿತ ಕೊಡ್ತಾರೆ. ಸೆಕ್ಸ್ ವರ್ಕ್ ಬಗ್ಗೆ ತುಂಬ ಹಗುರವಾಗಿ ಮಾತಾಡ್ತೀವಿ. ಆದ್ರೆ ಅದನ್ನ ಕಲಿಸಿದ್ದೂ ನಮ್ಮ ಹಿರಿಯರೇ. ನಮ್ಗೆ ಗೊತ್ತಿಲ್ಲ ಅದ್ರ ಬಗ್ಗೆ. ಈಗ ಅದ್ರಲ್ಲೂ ಸ್ವಲ್ಪ ಬದಲಾವಣೆ ಆಗಿದೆ. ಅದನ್ನ ಬಿಟ್ಟು ಬರಬೇಕು ಅನ್ನೋದಕ್ಕೆ ಚಾಂದಿನಿಗೆ ಸುಮಾರು ೧೮ ವರ್ಷ ತಗೋಂತು. ಅದನ್ನೆಲ್ಲ ಬಿಟ್ಟು ನಮಗೂ ಬದಕೋಕೆ ಹಕ್ಕಿದೆ, ನಮಗೂ ಹಕ್ಕುಗಳಿವೆ. ನಾವೂ ಪ್ರಧಾನವಾಹಿನಿಯಲ್ಲಿ ಕೆಲಸ ಮಾಡಬಹುದು. ಇವತ್ತು ನಾನು ಒಂದು ಕಂಪನಿಯಲ್ಲಿ ಕೆಲ್ಸ ಮಾಡ್ತಾ ಇದೀನಿ ಅಂತಂದ್ರೆ, ಆ ಲೆವೆಲ್ಲಿಗೆ ಬರಬೇಕು ಅಂತಂದ್ರೆ ಆ ನಾಲೆಡ್ಜ್, ಆ ಅನುಭವ, ನಾನು ನೋಡಿದಂತಾ ವ್ಯಕ್ತಿಗಳು, ತಿಳಕೊಂಡಂತ ರೀತಿ ಇದೆಲ್ಲಾ ನಾನು ಮಾಡ್ಬೋದು ಅನ್ನೋ ನನ್ನ ವೈಯಕ್ತಿಕ ಇಂಟರೆಸ್ಟ್ ಇದೆಲ್ಲದಕ್ಕೂ ಸುಮಾರು ೧೫ರಿಂದ ೧೬ ವರ್ಷದ ಪಿರಿಯೆಡ್ ತಗೋಂತು. ತುಂಬ ಜನ ಬಂದಿದಿವಿ ನಾವು, ಈವಾಗ ರೇವತಿ ಇರಬಹುದು, ಅಕ್ಕ ಇರಬಹುದು, ಪ್ರಿಯಾಂಕ ಇರಬಹುದು, ಸುಮನ್ ಇರಬಹುದು ತುಂಬ ಜನ ಬಂದಿದಿವಿ. ಬಟ್ ಕರ್ನಾಟಕದಲ್ಲಿ ಸಾವಿರಾರು ಜನ ಇದಾರೆ, ೫ – ೧೦ ಸಾವಿರ ಜನ ಇದಾರೆ, ಅವ್ರೆಲ್ಲಾ ಈ ಹಂತಕ್ಕೆ ಬರಬೇಕು ಅಂತಂದ್ರೆ ಟೈಮ್ ತಗೋಳುತ್ತೆ. ಅದಕ್ಕೆ ಕಾಯ್ಬೇಕು ನಾವು, ದಲಿತರಿಗೆ ಮೀಸಲಾತಿ, ಮಹಿಳೆಯರಿಗೆ ಮೀಸಲಾತಿ ಬರಬೇಕು ಅಂತ ಎಷ್ಟು ವರ್ಷದಿಂದ ಪ್ರಯತ್ನ ಪಟ್ಟಿದ್ದು. ಈಗ ಎಷ್ಟು ಪರ್ಸೆಂಟ್ ಸಿಕ್ಕಿದೆ, ಇನ್ನೂ ನಾವು ಹೋರಾಟ ಮಾಡ್ಬೇಕಾಗಿದೆ. ಸೋ ಯಾವುದೋ ಒಂದು ಕಾಲದಲ್ಲಿ ಅದು ಸಿಗುತ್ತೆ ನಮ್ಗೆ. ಬಟ್ ಸೆಕ್ಸ್ ವರ್ಕ್ ಮಾಡ್ಕೊಂಡು ಬದುಕೋರು ತುಂಬ ಜನ ಇದಾರೆ. ಹಾಗಾಗಿ ಸೆಕ್ಸ್ ವರ್ಕ್‌ನ ನಾನು ತಪ್ಪು ಅಂತ ಹೇಳೋಲ್ಲ. ಯಾಕೆಂದ್ರೆ ನಾನು ನನ್ನ ದೇಹವನ್ನು ಮಾರ್ಕೊಂಡು ಊಟ ಮಾಡ್ತಾ ಇದೀನಿ, ಯಾವ ಕಾನೂನಲ್ಲೂ ಇದು ತಪ್ಪು ಅಂತ ಇಲ್ಲ. ನನ್ಗೆ ಊಟ ಬೇಕು ನನ್ನ ದೇಹನ ಮಾರ್ಕೊಂಡು ನಾನು ತಿಂತೀನಿ, ಬೇರೆಲ್ಗೆ ತೊಂದ್ರೆ ಮಾಡಬಾರ್ದು. ಅದು ನನ್ನ ಪಾಲಿಸಿ ಅಷ್ಟೆ.

**ಪ್ರಶ್ನೆ :** ನೀವು ಆತ್ಮಕತೆಯನ್ನು ಬರೆಯುತ್ತಿದ್ದೀರಿ. ಇದರ ರೂಪುರೇಷೆಗಳನ್ನು ಕುರಿತು, ಭಾಷೆ ಮತ್ತು ಶೈಲಿಯನ್ನು ಕುರಿತು ತಿಳಿಸುವಿರಾ.

**ಚಾಂದಿನಿ :** ಈಗಾಗಲೇ ಅರ್ಧ ಕೆಲಸ ಮುಗಿದಿದೆ. ನನ್ಗೆ ಸ್ವಲ್ಪ ಭಯ ಇದೆ, ನಮ್ಮ ಕಮ್ಯುನಿಟಿ ಇದನ್ನ ಹೇಗೆ ಒಪ್ಪಿಕೊಳ್ತಾರೋ ಅಂತ. ತುಂಬ ಸ್ನೇಹಿತರು ಇದು ಸರಿ ಇದೆ, ನಿನ್ನ ಜೀವನದಲ್ಲಿ ಏನು ನಡೆದಿದೆ ಅದನ್ನ ಬರೀ ಅಂತಾರೆ. ನೋಡ್ಬೇಕು.

**ಪ್ರಶ್ನೆ :** ನಿಮ್ಮ ಸಮುದಾಯಕ್ಕೆ ಭಿನ್ನವಾದ ಭಾಷೆಯೊಂದಿದೆಯೇ?

**ಚಾಂದಿನಿ :** ನಮ್ದು ಭಾಷೆ ಅಂದರೆ ಹಿಜಡಾ ಭಾಷೆ, ಕೆಲವೊಂದು ಪದಗಳಿವೆ. ಅವು ನಮ್ಮನ್ನ ಬಿಟ್ಟು ಬೇರೆ ಯವರಿಗೆ ಅರ್ಥ ಆಗೋಲ್ಲ. ಅದಕ್ಕೆ ಲಿಪಿ ಇಲ್ಲ. ಇನ್ನು ಆಚರಣೆಗಳ ಬಗ್ಗೆ ಹೇಳೋದಾದರೆ ನಮ್ದು, ನಿಮ್ದು ಒಂದೇನೆ. ಆದರೆ ವೈವಿಧ್ಯತೆಯಿಂದ ಮಾಡ್ತಿವಿ. ಅದು ಹೊರಗಡೆಯಿಂದ ನೋಡುವವರಿಗೆ ಬೇರೇ ಥರಾನೆ ಕಾಣ್ಸುತ್ತೆ. ನಾವು ಹಿಂದುಗಳಾದ್ರು ಕೂಡ ಮುಸ್ಲಿಂ ಸಂಸ್ಕೃತೀನ ಸ್ವಲ್ಪ ಆಚರಣೆ ಮಾಡ್ತಿವಿ. ರಂಜಾನ್ ಹಬ್ಬ ಆಚರಿಸುತ್ತೇವೆ. ಅವತ್ತು ಹಿರಿಯರಿಗೆ ಹಣ್ಣು, ಹೂವು ಕೊಟ್ಟು ಆಶೀರ್ವಾದ ಪಡ್ಕೋತೀವಿ. ಅವ್ರು ನಮ್ಗೆ ಸೀರೆ, ಬಟ್ಟೆ ಎಲ್ಲಾ ಕೊಡ್ತಾರೆ. ಮತ್ತೆ ನಮ್ಮ ಸಂಸ್ಕೃತಿಯಲ್ಲಿ ಹೊಸಬರು ಯಾರು ಬರ್ತಾರೋ ಅವ್ರನ್ನ ನಾವು ಮಗಳ ತರಹ ದತ್ತು ತಗೋತೀವಿ. ನಮ್ದೆ ಆದ ಏಳು ಮನೆ ನಾಯಕ್ ಪದ್ಧತಿ ಇದೆ. ಒಳ್ಳೇದು ಕೆಟ್ಟದ್ದು ಏನೇ ಆದರೆ ಅದನ್ನೆಲ್ಲಾ ಅವರೇ ನಿರ್ಧರಿಸುತ್ತಾರೆ. ಅಂದ್ರೆ ಅವ್ರು ಮುಖ್ಯಸ್ಥರು ಆಗ್ತಾರೆ. ಇನ್ನು ಆಪರೇಶನ್ ಮಾಡ್ಸ್ಕೊಂಡ ಮೇಲೆ ಒಂದು ಆಚರಣೆ ಮಾಡ್ತಿವಿ. ಈವಾಗ ಹೆಣ್ಮಕ್ಳು ವಯಸ್ಸಿಗೆ ಬಂದಾಗ ಹೇಗೆ ಆಚರಿಸುತ್ತಾರೋ ಹಾಗೆ. ೪೦ ದಿನ ಮನೆ ಒಳಗೇ ಇರ್ತೀವಿ. ಆಮೇಲೆ ದೊಡ್ಡ ಛತ್ರದಲ್ಲಿ ಹಸಿರು ಬಳೆ, ಹಸಿರು ಸೀರೆ ಎಲ್ಲಾ ಹಾಕ್ಕೊಂಡು ತುಂಬ ಅದ್ದೂರಿಯಾಗಿ ಆಚರಿಸುತ್ತೇವೆ. ನಮ್ದೇ ದೇವರಾದ ದುರ್ಗಿ ಮಾತಾನ ಪೂಜೆ ಮಾಡಿ ಗಂಗೆಗೆ ಹಾಲನ್ನ ಬಿಡ್ತಿವಿ. ಇದೆಲ್ಲಾ ಇದೆ. ನಮ್ಮಲ್ಲಿ ಜಾತಿ ಪದ್ಧತಿ ಇಲ್ಲಾ. ನಾವೆಲ್ಲಾ ಒಂದೇ ಕುಟುಂಬದವರ ತರಹ ಬದುಕ್ತೀವಿ.

**ಪ್ರಶ್ನೆ :** ನೀವು ಸಮಾಜಕ್ಕೆ ಏನನ್ನಾದರೂ ಹೇಳಲು ಇಚ್ಚಿಸುವಿರಾ?

**ಚಾಂದಿನಿ :** ನಾವೂ ಕೂಡ ನಿಮ್ಮಂತೆ ಮನುಷ್ಯರು, ನಮಗೂ ಭಾವನೆಗಳಿವೆ. ನಮ್ಮ ಭಾವನೆಗಳಿಗೂ ಬೆಲೆ ಕೊಡಿ, ನಮ್ಮನ್ನು ಒಪ್ಪಿಕೊಳ್ಳಿ. ಎಲ್ಲಕ್ಕಿಂತ ಮುಖ್ಯವಾಗಿ ಸಮಾಜ ಹಾಗೂ ಕುಟುಂಬಗಳು ನಮ್ಮನ್ನು ಒಪ್ಪಿಕೊಳ್ಳಬೇಕು. ನಮ್ಮನ್ನು, ನಮ್ಮ ಭಾವನೆಗಳನ್ನು ಅರ್ಥ ಮಾಡಿಕೊಳ್ಳಬೇಕು ಅಂತ ಹೇಳೋಕೆ ಇಷ್ಟಪಡ್ತೀನಿ.

**ಡಾ॥ ಸುಧಾ ಬಿ. ಎಸ್.**
ಕನ್ನಡ ಸಹಾಯಕ ಪ್ರಾಧ್ಯಾಪಕರು, ಸರ್. ಎಂ. ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು, ನ್ಯೂಟೌನ್, ಭದ್ರಾವತಿ

# ಮದ್ಯ ನಿಷೇಧ ಹೋರಾಟವನ್ನು



**‘ಬೀರು ಬೇಡ, ನೀರು ಬೇಕು’, ‘ಸಾರಾಯಿ ಬೇಡ, ಶಿಕ್ಷಣ ಬೇಕು‘.... ಎಂಬ ಘೋಷಣೆಗಳನ್ನು ದಿಟ್ಟ ದನಿಯಲ್ಲಿ ಕೂಗುತ್ತಾ ಎರಡು ಸಾವಿರಕ್ಕೂ ಹೆಚ್ಚು ಮಹಿಳೆಯರು ಸಾಗರೋಪಾದಿಯಲ್ಲಿ ಚಳಿ, ಗಾಳಿ, ಮಳೆಯನ್ನು ಲೆಕ್ಕಿಸದೇ ಚಿತ್ರದುರ್ಗದಿಂದ ರಾಜಧಾನಿಯತ್ತ ಸುಮಾರು ೨೧೦ ಕಿ. ಮೀ. ದೂರ ಕಾಲ್ನಡಿಗೆ ಜಾಥಾ ನಡೆಸಿ ಇತಿಹಾಸ ಸೃಷ್ಟಿಸಿದ್ದಾರೆ! ‘ಕರ್ನಾಟಕದಲ್ಲಿ ಸಂಪೂರ್ಣ ಮದ್ಯ ನಿಷೇಧ ಆಗಲೇಬೇಕು’, ಸರ್ಕಾರವು ಈ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಬೇಕೆಂಬ ಹಕ್ಕೊತ್ತಾಯಗಳನ್ನು ಮುಂದಿಟ್ಟು ನಡೆಸಿದ ಈ ಪಾದಯಾತ್ರೆ ಜನವರಿ ೩೦ರಂದು ಬೆಂಗಳೂರು ತಲುಪಿ ‘ವಿಧಾನಸೌಧ ಚಲೋ’ ನಡೆಸಲು ದಿಟ್ಟ ಪ್ರಯತ್ನ ನಡೆಸಿ ರಾಜ್ಯದ ಗಮನ ಸೆಳೆಯಿತು ಮತ್ತು ಬೆಂಬಲ ಪಡೆಯಿತು.**

ಚಿತ್ರದುರ್ಗದಿಂದ ಆರಂಭವಾದ ಕಾಲ್ನಡಿಗೆ ಜಾಥಾವು ಬೆಂಗಳೂರು ತಲುಪುವ ಮುನ್ನವೇ ಒಂದು ದುರಂತ ನಡೆದುಹೋಯಿತು. ನೆಲಮಂಗಲ ಸಮೀಪ ಜಾಥಾ ಬರುವಾಗ ರಸ್ತೆಯಲ್ಲಿ ಬೈಕ್ ಗುದ್ದಿ ೬೦ ವರ್ಷದ ರಾಯಚೂರು ಜಿಲ್ಲೆಯ ರೇಣುಕಮ್ಮ ತಮ್ಮ ಪ್ರಾಣ ಕಳೆದುಕೊಂಡಳು. ಆದರೆ ನಮ್ಮ ಮಕ್ಕಳ ಮುಂದಿನ ಭವಿಷ್ಯಕ್ಕಾಗಿ ಕರ್ನಾಟಕದಲ್ಲಿ ಮದ್ಯ ನಿಷೇಧ ಮಾಡಲೇಬೇಕು ಎಂಬ ಆಶಯದೊಂದಿಗೆ ನಡೆದು ಬಂದಿದ್ದ ಅವರ ದಣಿದ ಮುಖದಲ್ಲಿ ಹೋರಾಟದ ಕಿಚ್ಚು ಆರಿರಲಿಲ್ಲ.

ಕುಡಿತದಿಂದಾಗಿ ಕುಟುಂಬ, ಹಳ್ಳಿಗಳು ಹಾಳಾಗುತ್ತಿವೆ. ಮನೆಗೆ ಒಬ್ಬರಂತೆ ಪ್ರತಿಯೊಬ್ಬರ ಮನೆಯಲ್ಲೂ ಮದ್ಯಪಾನದಿಂದಾಗಿ ಸಂಸಾರದ ನೆಮ್ಮದಿ ಹಾಳಾಗುತ್ತಿವೆ. ೧೫ ವರ್ಷದ ಮಕ್ಕಳಿಂದ ಆರಂಭಗೊಂಡು ೮೦ರ ವರ್ಷದ ಮುದುಕರು ಸಹ ಕುಡಿತಕ್ಕೆ ದಾಸರಾಗಿದ್ದಾರೆ. ಹಲವು ಕುಟುಂಬಗಳು ಗಂಡ, ಮಕ್ಕಳನ್ನು ಕಳೆದುಕೊಂಡಿದ್ದಾರೆ. ಇದನ್ನು ತಪ್ಪಿಸಿ ನೆಮ್ಮದಿಯುತ ವಾತಾವರಣ ಸೃಷ್ಟಿಸಬೇಕೆಂಬುದೇ ಈ ಆಂದೋಲನದ ಉದ್ದೇಶವಾಗಿತ್ತು.

‘ನಮ್ಮನ್ಯಾಗೆ ಇರೋದು ನಾಲ್ಕು ಮಂದಿ. ಗಂಡ ಕುಡಿದು ಸತ್ತೋದ. ನನ್ನ ಮೊಮ್ಮಗ ಶಾಲೆಗೆ ಹೋಗ್ತಾನೆ. ಉಳಿದ ನಾವು ಮೂರು ಜನರು ಹೊಲದಾಗೆ ಕೂಲಿ ಕೆಲಸಕ್ಕೆ ಹೋಗುತ್ತೇವೆ. ನನ್ನ ಮಗ ದುಡಿಯೋ ಬಿಡಿಗಾಸನ್ನು ಸಾರಾಯಿ ಅಂಗಡಿಗೆ ಇಡ್ತಾನೆ. ಮನೆಗೆ ಬಂದರೆ ಸೊಸೆಗೆ ಹೊಡೆದು, ಅವಳತ್ರ ಇರೊ ದುಡ್ಡು ಕಿತ್ಕಂಡು ಹೋಗ್ತಾನೆ’ ಎಂದು ತಮ್ಮ ನೋವನ್ನು ತೋಡಿಕೊಳ್ಳುವ ಯಲ್ಲವ್ವನ ಕಣ್ಣಂಚಲ್ಲಿ ನೀರು ತುಂಬಿತ್ತು.

‘ನಂಗೆ ವಯಸ್ಸಾಗೋಯ್ತು. ನನ್ನ ಮಕ್ಕಳ ಭವಿಷ್ಯ ಚೆನ್ನಾಗಿರಬೇಕು ಅಂದ್ರೆ ನಮ್ಮೂರಾಗೆ ಕುಡಿಯೋಕೆ ಸಾರಾಯಿ ಸಿಗಬಾರ್ದು. ನಮ್ಮೂರಾಗೆ ಮಾತ್ರ ಅಲ್ಲ, ಯಾವೂರಲ್ಲೂ ಎಣ್ಣೆ (ಮದ್ಯ) ಸಿಗಬಾರದು. ಅದಕ್ಕೆ ನಾನು ಬೆಂಗಳೂರಿಗೆ ಹೊಂಟೀನಿ’ ಎನ್ನುತ್ತಾರೆ ೭೦ ವರ್ಷದ ಮಹಿಳೆಯೊಬ್ಬರು.

ಇಂತಹ ನೂರಾರು ನೋವು, ಸಂಕಟಗಳನ್ನಿಟ್ಟುಕೊಂಡಿದ್ದ ಮಹಿಳೆಯರು ನಮ್ಮ ಕುಟುಂಬದಲ್ಲಿ ನೆಮ್ಮದಿ ನೆಲೆಸಬೇಕೆಂದರೆ ಕರ್ನಾಟಕದಲ್ಲಿ ಮದ್ಯ ನಿಷೇಧ ಆಗಲೇಬೇಕು. ಎಂಬುದನ್ನು ಸರ್ಕಾರಕ್ಕೆ ದಿಟ್ಟ ದನಿಯಲ್ಲಿ ಹೇಳಲು ಬೆಂಗಳೂರಿಗೆ ಬಂದಿದ್ದರು.

**ಪ್ರಣತಿ**

**ಮದ್ಯ ನಿಷೇಧ ಆಂದೋಲನ ಶುರುವಾದದ್ದೇಗೆ?**

ಗ್ರಾಮೀಣ ಕೂಲಿಕಾರರ ಸಂಘವು (ಗ್ರಾಕೂಸ) ಉತ್ತರ ಕರ್ನಾಟಕದ ನಾನಾ ಭಾಗಗಳಲ್ಲಿ ನರೇಗಾ ಯೋಜನೆಯನ್ನು ಸಮರ್ಪಕವಾಗಿ ಕಾರ್ಯರೂಪಕ್ಕೆ ತರಲು ಹುಟ್ಟಿಕೊಂಡ ಸಂಸ್ಥೆ. ಕೂಲಿ ಕೆಲಸಕ್ಕೆ ಬರುತ್ತಿದ್ದ ಅಸಂಖ್ಯ ಮಹಿಳೆಯರೆಲ್ಲರೂ ಈ ಸಂಘಟನೆ ಸೇರಿದ್ದರು. ಆ ಮಹಿಳೆಯರು ಕಳೆದ ಹಲವು ವರ್ಷಗಳಿಂದ ಮದ್ಯಪಾನದಿಂದಾಗಿ ಅವರ ಸಂಸಾರಕ್ಕಾಗುತ್ತಿರುವ ಸಮಸ್ಯೆಗಳ ಬಗ್ಗೆ ಹೇಳಿಕೊಂಡು, ಅದರ ವಿರುದ್ಧ ಹೋರಾಟ ನಡೆಸಬೇಕೆಂದು ಬಯಸಿದ್ದರು.

ಆ ಮಹಿಳೆಯರ ಅತಿ ಒತ್ತಾಯದ ಮೇರೆಗೆ ಮದ್ಯ ನಿಷೇಧದ ವಿರುದ್ಧ ಆಂದೋಲನ ಶುರುವಾಯಿತು.

೨೦೧೬ರಲ್ಲಿ ರಾಯಚೂರಿನಲ್ಲಿ ೩೦ ಸಾವಿರಕ್ಕೂ ಹೆಚ್ಚು ಮಹಿಳೆಯರು ಒಂದೆಡೆ ಸೇರಿ ತಮ್ಮ ಶಕ್ತಿ ಪ್ರದರ್ಶನ ಮಾಡುವ ಮೂಲಕ ಹೋರಾಟಕ್ಕೆ ಮುನ್ನುಡಿ ಬರೆದಿದ್ದರು. ನಂತರ ೨೦೧೭ರಲ್ಲಿ ರಾಯಚೂರಿನಲ್ಲಿ ಮದ್ಯ ನಿಷೇಧಕ್ಕಾಗಿ ಸಾವಿರಾರು ಮಹಿಳೆಯರು ೭೧ ದಿನಗಳ ಕಾಲ ಉಪವಾಸ ಸತ್ಯಾಗ್ರಹ ಸಹ ನಡೆಸಿದರು. ಪ್ರತಿ ಜಿಲ್ಲೆಯ ಅಬಕಾರಿ ಇಲಾಖೆಗಳ ಮುಂದೆ ‘ಮದ್ಯ ನಿಷೇಧ ಮಾಡಿ ಇಲ್ಲವೇ ನಮ್ಮ ಗಾಂಧಿಯನ್ನು ನಮಗೆ ಕೊಡಿ’ ಎಂದು ಪ್ರತಿಭಟನೆಯನ್ನು ನಡೆಸಿದ್ದಾರೆ. ೨೦೧೮ರ ಅಂತ್ಯದಲ್ಲಿ ಬೆಳಗಾವಿಯಲ್ಲಿ ನಡೆದ ವಿಧಾನಸಭಾ ಅಧಿವೇಶನದ ಸಂದರ್ಭದಲ್ಲಿಯೂ ಸಹ ಮದ್ಯ ನಿಷೇಧಕ್ಕೆ ಒತ್ತಾಯಿಸಿ ಹೋರಾಟ ನಡೆಸಿದ್ದರು. ಈ ಯಾವ ಹೋರಾಟಕ್ಕೂ ಸರ್ಕಾರ ಸ್ಪಂದಿಸದಿದ್ದಾಗ ಬೇಸತ್ತ ಮಹಿಳೆಯರು ಬೆಂಗಳೂರಿಗೆ ನಡೆದು ಬರುವ ದೊಡ್ಡ ತೀರ್ಮಾನ ಕೈಗೊಂಡರು.

ಇದೊಂದು ರೀತಿಯ ಕೆಳಗಿನಿಂದ ಹುಟ್ಟಿಬಂದ ಹೋರಾಟವಾಗಿದೆ. ಕೂಡಲೇ ಮದ್ಯ ನಿಷೇಧ ಸಾಧ್ಯವೇ ಎಂಬ ಪ್ರಶ್ನೆ ಮುಂಚೂಣಿ ನಾಯಕತ್ವದಲ್ಲಿದ್ದಾಗಲೇ ಈ ಮಹಿಳೆಯರು ನಾವು ಸಾಧ್ಯವಾಗಿಸಲೇಬೇಕು ಎಂದು ಪಟ್ಟು ಹಿಡಿದ ಮತ್ತು ದಿಟ್ಟವಾಗಿ ನಡೆಸಿದ ಹೋರಾಟ ಇದಾಗಿದೆ.

**ಸಮಸ್ಯೆಗಳ ಆಗರಕ್ಕೆ ದಾರಿ ಮದ್ಯ ವ್ಯಸನ**

ನಿಮ್ಹಾನ್ಸ್ ನಡೆಸಿರುವ ಅಧ್ಯಯನದ ವರದಿ ಪ್ರಕಾರ ಸುಮಾರು ಶೇ. ೬೦ರಷ್ಟು ಅಪಘಾತಗಳು ಕುಡಿದವರಿಂದಲೇ ಆಗುತ್ತದೆ. ಶೇ. ೮೫ರಷ್ಟು ಕೌಟುಂಬಿಕ ದೌರ್ಜನ್ಯಕ್ಕೆ ಮದ್ಯ ಸೇವನೆಯೇ ಕಾರಣ ಎಂಬುದು ವರದಿಯಿಂದ ದೃಢಪಟ್ಟಿದೆ. ಅತ್ಯಾಚಾರ, ಲೈಂಗಿಕ ದೌರ್ಜನ್ಯಗಳಂಥ ಕ್ರೌರ್ಯವೆಸಗುವವರಲ್ಲಿ ಶೇ. ೯೦ ಮಂದಿ ಮದ್ಯ ವ್ಯಸನಿಗಳೇ ಆಗಿದ್ದಾರೆ ಎನ್ನುತ್ತದೆ ವರದಿ.

ಈ ಹೋರಾಟದಲ್ಲಿ ಭಾಗವಹಿಸಿದ ಮಹಿಳೆಯರನ್ನು ಕೇಳಿದಾಗ ಅವರೆಲ್ಲರೂ ಒಂದಲ್ಲಾ ಒಂದು ಕಾರಣದಿಂದ ಕೌಟುಂಬಿಕ ದೌರ್ಜನ್ಯಕ್ಕೆ ಒಳಗಾಗಿದ್ದಾರೆ. ಪ್ರತಿನಿತ್ಯ ಮನೆಯಲ್ಲಿ ಜಗಳ, ಹೊಡೆಯುವುದು ಸರ್ವೇಸಾಮಾನ್ಯ ಎನ್ನುವಂತಾಗಿದೆ.

# ಮುನ್ನೆಲೆಗೆ ತಂದ ಮಹಿಳೆಯರು

ಕುಡಿದ ಅಮಲಿನಲ್ಲಿರುವವರು ತಾವು ಏನು ಮಾಡುತ್ತಿದ್ದೇವೆ ಎಂಬುದರ ಅರಿವಿರದ ರೀತಿಯಲ್ಲಿರುತ್ತಾರೆ.

**ರೋಗಗಳು ನೂರಾರು**

ಕುಡಿತದಿಂದಾಗಿ ಕುಡುಕನ ಆರೋಗ್ಯ ತೀವ್ರವಾಗಿ ಹದಗೆಡುತ್ತದೆ. ಸುಮಾರು ೬೦ ಬಗೆಯ ಕಾಯಿಲೆಗಳು ಕುಡುಕರನ್ನು ಕಾಡುತ್ತವೆ ಎನ್ನುತ್ತದೆ ವರದಿ. ಯಕೃತ್, ಕಿಡ್ನಿ, ಜಠರ ಹೀಗೆ ದೇಹದ ಎಲ್ಲಾ ಅಂಗಾಂಗಗಳ ಮೇಲೂ ದುಷ್ಪರಿಣಾಮ ಬೀರುತ್ತದೆ. ಮಾನಸಿಕ ಆರೋಗ್ಯದ ಮೇಲೂ ಪರಿಣಾಮ ಬೀರುತ್ತದೆ. ಪಾರ್ಶ್ವವಾಯು, ನೆನಪಿನ ಶಕ್ತಿ ಕಳೆದುಕೊಳ್ಳುವುದು, ದೈಹಿಕವಾಗಿ ಸ್ಥಿಮಿತ ಕಳೆದುಕೊಳ್ಳುವುದು ಇವೆಲ್ಲವೂ ಕುಡಿತದಿಂದಾಗುವ ಸಮಸ್ಯೆಗಳಾಗಿವೆ.

**ಮಹಿಳೆಯರು ಕೇಳುತ್ತಿರುವುದೇನು?**

ಸಾವಿರಾರು ಮಹಿಳಾ ಹೋರಾಟಗಾರ್ತಿಯರು ಕೆಚ್ಚೆದೆಯಿಂದ ಕರ್ನಾಟಕದಲ್ಲಿ ಮದ್ಯ ನಿಷೇಧ ಮಾಡಬೇಕು ಎಂದು ಕೂಗಿ ಕೂಗಿ ಹೇಳುತ್ತಿದ್ದಾರೆ. ಸರ್ಕಾರಗಳು ಮದ್ಯ ಮಾರಾಟದ ಟಾರ್ಗೆಟ್ ಅನ್ನು ಪ್ರತಿ ತಿಂಗಳು ಹೆಚ್ಚಿಸುತ್ತಲೇ ಇವೆ. ಇದರಿಂದ ಅಕ್ರಮ ಮದ್ಯ ಮಾರಾಟ ಪ್ರತಿ ಗ್ರಾಮಕ್ಕೂ ತನ್ನ ಕರಾಳ ಹಸ್ತ ಚಾಚುತ್ತಿದೆ. ಇದರ ಮೇಲೆ ಸರ್ಕಾರ ನಿಯಂತ್ರಣ ಹೇರಬೇಕು. ಟಾರ್ಗೆಟ್ ನಿಲ್ಲಿಸಬೇಕು, ಅಕ್ರಮ ತಡೆಗಟ್ಟಬೇಕು, ಹೊಸದಾಗಿ ಲೈಸೆನ್ಸ್ ಕೊಡಬಾರದು, ಸಂಪೂರ್ಣ ಮದ್ಯ ನಿಷೇಧ ಜಾರಿ ಮಾಡಲು ಈಗಿಂದಲೇ ಯೋಜನೆ ರೂಪಿಸಿಕೊಳ್ಳಬೇಕು ಎಂಬ ಹಕ್ಕೊತ್ತಾಯಗಳನ್ನು ಸರ್ಕಾರದ ಮುಂದಿಟ್ಟರು.

ಆದರೆ ಸಾವಿರಾರು ಬಡ ಮಹಿಳೆಯರು ೧೨ ದಿನಗಳ ಕಾಲ ಕಾಲ್ನಡಿಗೆಯಲ್ಲಿ ಬೆಂಗಳೂರಿಗೆ ಬಂದರೂ ಅವರ ಅಹವಾಲನ್ನು ಕೇಳುವ ಕನಿಷ್ಠ ಸೌಜನ್ಯ ಮುಖ್ಯಮಂತ್ರಿ ಕುಮಾರಸ್ವಾಮಿಯವರಿಗಿರಲಿಲ್ಲ. ಆ ಮಹಿಳೆಯರನ್ನು ಕಂಡು ಮಾತಾಡಿಸುವ ಮಾತಿರಲಿ, ನಿಯೋಗವಾಗಿ ಮುಖ್ಯಮಂತ್ರಿಗಳನ್ನು ಭೇಟಿ ಮಾಡಿದಾಗಲೂ ಬಹಳ ಉದ್ಧಟತನದಿಂದ ನಡೆದುಕೊಂಡರು. ನಾನು ಸಮ್ಮಿಶ್ರ ಸರ್ಕಾರದ ಮುಖ್ಯಮಂತ್ರಿಯಾಗಿದ್ದು, ಮದ್ಯ ನಿಷೇಧದ ಕುರಿತಾಗಿ ಒಬ್ಬನೇ ನಿರ್ಧಾರ ತೆಗೆದುಕೊಳ್ಳಲು ಆಗುವುದಿಲ್ಲ ಎಂದು ಮಾಮೂಲಿ ಹೇಳಿಕೆ ನೀಡಿ ಕೈ ತೊಳೆದುಕೊಂಡರು.

**ಮದ್ಯ ನಿಷೇಧ ಸಾಧ್ಯವಾ?**

ಬಿಹಾರ, ಗುಜರಾತ್, ಮಣಿಪುರ, ನಾಗಾಲ್ಯಾಂಡ್ ರಾಜ್ಯಗಳು ಸಂಪೂರ್ಣ ಮದ್ಯ ನಿಷೇಧ ಜಾರಿ ಮಾಡಿವೆ. ತಮಿಳುನಾಡು ಮತ್ತು ಕೇರಳದಲ್ಲಿ ಮದ್ಯ ನಿಷೇಧ ನಿಯಂತ್ರಣ ಕಾಯ್ದೆ ಜಾರಿಯಲ್ಲಿದೆ. ಈ ಕಾನೂನು ಜಾರಿಯಾದ ನಂತರ ಈ ರಾಜ್ಯಗಳಲ್ಲಿ ಅಪಘಾತ, ಕೌಟುಂಬಿಕ ದೌರ್ಜನ್ಯ, ಲೈಂಗಿಕ ದೌರ್ಜನ್ಯಗಳ ಸಂಖ್ಯೆಯಲ್ಲಿ ಅಗಾಧ ಇಳಿಮುಖ ಕಂಡಿವೆ. ಜನರು ಶಿಕ್ಷಣಕ್ಕೆ, ಉತ್ತಮ ಜೀವನ ನಡೆಸುವತ್ತ ಸಾಗುತ್ತಿದ್ದಾರೆ.

ಕರ್ನಾಟಕದಲ್ಲಿಯೂ ಮದ್ಯ ನಿಷೇಧ ಜಾರಿ ಮಾಡುವ ಅಗತ್ಯವಿದ್ದು, ಸರ್ಕಾರವು ಆರೋಗ್ಯಯುತ ಸಮಾಜ ಕಟ್ಟಲು ಮುಂದಾಗಬೇಕಿದೆ. ಬೇರೆ ರಾಜ್ಯಗಳಲ್ಲಿ ಸಾಧ್ಯವಾಗಿರುವ ಮದ್ಯ ನಿಷೇಧ ಕಾನೂನು ಇಲ್ಲಿಯೂ ಅನುಷ್ಠಾನಕ್ಕೆ ತರುವುದು ಸರ್ಕಾರದ ಇಚ್ಛಾಶಕ್ತಿಯನ್ನು ತೋರಿಸುತ್ತದೆ.



**ಮದ್ಯದಂಗಡಿ ಮುಚ್ಚಿಸುವತ್ತ ಮಹಿಳೆಯರ ಚಿತ್ತ**

ಮುಖ್ಯಮಂತ್ರಿಯವರ ಬೇಜವಾಬ್ದಾರಿ ನಡತೆಯಿಂದ ಬೇಸತ್ತ ಮಹಿಳೆಯರು ಮತ್ತಷ್ಟು ಸಿಟ್ಟಿನೊಂದಿಗೆ ಹೋರಾಟ ಮುಗಿಸಿ ತಮ್ಮ ಊರಿನತ್ತ ತೆರಳಿದ್ದಾರೆ. ತಮ್ಮ ತಮ್ಮ ಊರುಗಳಲ್ಲಿರುವ ಮದ್ಯದಂಗಡಿಗಳನ್ನು ತಾವೇ ಮುಚ್ಚಿಸಲು ಹೋರಾಟ ಮಾಡುವುದಾಗಿ ತೀರ್ಮಾನ ನಡೆಸಿದ್ದಾರೆ. ಈ ಬಗ್ಗೆ ಈಗಾಗಲೇ ಕಾರ್ಯಪ್ರವೃತ್ತರಾಗಿರುವ ಮಹಿಳೆಯರು ರಾಯಚೂರಿನ ಗೌಡನಬಾವಿ ಎಂಬ ಊರಿನಲ್ಲಿ ಅಲ್ಲಿನ ಗ್ರಾಮಸಭೆ ನಡೆಸಿ ಮದ್ಯದಂಗಡಿ ಬಂದ್ ಮಾಡಿಸಿದ್ದಾರೆ. ನಂತರ ಲೋಕಸಭಾ ಚುನಾವಣೆಯಲ್ಲಿ ಮತ ಕೇಳಲು ಬರುವ ಎಲ್ಲಾ ಪಕ್ಷದ ಮುಖಂಡರಿಗೆ ಬಿಸಿ ಮುಟ್ಟಿಸುವ ಮತ್ತು ಮಹಿಳೆಯರಿಂದ ಸಂಪೂರ್ಣ ಮತದಾನ ಬಹಿಷ್ಕಾರದಂತಹ ಬೆದರಿಕೆಯೊಡ್ಡಲು ತಯಾರಿ ನಡೆಸಿದ್ದಾರೆ.

"ಮಹಿಳೆಯರು ಮನಸ್ಸು ಮಾಡಿದರೆ ಇಡೀ ಸಮಾಜವನ್ನೇ ಬದಲಿಸಬಲ್ಲರು" ಎಂಬ ಅಂಬೇಡ್ಕರ್‌ರವರ ಮಾತನ್ನು ನಿಜಗೊಳಿಸುವತ್ತ ಈ ಮಹಿಳೆಯರು ಮುಂದಡಿಯಿಟ್ಟಿರುವುದು ಇಡೀ ಸಮಾಜದ ಸ್ವಾಸ್ಥ್ಯದ ದೃಷ್ಟಿಯಿಂದ ಮಹತ್ವದ್ದಾಗಿದೆ.

**ಪ್ರಣತಿ**
ಕೇರಾಫ್ ತಿಮ್ಮಯ್ಯ, ನಂ. ೪೬೩, ೪ನೇ ಕ್ರಾಸ್, ೧ನೇ ಮೇನ್
ಪಾಂಡು ಸ್ವಿಚ್ ವೇರ್ ಎದುರು, ಕೊಟ್ಟಿಗೇಪಾಳ್ಯ, ಮಾಗಡಿ ರಸ್ತೆ
ಬೆಂಗಳೂರು – ೫೬೦ ೦೯೧











## ಪರಿಧಿಯನ್ನು ಅರಸುತ್ತಾ...

*ಕೆ. ತಾರಾಭಟ್*

**ಪುಟ : ೮೮**

**ಬೆಲೆ : ರೂ. ೭೦/–**

**ತೇಜು ಪಬ್ಲಿಕೇಷನ್ಸ್,** *ಬೆಂಗಳೂರು*

*ಕನ್ನಡ ಕಥಾಸಾಹಿತ್ಯದಲ್ಲಿ ಕತೆಗಾರ್ತಿ ಆಗಿ, ಕಾದಂಬರಿ ಗಾರ್ತಿಯಾಗಿ ಹೆಸರಾದ ಕೆ. ತಾರಾಭಟ್‌ರ ಮೂರನೇ ಕಥಾಸಂಕಲನವಿದು. ಮುನ್ನುಡಿಯಲ್ಲಿ ಕತೆಗಾರ್ತಿ ಹೇಳಿಕೊಂಡಿರುವಂತೆ "ಇಂದಿನ ಆಧುನಿಕತೆಯ ಕೊಳ್ಳುಬಾಕ ಸಂಸ್ಕೃತಿಯಲ್ಲಿ ನಮ್ಮ ಅಸಲೀ ಮನುಷ್ಯತ್ವವೇ ಎಲ್ಲೋ ಕಳೆದುಹೋಗುತ್ತಿದೆ ಎಂದೆನಿಸಿದ ಕ್ಷಣದಲ್ಲಿ ಹಾಡು ಹಗಲೇ ಗಾಢಾಂಧಕಾರದಲ್ಲಿ ಇದ್ದಂತೆ ಅನಿಸುತ್ತದೆ. ಅಭಿವೃದ್ಧಿ ಸಾಧಿಸುವ ಭರದಲ್ಲಿ ಮಾನವೀಯತೆ ಕಳೆದುಕೊಂಡು ಮಾಹಿತಿ ತಂತ್ರಜ್ಞಾನವೇ ಪ್ರಾಬಲ್ಯ ಸಾಧಿಸುತ್ತಾ ಉಳಿದೆಲ್ಲಾ ಜ್ಞಾನವು ಕಸದ ಬುಟ್ಟಿಗೆ ಸೇರುತ್ತಾ ಹೋಗುತ್ತಿದೆ ಎನಿಸಿದಾಗೆಲ್ಲಾ ಬೆನ್ನು ಹತ್ತಿದ ಘಟನೆಗಳು ಕತೆಯಾಗಿ ರೂಪುಗೊಂಡಿವೆ. ಇದು ಒಂದು ರೀತಿಯಲ್ಲಿ ಜಿಜ್ಞಾಸೆಗೆ, ಗೊಂದಲಗಳಿಗೆ ಉತ್ತರ ಹುಡುಕುವ ಪ್ರಯತ್ನ." ಇಲ್ಲಿರುವ ಹನ್ನೊಂದು ಕತೆಗಳೂ ಸರಳವಾಗಿ, ಯಾವುದೇ ಅತಿರೇಕವಿಲ್ಲದೆ, ಅನುಭವವೊಂದನ್ನು ನೇರವಾಗಿ ರಾಜಕೀಯ, ಸಾಮಾಜಿಕ ಚೌಕಟ್ಟಿನಲ್ಲಿಟ್ಟು ವ್ಯಕ್ತಿತ್ವ ಶೋಧನೆಯ ಶೈಲಿಯಲ್ಲಿ ಮಂಡಿತವಾಗಿದೆ. ಕಥಾಸಂಕಲನದ ಶೀರ್ಷಿಕೆಯ ಕಥೆಯಾದ 'ಪರಿಧಿಯನ್ನು ಅರಸುತ್ತಾ' ಕಥೆಯು ಆದರ್ಶ ವ್ಯಕ್ತಿಯೊಬ್ಬ ಹೇಗೆ ಭ್ರಷ್ಟ ವ್ಯವಸ್ಥೆಯ ಪಿತೂರಿಗೆ ಸಿಲುಕಿ ಅಧೋಗತಿಗಿಳಿಯಬಹುದು ಎಂಬುದನ್ನು ಮಾರ್ಮಿಕವಾಗಿ ಹೇಳುತ್ತದೆ. ಸಮಾಜದ ಸಿದ್ಧ ಮಾದರಿಗಳನ್ನು ಒಡೆಯುವ, ಮೀರುವ ನೃತ್ಯಗಾರ್ತಿಯ ಉಲ್ಲಂಘನೆಯನ್ನು ಸಮರ್ಥವಾಗಿ ನಿರೂಪಿಸಿರುವ ಕಥೆ ತಾರಾಭಟ್ ಅವರ ಕಲೆಗಾರಿಕೆಗೆ ಸ್ಪಷ್ಟ ನಿದರ್ಶನ.*

## ಮನೆಕೆಲಸ ಮತ್ತು ಹೊರಗಿನ ಕೆಲಸ

*ತೆಲುಗು ಮೂಲ : ರಂಗನಾಯಕಮ್ಮ,* *ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ*

**ಪುಟ : ೧೧೪** **ಬೆಲೆ : ರೂ. ೮೦/–**

*ಲಡಾಯಿ ಪ್ರಕಾಶನ, ಗದಗ*

*ಭಾರತದ ಪ್ರಸಿದ್ಧ ಮಾರ್ಕ್ಸ್‌ವಾದಿ ಬರಹಗಾರರಲ್ಲೊಬ್ಬರಾದ ರಂಗನಾಯಕಮ್ಮ ಅವರು ಮಾರ್ಕ್ಸ್‌ನ 'ಬಂಡವಾಳ' ಕೃತಿಯ ಮೇಲೆ ರಚಿಸಿರುವ ಈ ಕೃತಿಯು ಮಹಿಳಾವಾದವು ಎತ್ತುವ ಹಲವಾರು ಪ್ರಶ್ನೆಗಳನ್ನು ಎತ್ತುತ್ತದೆ. ರಂಗನಾಯಕಮ್ಮ ಕನ್ನಡ ವೈಚಾರಿಕ ಓದುಗರಿಗೆ ಬಹಳ ಹಳಬರು. 'ಮನೆಗೆಲಸ'ಕ್ಕೂ 'ಹೊರಗಿನ ಕೆಲಸ'ಕ್ಕೂ ಇರುವ ಸಂಬಂಧವನ್ನು ಚರ್ಚಿಸುವ ಪ್ರಯತ್ನ ಈ ಕೃತಿಯಲ್ಲಿ ನಡೆದಿದೆ. ಮಹಿಳೆಗೂ ಪುರುಷನಿಗೂ ಇರುವ ಶ್ರಮ ಸಂಬಂಧವನ್ನು ಅರ್ಥಮಾಡಿಕೊಳ್ಳುವ ಗಂಭೀರ ಪ್ರಯತ್ನವನ್ನು ನಡೆಸುತ್ತದೆ. ಶ್ರಮದ ಚರ್ಚೆಯನ್ನು ಮೂಲಭಿತ್ತಿಯಾಗಿಸಿಕೊಂಡಿರುವ ಈ ಕೃತಿಯು ಶ್ರಮಮೌಲ್ಯ, ಶ್ರಮಶಕ್ತಿ ಮೌಲ್ಯ ಮತ್ತು ಶ್ರಮ ಶೋಷಣೆ ಇವುಗಳನ್ನು ಸೈದ್ಧಾಂತಿಕವಾಗಿ ಚರ್ಚಿಸಿದೆ. ಯಾವ ಶ್ರಮಕ್ಕೆ ಮೌಲ್ಯವಿದೆ, ಯಾವ ಶ್ರಮಕ್ಕೆ ಮೌಲ್ಯವಿಲ್ಲ, ಎಲ್ಲಿ ಶ್ರಮದ ಶೋಷಣೆ ನಡೆಯುತ್ತಿದೆ ಎಂಬುದನ್ನು ಅತ್ಯಂತ ಆಳವಾಗಿ ಮತ್ತು ಅಷ್ಟೇ ಗಂಭೀರವಾಗಿ ಚರ್ಚಿಸಿದೆ. ಮನೆಗೆಲಸದಲ್ಲಿ ಹೇಗೆ ಶೋಷಣೆ ನಡೆಯುತ್ತಿದೆಯೋ ಹಾಗೆಯೇ ಮನೆಗೆಲಸದ ಹೊರಗೂ ಶ್ರಮ ಶೋಷಣೆ ನಡೆಯುತ್ತಿದೆ. ಆದರೆ ಮನೆಕೆಲಸದ ಶೋಷಣೆಯನ್ನೇ ಹೊರ ಶೋಷಣೆಯ ಬುಡ ಎಂದು ತಿಳಿಯಲಾಗದು. ಶೋಷಣೆಯ ಬುಡ ಇರುವುದು ಮನೆ ಹೊರಗಿನ ಕೆಲಸದಲ್ಲಿ. ಈ ಶೋಷಣೆಯನ್ನು ಮೊದಲು ಬದಲಾಯಿಸಬೇಕು ಎಂಬುದು ಈ ಕೃತಿಯ ಮುಖ್ಯ ಧ್ವನಿಯಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತವನ್ನು ಅತ್ಯಂತ ಸೊಗಸಾಗಿ ಹೇಳುವ ಕಲೆ ರಂಗನಾಯಕಮ್ಮ ಅವರಿಗೆ ರೂಢಿಯಾಗಿದೆ. ತೆಲುಗು ಸಾಹಿತ್ಯ ಲೋಕದಿಂದ ಹಲವಾರು ವೈಚಾರಿಕ ಗ್ರಂಥಗಳನ್ನು ತಂದಿರುವ ಶ್ರೀ ಸುಜ್ಞಾನಮೂರ್ತಿಯವರು ರಂಗನಾಯಕಮ್ಮನವರ ಈ ಕೃತಿಯನ್ನು ಅಚ್ಚುಕಟ್ಟಾಗಿ ಅನುವಾದಿಸಿಕೊಟ್ಟಿರುವುದು ಸ್ತ್ರೀವಾದಿ ಸಾಹಿತ್ಯ ಸಂಕುಲಕ್ಕೆ ಉತ್ತಮ ಕೊಡುಗೆಯಾಗಿದೆ.*




## ಹದಿಹರೆಯದ ಎಡವಟ್ಟು

*ಡಾ॥ ಸಾರಾ ಅಬೂಬಕ್ಕರ್*

**ಪುಟ : ೧೪೨** **ಬೆಲೆ : ರೂ. ೧೪೦/–**

**ಚಂದ್ರಗಿರಿ ಪ್ರಕಾಶನ,** *ಮಂಗಳೂರು*

*ಕನ್ನಡದ ಪ್ರಸಿದ್ಧ ಕತೆಗಾರ್ತಿ ಮತ್ತು ಕಾದಂಬರಿಗಾರ್ತಿ ಸಾರಾ ಅಬೂಬಕ್ಕರ್ ಅವರ ಎಂಟು ನೀಳ್ಗತೆಗಳ ಸಂಕಲನವಿದು. ಮುಸ್ಲಿಂ ಸಮುದಾಯದ ಹೆಣ್ಣಿನ ನೋವಿನ ಹಲವು ಎಳೆಗಳನ್ನು ಈಗಾಗಲೇ ತಮ್ಮ ಕೃತಿಗಳಲ್ಲಿ ಸಮರ್ಥವಾಗಿ ಬಿಚ್ಚಿಟ್ಟಿರುವ ಸಾರಾ ಅವರು ಈ ಸಂಕಲನದ ಕತೆಗಳಲ್ಲಿ ಅದರ ವ್ಯಾಪ್ತಿಯನ್ನು ಮತ್ತಷ್ಟು ಹಿಗ್ಗಿಸಿದ್ದಾರೆ. ಇಂದಿನ ಸರಕು ಸಂಸ್ಕೃತಿಯಲ್ಲಿ ಕೌಟುಂಬಿಕ ಸಂಬಂಧಗಳು ತಮ್ಮ ಮೌಲ್ಯವನ್ನು ಕಳೆದುಕೊಂಡು ಕ್ರೌರ್ಯಕ್ಕೆ ಎಡೆಮಾಡಿಕೊಡುತ್ತಿರುವುದನ್ನು ಹತಾಶೆ ಮತ್ತು ನೋವಿನಿಂದ ಗಮನಿಸುವ ಲೇಖಕಿ ಅಂತಹ ಪ್ರಕರಣಗಳಿಗೆ ಮತ್ತು ಅನುಭವಗಳಿಗೆ ಸೃಜನಶೀಲ ಸ್ವರೂಪ ಕೊಟ್ಟಿದ್ದಾರೆ. ಗಂಡಂದಿರೇ ಹೆಂಡತಿಯನ್ನು ಮಾರಾಟ ಮಾಡುವುದು, ಅತ್ತೆಯರು ಸೊಸೆಯರ ಮೇಲೆ, ಸೊಸೆಯರು ಅತ್ತೆಯರ ಮೇಲೆ ದೌರ್ಜನ್ಯವೆಸಗುವ ಹಲವಾರು ಜೀವನದ ಮುಖಗಳನ್ನು ಈ ಕಥೆಗಳಲ್ಲಿ ಸಾರಾ ಚಿತ್ರಿಸಿದ್ದಾರೆ. ನಮ್ಮ ಧಾರಾವಾಹಿಗಳು ಬಿತ್ತರಿಸುವ ಮಹಿಳೆಯರ ಮೇಲಿನ ದೌರ್ಜನ್ಯವನ್ನು ಕುರಿತ ಹಲವಾರು ನೈಜ ಘಟನೆಗಳು ಇವರ ಕಥೆಗಳಿಗೆ ಸ್ಫೂರ್ತಿಯಾಗಿವೆ. ಕಥಾಸಂಕಲನದ ಶೀರ್ಷಿಕೆಯು ಸೂಚಿಸುವಂತೆ ಹದಿಹರೆಯದ ವಯಸ್ಸಿನಲ್ಲಿರುವ ಹೆಣ್ಣುಮಕ್ಕಳು ತಮ್ಮ ಬದುಕಿನಲ್ಲಿ ಎದುರಿಸುವ ಆಘಾತಕರ ಸಂಗತಿಗಳನ್ನು ಕೇಂದ್ರೀಕರಿಸಿದ ಕತೆಗಳೇ ಇಲ್ಲಿ ಹೆಚ್ಚಿವೆ. ಅತ್ಯಾಚಾರ, ಮಾನವ ಸಾಗಣೆ, ಬಾಲ್ಯ ವಿವಾಹ, ಅಸಮ ವಿವಾಹದಂತಹ ಸಮಸ್ಯೆಗಳನ್ನು ಇಲ್ಲಿ ತೋರಿಸಿದ್ದಾರೆ. ಇಲ್ಲಿನ ಸಮಸ್ಯೆಗಳ ಪರಿಹಾರಕ್ಕೆ ಅವರು ಪೊಲೀಸ್ ವ್ಯವಸ್ಥೆಯನ್ನು ನಂಬುವುದು ಅವರ ಪ್ರಜಾಸತ್ತಾತ್ಮಕ ಮೌಲ್ಯಗಳ ನಂಬುಗೆಯ ಭಾಗವಾಗಿ ಮೂಡಿಬಂದಿದೆ.*

## ನಿರಿಗೆ

*ಸಬಿತಾ ಬನ್ನಾಡಿ*

**ಪುಟ : ೯೬** **ಬೆಲೆ : ರೂ. ೮೦/–**

**ಕವಿ ಪ್ರಕಾಶನ,** ಕವಲಕ್ಕಿ, ಹೊನ್ನಾವರ




*ಕನ್ನಡ ಸಾಹಿತ್ಯದ ಅಧ್ಯಾಪಕಿಯಾಗಿ, ವಿಮರ್ಶಕಿಯಾಗಿ, ಅಂಕಣಕಾರ್ತಿಯಾಗಿ, ಕವಿಯಾಗಿ ಈಗಾಗಲೇ ಹೆಸರುಮಾಡಿರುವ ಡಾ॥ ಸಬಿತಾ ಬನ್ನಾಡಿಯವರ ಮೊದಲ ಕವನಸಂಕಲನವಿದು. ಇದರಲ್ಲಿ ಒಟ್ಟಿಗೆ ನಲವತ್ತೆಂಟು ಕವನಗಳಿವೆ. ಡಾ॥ ಕೆ. ವಿ. ನಾರಾಯಣ ಅವರು ಗುರುತಿಸಿರುವಂತೆ ಈ ಸಂಕಲನದಲ್ಲಿ ಎರಡು ಬಗೆಯ ಕವಿತೆಗಳಿವೆ: ಸುತ್ತಣ ಜಗತ್ತಿಗೆ ಮಿಡಿತ ತೋರುವ ಕವಿತೆಗಳು ಮತ್ತೊಂದು ತಮ್ಮ ಒಳಜಗತ್ತಿನ ಬೇರುಗಳನ್ನು ಬಗೆಯ ಹೊರಡುವ ಕವಿತೆಗಳು ಇನ್ನೊಂದು ಬಗೆಯವು. 'ಕ್ರೌರ್ಯದ ವಿಳಾಸ' ಕವನವನ್ನು ಮೊದಲ ಗುಂಪಿನ ಕವಿತೆಗೆ ಹೋಲಿಸುವುದಾದರೆ, "ಸಿಕ್ಕರೂ ಸಿಗಬಹುದು ತಂಪು ಕಂಪುಗಳ/ ಖಡ್ಗ ಕವಚವ ಧರಿಸಿ ಅಲ್ಲೇ ಇಲ್ಲೇ/ ನಿಮ್ಮ ಬಳಿಯಲ್ಲೇ ನಿಮ್ಮ ಇದಿರಲ್ಲೇ/ ಕಾಲ ಮೇಲೆ ಕಾಲು ಹಾಕಿ ಹೂಮಾಲೆ ಹಿಡಿದಿರಬಹುದು"– ಈ ಸಾಲುಗಳು ಅತ್ಯಂತ ಸಮರ್ಥವಾಗಿ ಕ್ರೌರ್ಯದ ವಿಳಾಸವನ್ನು ಹಿಡಿದಿಡುತ್ತದೆ. 'ನನಗೆ ನನ್ನದೇ ಕೋಣೆ' ಎರಡನೆಯ ಬಗೆಯದು. "ಇದು? ಇದು ನನ್ನದೇ ಕೋಣೆ/ A Room Of One's own / ನನ್ನ ಕೋಣೆಯಿದು ಮನದ/ ಕೋಟಲೆಯ ತೆರೆವ ತೆರಪಿದು/ ಓದು ನನ್ನದು ಹಾಡು ನನ್ನದು/ ಜಗದ ಜಂಜಡದ ಜಗಲಿ ನನ್ನದು/ ಶಕ್ತಿ ಸಂಚಯಕೆ ಸಂಗಾತಿ ನನ್ನದು/ ಕೋಣೆಯಿಲ್ಲದಾ ಮನೆಯ ಕಟ್ಟುವುದಕೆ/ ಕನಸು ಕಾಣುವಾ ತಾವು ನನ್ನದು" – ಈ ಸಾಲುಗಳು ಕವಿಯತ್ರಿಯ ಆತ್ಮಶೋಧನೆಯ ಪ್ರಯತ್ನವೂ ಆಗಿರುವುದನ್ನು ಇಲ್ಲಿ ಕಾಣಬಹುದು. ಮೌಲ್ಯ ವ್ಯವಸ್ಥೆಯ ಕನ್ನಡಕವನ್ನು ಪಕ್ಕಕ್ಕೆ ತೆಗೆದಿಟ್ಟು ಹೆಣ್ಣಿಗೆ ಎದುರಾಗುವ ತವಕ, ತಲ್ಲಣಗಳು, ಸಂಭ್ರಮ ವಿಷಾದಗಳನ್ನು ಇಲ್ಲಿನ ಕವನಗಳು ಧ್ವನಿಸುತ್ತವೆ.*

– **ಎನ್. ಆಶಾ,** ಗವಿಪುರ, ಬೆಂಗಳೂರು

# ಕರುಳಬಳ್ಳಿಯ ಕತ್ತರಿಸುವ ಕೋಮುವಾದ

ಇವೆಲ್ಲದಕ್ಕೂ ಮೂಲಕಾರಣ ಧರ್ಮವೆಂಬ ಅಮಲು, ಕೋಮುವಾದ ಎಂಬ ವಿಷಬೀಜ. ತಾನು ನಂಬಿರುವ ಸಿದ್ಧಾಂತಗಳೇ ಶ್ರೇಷ್ಠ ಎಂಬ ಭಾವವು ಶಾಂತಿ ಸೌಹಾರ್ದವನ್ನು ವಿಶ್ವಕ್ಕೇ ಸಾರಿರುವ ಭಾರತದಂತಹ ರಾಷ್ಟ್ರದ ಜನರ ನೆಮ್ಮದಿಯನ್ನು ಹಾಳುಗೆಡವುತ್ತಿದೆ. ವಿಶ್ವದಾದ್ಯಂತ ನಡೆದ ಧರ್ಮಯುದ್ಧಗಳು ನಮ್ಮ ದೇಶಕ್ಕೆ ಪಾಠವಾಗಬೇಕಿತ್ತು. ಆದರೆ ದುರದೃಷ್ಟವಶಾತ್ ಪ್ರಪಂಚ ಇಷ್ಟೆಲ್ಲ ಮುಂದುವರಿದು ತಂತ್ರಜ್ಞಾನ ಯುಗದ ತುತ್ತತುದಿ ತಲುಪಿರುವ ಈ ಸಂದರ್ಭದಲ್ಲಿ ನಾವು ಧರ್ಮದ ನಶೆ ತಲೆಗೇರಿಸಿಕೊಂಡು ಹಿಮ್ಮುಖ ಚಲನೆ ಶುರುಮಾಡಿದ್ದೇವೆ.

**ಪಲ್ಲವಿ ಇಡೂರ**

**ಜೊ**ಲಾಂಟಾ ಕೃತಿಯೊಂದಿಗಿನ ನನ್ನ ಪಯಣ, ಪ್ರಭಾವ ಬೀರಿದ ಎರಡನೇ ಮಹಾಯುದ್ಧದ ಕ್ರೂರತೆ ಬಿಂಬಿಸುವ ಕೃತಿ ಮತ್ತು ಇಂದಿನ ಭಾರತದಲ್ಲಿ ಕೋಮುವಾದ ಮತ್ತು ಪರಿಣಾಮ..

ಧರ್ಮಾಂಧರ ಮೌಢ್ಯಕ್ಕೆ ಕೋಟಿಗಟ್ಟಲೆ ಸಂಖ್ಯೆಯಲ್ಲಿ ಅಮಾಯಕರ ಜೀವಗಳನ್ನು ಬಲಿ ತೆಗೆದುಕೊಂಡ ಕ್ರೂರ ಘಟನೆಯೇ ಜಗತ್ತು ಕಂಡ ಎರಡನೇ ಮಹಾಯುದ್ಧ. ಈ ಎರಡನೇ ಮಹಾಯುದ್ಧ ಹಿಟ್ಲರನ ಕ್ರೌರ್ಯಕ್ಕೆ ಕುಖ್ಯಾತಿಯಾಗಿದೆ. ಹಿಟ್ಲರ್ ಎನ್ನುವ ಕುಳ್ಳಗಿನ ವ್ಯಕ್ತಿಯೊಬ್ಬನ ಧರ್ಮಾಂಧತೆಯೆನ್ನುವುದು ರಾಷ್ಟ್ರವ್ಯಾಪಿಯಾಗಿ ಯುರೋಪಿನಾದ್ಯಂತ ತಲೆತಲಾಂತರದಿಂದ ಬದುಕು ಕಟ್ಟಿಕೊಂಡಿದ್ದ ಲಕ್ಷಾಂತರ ಯಹೂದಿಗಳ ಅಸ್ತಿತ್ವವನ್ನೇ ಇಲ್ಲವಾಗಿಸಿಬಿಟ್ಟಿತು. ಇಂಥ ನಾಝಿಗಳ ಆಕ್ರಮಣದಿಂದ ತತ್ತರಿಸಿದ್ದ ಪೋಲೆಂಡ್ ದೇಶದ ಯಹೂದಿಗಳು ಸಾವಿನ ಮನೆ ಕದ ತಟ್ಟುತ್ತಿದ್ದಾಗ "ಮಾನವೀಯತೆಯೆ ಧರ್ಮ"ವೆಂದು ನಂಬಿದ್ದ ಅನೇಕ ಜನ ಕ್ರಿಶ್ಚಿಯನ್ನರು ಈ ಯಹೂದಿಗಳ ಪರವಾಗಿ ಗೌಪ್ಯವಾಗಿ ಕೆಲಸ ಮಾಡುತ್ತಾ ಸಾಧ್ಯವಾದಷ್ಟು ಜನರನ್ನು ಬದುಕಿಸಲು ತಮ್ಮ ಜೀವನವನ್ನೇ ಪಣಕ್ಕಿಟ್ಟು ಹೋರಾಡಿದರು. ಅಂಥವರಲ್ಲೊಬ್ಬಳು ಇರೇನಾ ಸೆಂಡ್ಲರ್. ಆಕೆ ತನ್ನದೇ ತಂಡ ಕಟ್ಟಿಕೊಂಡು ಹಿಟ್ಲರನ ನಾಝಿ ಸೈನ್ಯದ ಕಣ್ಣುತಪ್ಪಿಸಿ ರಕ್ಷಿಸಿದ್ದು ಬರೋಬ್ಬರಿ ೨೫೦೦ಕ್ಕೂ ಹೆಚ್ಚು ಮಕ್ಕಳನ್ನು.

ಇಂಥದ್ದೊಂದು ಕ್ಷಣಕ್ಷಣಕ್ಕೂ ಬೆಚ್ಚಿಬೀಳಿಸುವ ವಿಷಯಗಳನ್ನೊಳಗೊಂಡ ಇರೇನಾ ಸೆಂಡ್ಲರ್ ಜೀವನವನ್ನು ಪುಸ್ತಕವಾಗಿಸಿ ಕನ್ನಡ ಸಾಹಿತ್ಯ ಲೋಕಕ್ಕೆ ಪರಿಚಯಿಸಬೇಕೆಂದು ನಿರ್ಧರಿಸಿದವಳು ಎರಡನೇ ಮಹಾಯುದ್ಧದ ವಿವರಗಳನ್ನು ಹಾಗೂ ನಾಝಿಗಳ ಕ್ರೂರತೆಯ ವಿಷಯಗಳನ್ನು ಕಲೆಹಾಕತೊಡಗಿದೆ. ಒಂದೊಂದೆ ಪುಸ್ತಕವನ್ನು ಓದುತ್ತಿದ್ದವಳಿಗೆ ಅದೇನೊ ಹೇಳಿಕೊಳ್ಳಲಾರದಂತಹ ವೇದನೆ. ನೋಡುತ್ತಿದ್ದ ಡಾಕ್ಯುಮೆಂಟರಿಗಳು, ಹುಡುಕುತ್ತಿದ್ದ ಫೋಟೊಗಳು ನನ್ನನ್ನು ಬೇರೆಯದೇ ಕ್ರೌರ್ಯಗಳ ಲೋಕಕ್ಕೆ ಕರೆದೊಯ್ದು ಬಿಟ್ಟಿತು. ಮನಸ್ಸು ತನ್ನಿಂದ ತಾನೆ ಪ್ರತಿಯೊಂದನ್ನೂ ಊಹಿಸಿಕೊಂಡು ಗಾಬರಿಗೊಳ್ಳುತ್ತಿತ್ತು. ಬರೆಯಲು ಓದಲು ಹೆಚ್ಚಾಗಿ ಏಕಾಂತ ಬಯಸುತ್ತಿದ್ದರಿಂದ ಸರಿರಾತ್ರಿಯವರೆಗೂ ಬರೆಯುತ್ತಾ ಓದುತ್ತಾ ಕುಳಿತಿದ್ದವಳು ಹೋಗಿ ಮಲಗುವಾಗ ಪಕ್ಕದಲ್ಲಿ ಮಲಗಿರುತ್ತಿದ್ದ ಮಗನನ್ನು ಗಟ್ಟಿಯಾಗಿ ತಬ್ಬಿ ಮಲಗುತ್ತಿದ್ದೆ. ನಾಝಿಗಳ ಕ್ರೌರ್ಯದಲ್ಲಿ ಮಕ್ಕಳು ನಲುಗಿದ ಪರಿ ನನ್ನನ್ನು ಒಳಗೊಳಗೇ ಸುಡುತ್ತಿತ್ತು. ಒಬ್ಬ ತಾಯಿಯಾಗಿ ನಡೆದುಹೋದ ಆ ಘಟನೆಗಳನ್ನು ಓದುವಾಗ ಹುಟ್ಟುತ್ತಿದ್ದ ತಳಮಳವೇ ಅಂಥದ್ದಾಗಿತ್ತು. ಆ



ಅಭದ್ರತೆಯ ಭಾವ ಈಗ ಇಷ್ಟು ವರ್ಷಗಳ ನಂತರ ನಮ್ಮನ್ನು ಕಾಡುತ್ತದೆಯೆಂದಾದರೆ ಅದನ್ನು ಅನುಭವಿಸಿದ ತಾಯಂದಿರ ಪರಿಸ್ಥಿತಿ ಎಂಥದ್ದಿದ್ದಿರಬೇಕು! ಹಸುಗೂಸುಗಳು ನಮ್ಮಂತೆ ಕ್ರೂರ ಶಿಕ್ಷೆಗೆ ಗುರಿಯಾಗಿ ಸಾಯುವುದನ್ನು ತಪ್ಪಿಸಿ ಅವುಗಳ ಜೀವ ಉಳಿಸಬೇಕೆನ್ನುವ ಏಕೈಕ ಉದ್ದೇಶದಿಂದ ತಮ್ಮ ಕರುಳಕುಡಿಗಳನ್ನು ಕಂಡು ಕೇಳರಿಯದ ಇರೇನಾಳಂತಹ ಅದೆಷ್ಟೋ ಹೃದಯವಂತರ ಕೈಗೆ ಒಪ್ಪಿಸಬೇಕಾದ ತಂದೆ ತಾಯಿಯರ ಅಸಹಾಯಕತೆ ಒಬ್ಬ ತಾಯಿಯಾಗಿ ನನ್ನನ್ನು ಅತೀವವಾಗಿ ಹಿಂಸಿಸುತ್ತಿತ್ತು. ಪ್ರಪಂಚವರಿಯದ ಹಸುಗೂಸುಗಳು ತಂದೆ ತಾಯಿಯ ಆಸರೆ ಆಗಲಿ ಅಲ್ಲೆಲ್ಲೊ ಅನಾಥರಾಗಿ ದಿಕ್ಕುದೆಸೆಯಿಲ್ಲದೆ ಬದುಕುವ ಪರಿಸ್ಥಿತಿ ನಿರ್ಮಾಣ ಮಾಡಿದ ಕೋಮುವಾದವೆಂಬ ವಿಷದ ಮೇಲೆ ಅಸಹ್ಯ ಹುಟ್ಟಿಸಿಬಿಟ್ಟಿತು.

ಜೊಲಾಂಟಾ ಬರೆಯುವ ಮುನ್ನ ಮಾಹಿತಿಗಾಗಿ ಬಹಳಷ್ಟು ಪುಸ್ತಕಗಳು, ಡಾಕ್ಯುಮೆಂಟರಿಗಳನ್ನು ಹುಡುಕುತ್ತಿದ್ದವಳ ಕಣ್ಣಿಗೆ ಬಿದ್ದಿದ್ದು ಎಲೀ ವೀಸೆಲ್ ಎನ್ನುವ ನೊಬೆಲ್ ಪುರಸ್ಕೃತ ಲೇಖಕ ಬರೆದ ಆತನ ಸ್ವಂತ ಅನುಭವ ಕಥನ "ನೈಟ್." ಕುತೂಹಲಕ್ಕೆಂದು ಪುಸ್ತಕ ಓದಲು ಶುರುಮಾಡಿದವಳಿಗೆ ಕಾಣಿಸಿದ್ದು ಬರೀ ನರಕಯಾತನೆ! ರೊಮೇನಿಯಾದ ಸಿಗೆಟ್ ಎನ್ನುವ ಪಟ್ಟಣದಲ್ಲಿ ವ್ಯಾಪಾರಿ ದಂಪತಿಗಳ ಮಗನಾಗಿ ಅಕ್ಕ ತಂಗಿಯರನ್ನು ಬೆನ್ನಿಗಿಟ್ಟುಕೊಂಡು ಬೆಳೆದ ಹುಡುಗ ಎಲೀ ವೀಸೆಲ್. ಆಗ ಆ ಪಟ್ಟಣದಲ್ಲಿದ್ದ ಯಹೂದಿಗಳ ಜನಸಂಖ್ಯೆ ಸುಮಾರು ೨೦೦೦೦. ೧೯೪೪ರ ಮಾರ್ಚ್ ತಿಂಗಳಿನಲ್ಲಿ ಹಿಟ್ಲರನ ನಾಝಿ ಪಡೆ ಆಕ್ರಮಣ ಮಾಡುವವರೆಗೂ ಸುಖವಾಗಿ ಸಾಗುತ್ತಿದ್ದ ಜೀವನ ಇದ್ದಕ್ಕಿದ್ದ ಹಾಗೆ ದಿಕ್ಕೆಟ್ಟು ಚೂರುಚೂರಾಗಿ ಹೋಯಿತು. ಅಲ್ಲಿಂದ ಆಶ್ವಿಟ್ಸ್‌ನ ಕಾನ್ಸಂಟ್ರೇಶನ್ ಕ್ಯಾಂಪ್‌ಗೆ ಅವರನ್ನೆಲ್ಲ ತಳ್ಳಿದ ಮೇಲೆ ಆತ ನೋಡಿದ್ದು ದಿನನಿತ್ಯದ ಮಾರಣಹೋಮ...

ಕೆಲಸ ಮಾಡಲು ಶಕ್ತಿಯಿದ್ದ ಹದಿವಯಸ್ಸಿನ ಯುವಕ ಯುವತಿಯರು ಉಪಯೋಗಕ್ಕೆ ಬರುತ್ತಾರೆ ಎಂದು ಕೂಲಿಗಳಾಗಿ ಉಪಯೋಗಿಸಿಕೊಂಡ ನಾಝಿ ಸೈನ್ಯ ಆ ಮೂಲಕ ಅವರುಗಳ ಬದುಕುಳಿಯುವ ಸಣ್ಣ ಆಸೆಯನ್ನು ಜೀವಂತವಾಗಿರಿಸಿದರೆ, ಕೈಲಾಗದ ಹೆಂಗಸರು, ಮಕ್ಕಳು, ಮುದುಕರನ್ನು ತಳ್ಳುತ್ತಿದ್ದುದು ಕಾನ್ಸಂಟ್ರೇಶನ್ ಕ್ಯಾಂಪಿನ ದ್ವಾರದಲ್ಲಿ ಬಲಕ್ಕಿದ್ದ ಉರಿಯುತ್ತಿದ್ದ ಗ್ಯಾಸ್ ಚೇಂಬರಿನೆಡೆಗೆ. ಆ ರೀತಿ ತನ್ನ ತಾಯಿ ಮತ್ತು ಚಿಕ್ಕ ತಂಗಿ ಜೀವಂತವಾಗಿ ದಹಿಸಿ ಹೋಗಿದ್ದಲ್ಲದೆ ಅಲ್ಲಿದ್ದ ಅಷ್ಟೂ ದಿನ ಬದುಕಲೇಬೇಕೆಂಬ ಹಟಕ್ಕೆ ಜೊತೆಯಾಗಿದ್ದ ತಂದೆಯೂ ಕೊನೆಯ ಗಳಿಗೆಯಲ್ಲಿ ಸೋತು ಸಾವಿಗೆ ಶರಣಾಗಿದ್ದು ಬದುಕಿನಲ್ಲಿ ಎಂದೂ ಮರೆಯದ ಪ್ರತಿ ಕ್ಷಣ ಕಾಡುವ ದುಃಸ್ವಪ್ನವಾಗಿ ಹೋಯಿತು, ಎಲೀ ವೀಸೆಲ್ ತಾನು ಅನುಭವಿಸಿದ ಎಲ್ಲ ನರಕಯಾತನೆಗಳನ್ನು ಮತ್ತು ಆಶ್ವಿಟ್ಸ್‌ನ ಕಾನ್ಸಂಟ್ರೇಶನ್ ಕ್ಯಾಂಪಿನ ಒಳಗೆ ನಡೆಯುತ್ತಿದ್ದ ಪ್ರತಿದಿನದ ಭಯಾನಕ ಘಟನೆಗಳನ್ನು 'ನೈಟ್'ನಲ್ಲಿ ಎಳೆಎಳೆಯಾಗಿ ಬಿಚ್ಚಿಟ್ಟಿದ್ದಾರೆ. ಓದಿದ ಪ್ರತಿಯೊಬ್ಬರೂ ಹಿಟ್ಲರನ ಕ್ರೌರ್ಯಕ್ಕೆ ಬೆಚ್ಚಿ ಬೀಳುವುದು ದಿಟ. ಫ್ಯಾಸಿಸಂ ಜಗತ್ತಿಗೆ ಉಳಿಸಿಹೋದ ಇಷ್ಟು ಕರಾಳ ನೆನಪುಗಳ ಬಗ್ಗೆ ತಿಳಿದೂ ಕೂಡ ಫ್ಯಾಸಿಸಂ ಅನ್ನು ಬೆಂಬಲಿಸುವ ಮನಸ್ಥಿತಿ ಮನುಷ್ಯರಿಗೆ ಬರಲಾರದು!!

ಆದರೇನು ಮಾಡುವುದು, ಎರಡನೇ ಮಹಾಯುದ್ಧದಿಂದ ಇಲ್ಲಿಯವರೆಗೆ ಪ್ರಪಂಚದ ನಾನಾ ಭಾಗಗಳಲ್ಲಿ ಧರ್ಮವೆಂಬ ಅಫೀಮು ತಲೆಗೇರಿಸಿಕೊಂಡ ವಿವಿಧ ಸಂಘಟನೆ, ಪಕ್ಷಗಳ ಕೈಯಲ್ಲಿ ಸತ್ತವರಿಗೆ ಲೆಕ್ಕವೇ ಇಲ್ಲ. ಜರ್ಮನಿಯಿಂದ ಹಿಡಿದು, ಇಸ್ರೇಲ್, ಅರಬ್ ರಾಷ್ಟ್ರಗಳಾದ ಸಿರಿಯಾ, ಇರಾಕ್, ಇರಾನ್, ಅಫ್ಘಾನಿಸ್ತಾನ್, ಯುರೋಪಿನ ಹಲವಾರು ದೇಶಗಳು, ಅಷ್ಟೇ ಯಾಕೆ ನಮ್ಮೊಂದಿಗೆ ಗಡಿಯನ್ನು ಹಂಚಿಕೊಂಡ ನೆರೆಯ ದೇಶಗಳಾದ ಪಾಕಿಸ್ತಾನ, ಬಾಂಗ್ಲಾ, ಬರ್ಮಾಗಳಲ್ಲೂ ಕೂಡ ಅದೆಷ್ಟು ಸಂಖ್ಯೆಯಲ್ಲಿ ಜನ ಬಲಿಯಾಗಿದ್ದಾರೆಂದರೆ ಊಹಿಸಿಕೊಳ್ಳಲೂ ಭಯವಾಗುತ್ತದೆ.

ನಮ್ಮದು ಗಲ್ಲಿಗೊಂದು, ಮನೆಮನೆಗಳಿಗೊಂದು ಜಾತಿ, ಧರ್ಮಗಳಿರುವ ಬಹುಸಂಸ್ಕೃತಿಯ ದೇಶ. ಬಹಳ ಬಲಿಷ್ಠವಾದ ಜಾತ್ಯತೀತ ತತ್ವಗಳನ್ನು ಪ್ರತಿಪಾದಿಸುವ ಅತ್ಯಂತ ಸುಂದರವಾದ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವ ಸಂವಿಧಾನವನ್ನು ಹೊಂದಿರುವುದರ ಪರಿಣಾಮವಾಗಿ ಧರ್ಮಾಂಧತೆ

## ಎರಡು ಆನೆಗಳ...



ಎರಡು ಆನೆಗಳ ನಡುವಿನ ಹೊಡೆದಾಟ
ಬರೆ ಆ ಆನೆಗಳ ಸಮುದಾಯಕ್ಕೆ
ಸಂಬಂಧಪಟ್ಟ ವಿಷಯವಲ್ಲ.

ಎರಡು ಆನೆಗಳ ಹೊಡೆದಾಟದಲ್ಲಿ
ತುಳಿತಕ್ಕೆ ಒಳಗಾವುದು
ಹುಲ್ಲು.
ಹುಲ್ಲುಗಳಿಗೂ ಆನೆಯ ಸಮೂಹ
ಆನೆಯ ಪರಿವಾರಗಳಿಗೂ
ಪರಸ್ಪರ ಯಾವುದೇ ಸಂಬಂಧವಿಲ್ಲ.

ಕಾಡಿನಿಂದ ಹಸಿದ ಹೊಟ್ಟೆಯಲ್ಲೇ
ಮರಳುತ್ತದೆ ದನ
ಮನೆಯಲ್ಲಿ ಹಸಿದ ಹೊಟ್ಟೆಯಲ್ಲೇ
ಮಲಗುತ್ತದೆ ಕಂದ.

ನಾಲ್ಕು ಹಲ್ಲು ಎಂಟು ಕಾಲುಗಳು
ಕಾರಣ
ಅತಿ ಹೆಚ್ಚು
ಬಾಧೆಗೊಳಗಾವುದು
ಮಗುವಿನ ನಿದ್ದೆ.
ಅತಿ ಹೆಚ್ಚು ಅಸುರಕ್ಷಿತವಾಗುವುದು
ನಮ್ಮ ಭವಿಷ್ಯ.

ಎರಡು ಆನೆಗಳ ಯುದ್ಧದಲ್ಲಿ
ಮುರಿದು ಬೀಳುವುದು
ನೆಲಕ್ಕುರುಳುವುದು
ಮರಗಳು.
ಅತಿ ಹೆಚ್ಚು ಸಾವಿಗೀಡಾಗುವುದು
ಪಕ್ಷಿಗಳು.
ಅವುಗಳಿಗೆ ಆನೆಯ ಹಿಂಡಿನೊಂದಿಗೆ
ಯಾವುದೇ ಕೊಡುಕೊಳು ಸಂಬಂಧವಿಲ್ಲ.

ಎರಡು ಆನೆಗಳ ಹೊಡೆದಾಟವನ್ನು
ಆನೆಗಳಿಗಿಂತ ಹೆಚ್ಚು
ಸಹಿಸಿಕೊಳ್ಳಬೇಕು
ಕಾಡು.

ಈ ಹೊಡೆದಾಟದಲ್ಲಿ
ಹುಚ್ಚೆದ್ದ ಆನೆಗಳ ಮೈಮೇಲಾಗುವ
ಗಾಯಕ್ಕಿಂತ ಹೆಚ್ಚು
ಗಾಯಗಳಾಗುತ್ತವೆ
ಕಾಡು ಮತ್ತು ಸಮಯದ
ಎದೆಯ ಮೇಲೆ.

ಹೇಗಾದರೂ ಮಾಡಿ
ಎರಡು ಆನೆಗಳ
ಹೊಡೆದಾಟವನ್ನು
ನಿಲ್ಲಿಸಬೇಕು.

**ಉದಯ್ ಪ್ರಕಾಶ್**
ಕನ್ನಡಾನುವಾದ : ಬಿ. ಎ. ಸಂವರ್ತ (ಸಾಹಿಲ್)
'ಸತ್ಯಾಶ್ರೀ' ಎಂಐಜಿ, ೪ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ
ಕೆಹೆಚ್‌ಬಿ ಕಾಲೋನಿ, ಹುಡ್ಕೋ, ಮಣಿಪಾಲ್ – ೫೭೬ ೧೦೪

ನಮ್ಮ ದೇಶದಲ್ಲಿ ಬೇರೆ ದೇಶಗಳಷ್ಟು ಪರಿಣಾಮ ಬೀರಿರಲಿಲ್ಲ. ಆದರೆ ಸ್ವಾತಂತ್ರ್ಯ ಸಮಯದಲ್ಲಿ ಸಣ್ಣ ರೂಪದಲ್ಲಿ ಶುರುವಾದ ಹಿಂದುತ್ವದ ಕಲ್ಪನೆ ತಕ್ಕಮಟ್ಟಿಗೆ ಬೆಳೆದಿದ್ದು ಸುಮಾರು ೨೫ ವರ್ಷಗಳ ಹಿಂದೆ ಭುಗಿಲೆದ್ದ ರಾಮಜನ್ಮಭೂಮಿ-ಬಾಬರಿ ಮಸೀದಿ ವಿವಾದದಿಂದ. ಅಲ್ಲಿಯವರೆಗೆ ಸೌಹಾರ್ದತೆಯಿಂದ ಕೂಡಿ ಬಾಳುತ್ತಿದ್ದ ದೇಶದ ಯುವಕರ ತಲೆಯೊಳಗೆ ಧರ್ಮವೆಂಬ ವಿಷವನ್ನು ತುಂಬಿತು ಆ ಘಟನೆ. ಆದರೆ ೨೦೧೪ರ ಸಾರ್ವತ್ರಿಕ ಚುನಾವಣೆಯ ಸಂದರ್ಭದಿಂದ ಈ ವಿಷಯದಲ್ಲಿ ದೇಶದ ಪರಿಸ್ಥಿತಿಯು ಪರಿಣಾಮಕಾರಿಯಾಗಿಯೇ ಬದಲಾಯಿತೆನ್ನಬಹುದು. ಆರ್.ಎಸ್.ಎಸ್. ಎನ್ನುವ ಹಿಂದೂ ಧರ್ಮ ಪ್ರಚಾರಕವೆಂಬ ಸಂಸ್ಥೆಯೊಂದನ್ನು ಬೆನ್ನಿಗಿಟ್ಟುಕೊಂಡು ಬೆಳೆದ ಪಕ್ಷ ಬಿಜೆಪಿ. ಈ ಪಕ್ಷವು ದೇಶದ ಅಧಿಕಾರದ ಚುಕ್ಕಾಣಿ ಹಿಡಿದ ಮೇಲೆ ಹಿಂದುತ್ವವನ್ನು ಅತಿಯಾಗಿ ಅನುಷ್ಠಾನಕ್ಕೆ ತರಲು ಮತ್ತು ಜನರ ಮೇಲೆ ಹೇರಲು ವಿವಿಧ ಸಂಘಟನೆಗಳು ಚುರುಕಾದವು. ಇದಕ್ಕಿಂತ ಮೊದಲು ಹಿಂದೂ ಮತ್ತು ಮುಸಲ್ಮಾನರ ನಡುವೆ ಕೆಲ ಸಣ್ಣಪುಟ್ಟ ಕಾರಣಗಳಿಗೆ ಧರ್ಮದ ವಿಚಾರವಾಗಿ ಗಲಭೆಗಳು ನಡೆಯುತ್ತಿದ್ದವು. ರಾಮಜನ್ಮಭೂಮಿ ವಿವಾದವಂತೂ ದೇಶಾದ್ಯಂತ ಹಿಂದೂ ಮುಸಲ್ಮಾನರ ನಡುವೆ ಒಂದು ರೀತಿಯ ದುಗುಡದ ವಾತಾವರಣವನ್ನೇ ಸೃಷ್ಟಿ ಮಾಡಿಬಿಟ್ಟಿದೆ. ಈಗ ಬಿಜೆಪಿ ಅಧಿಕಾರಕ್ಕೆ ಬಂದ ಮೇಲೆ ದೇಶದಲ್ಲಿ ರಾಜಾರೋಷವಾಗಿ ಹಿಂದೂ ಧರ್ಮದ ಹೆಸರಿನಲ್ಲಿ ಕಟ್ಟುಪಾಡುಗಳ ಹೇರಿಕೆ ನಡೆಯುತ್ತಿದೆ. ರಾಜಕೀಯ ಲಾಭಕ್ಕಾಗಿ ಮನುಷ್ಯರ ಜೀವಕ್ಕಿಂತ ಹಸುಗಳ ಜೀವಕ್ಕೆ ಬೆಲೆ ಜಾಸ್ತಿಯಾಗಿದೆ. ಹಸುವೊಂದು ರಾಜಕೀಯ ವಿಷಯವಾಗಿಬಿಟ್ಟಿದೆ. ಕಣ್ಣು ಕಿವಿ ಮುಚ್ಚಿ ಮಾಡಿದ್ದೆಲ್ಲ ವನ್ನೂ, ಪ್ರಜೆಗಳ ಮೇಲೆ ಹೇರಿದ್ದೆಲ್ಲವನ್ನೂ ಒಪ್ಪಿ ಕೊಂಡರೆ ಸರಿ, ವಿರೋಧಿಸುತ್ತೀರೊ ಅನುಭವಿಸಲು ಸಿದ್ಧರಾಗಿ ಅನ್ನುವಂತಿದೆ ಪರಿಸ್ಥಿತಿ. ಅದರ ಪರಿಣಾಮವೇ ವಿರೋಧಿಸುತ್ತಿದ್ದ ಸಾಲು ಸಾಲು ಬುದ್ಧಿಜೀವಿಗಳ, ಚಿಂತಕರ ಹತ್ಯೆ! ಕೊಲ್ಲುವ ಮೂಲಕ ಭಯವನ್ನು ಹುಟ್ಟುಹಾಕಿ ಮಾತಾಡುವ ಧ್ವನಿಯನ್ನೇ ಹತ್ತಿಕ್ಕುವ ವ್ಯವಸ್ಥಿತ ಹುನ್ನಾರವು ಸದ್ದಿಲ್ಲದೆ ನಡೆಯುತ್ತಿದೆ. ಅಷ್ಟೇ ಏಕೆ, ಹಿಂದೂ ಹೆಣ್ಣುಮಕ್ಕಳ ಮೇಲೆ ಇಲ್ಲದ ಕಟ್ಟುಪಾಡುಗಳನ್ನು ಹೇರಿ ಆಕೆಯನ್ನು ಮತ್ತಷ್ಟು ಅಧೀರಳಾಗಿಸುವ ಕೆಲಸವೂ ಧರ್ಮ ರಕ್ಷಕ ರೆನ್ನಿಸಿಕೊಂಡವರಿಂದ ನಡೆಯುತ್ತಿದೆ. ಹಿಂದುಗಳಲ್ಲ ದಿದ್ದವರನ್ನು ಕಟ್ಟುಪಾಡುಗೊಳಪಡಿಸಿ ಹಿಡಿತದಲ್ಲಿರಿಸಿ ಕೊಳ್ಳುವ ಕೆಲಸವೂ ಸಾಗಿದೆ. ಇದನ್ನೆಲ್ಲ ವಿರೋಧಿಸಿ ದವರಿಗೆ 'ದೇಶದ್ರೋಹಿ'ಗಳ ಪಟ್ಟ ಕಟ್ಟಿಟ್ಟಿದ್ದು.

ಈಗ ಈ ದೇಶದಲ್ಲಿ ಪ್ರತಿಪಾದಿಸಲು ಹೊರಟ ಹಿಂದೂ ರಾಷ್ಟ್ರ ಪರಿಕಲ್ಪನೆಯು ಹಿಟ್ಲರನ 'ಆರ್ಯನ್' ಸಮಾಜದ ಪರಿಕಲ್ಪನೆಗಿಂತ ಹೆಚ್ಚೇನೂ ವ್ಯತ್ಯಾಸವಿಲ್ಲ. ಹಿಂದೂ ರಾಷ್ಟ್ರ ನಿರ್ಮಿಸಿ ಆ ಮೂಲಕ ದೇಶದಲ್ಲಿ ವಾಸಿಸುತ್ತಿರುವ ಅಲ್ಪಸಂಖ್ಯಾತರು ಹಾಗೂ ಹಿಂದುಳಿದವರ ನಾಗರಿಕ ಹಕ್ಕುಗಳನ್ನು ಕಿತ್ತುಕೊಳ್ಳಲು ಹವಣಿಸುತ್ತಿರುವುದು ಹಿಟ್ಲರನ ನಾಝಿ ಅಜೆಂಡಾದ ತದ್ರೂಪು. ಅವರ ಪ್ರಕಾರ ಸಾವಿರಾರು ವರ್ಷಗಳ ಹಿಂದೆ ಕ್ರೂರವಾದ ಕಟ್ಟಳೆಗಳನ್ನು ಹೇರಿದ್ದ ಮನುಸ್ಮೃತಿಯು ರಾಷ್ಟ್ರದ ಸಂವಿಧಾನವಾಗಬೇಕು. ಆ ಮೂಲಕ ಜಾತಿ ಭೇದ, ಮೇಲು ಕೀಳುಗಳೆಂಬ ತಾರತಮ್ಯವೂ ಜೀವಂತವಾಗಿರಿಸಬೇಕು. ಹಂತಹಂತ ವಾಗಿ ಹೆಣ್ಣುಮಕ್ಕಳನ್ನು ವಿವಿಧ ರೀತಿಯಲ್ಲಿ ಹಿಡಿತ ದಲ್ಲಿಟ್ಟುಕೊಂಡು ಆಕೆಯ ಅಸ್ಮಿತೆಗೇ ಕೊಳ್ಳಿಯಿಡುವ ಪ್ರಯತ್ನ ನಡೆಯುತ್ತಿದೆ. ಮನುಸ್ಮೃತಿಯ ಪ್ರಕಾರ ನಮ್ಮ ಸಂವಿಧಾನ ಹೆಣ್ಣುಮಕ್ಕಳಿಗೆ ಕೊಟ್ಟಿರುವ 'ಸಮಾನ ಹಕ್ಕು' ಎನ್ನುವುದೇ ಕಾನೂನುಬಾಹಿರ. ಹೆಣ್ಣುಮಕ್ಕಳೇ ನಿದ್ದರೂ ಮನೆಯ ಗಂಡಸರ, ಅಂದರೆ ತಂದೆ, ಗಂಡ ಅಥವಾ ಅಣ್ಣತಮ್ಮಂದಿರ ಹಿಡಿತದಲ್ಲಿರಬೇಕು. ಆಕೆಯ ಮೇಲೆ ಕುಟುಂಬದವರಿಂದ ಯಾವ ರೀತಿಯ ಮಾನಸಿಕ ಹಾಗೂ ದೈಹಿಕ ದೌರ್ಜನ್ಯಗಳು ನಡೆದರೂ ಸಹಿಸಿಕೊಂಡು ಹೊಂದಿಕೊಂಡು ಹೋಗಬೇಕು. ಸ್ವಸ್ಥ ಸಮಾಜದ ಪರಿಕಲ್ಪನೆಗೇ ಮಾರಕ ವಾಗಿರುವ ಇಂತಹ ಎಷ್ಟೋ ವಿಚಾರಗಳನ್ನೊಳ ಗೊಂಡ ಧರ್ಮದ ಹೆಸರಿನ ಅನಾಚಾರಗಳನ್ನು ಬಲವಂತವಾಗಿ ಹೇರಲು ಹೊರಟಿರುವುದು ಪ್ರಜಾಪ್ರಭುತ್ವದ ಆಶಯಕ್ಕೆ ತದ್ವಿರುದ್ಧವಾಗಿದೆ.

ಇಂಥದ್ದನ್ನೆಲ್ಲವನ್ನು ವಿರೋಧಿಸಿದರೆ ವಿರೋಧಿಸುವ ಬಾಯಿಯನ್ನೇ ಮುಚ್ಚಿಸಲು ಏನೆಲ್ಲ ಮಾಡಬೇಕು ಎಲ್ಲವನ್ನೂ ರಾಜಾರೋಷವಾಗಿ ಮಾಡಲಾಗುತ್ತಿದೆ. ಈ ಮೂಲಕ ಸಂವಿಧಾನ ಕೊಟ್ಟ ವಾಕ್ ಸ್ವಾತಂತ್ರ್ಯವನ್ನೇ ಕಿತ್ತುಕೊಳ್ಳಲಾಗುತ್ತಿದೆ. ವೇಗವಾಗಿ ಬೆಳೆಯುತ್ತಿರುವ ಈಗಿನ ಪ್ರಪಂಚದಲ್ಲಿ ತಂತ್ರಜ್ಞಾನ ವೆನ್ನುವುದು ಪ್ರತೀ ಮನೆಗೂ ಹೊಕ್ಕಿದೆ. ಇದರಿಂದಾಗಿ ಪ್ರಪಂಚದ ಆಗುಹೋಗುಗಳು ಪ್ರತಿಯೊಬ್ಬರಿಗೂ ತಿಳಿಯುತ್ತಿದೆ. ಹೀಗಾಗಿ ಸ್ವಲ್ಪ ಯೋಚಿಸುವ ಪ್ರಬುದ್ಧ ರೆಲ್ಲರೂ ದೇಶದ ಈ ಅಘೋಷಿತ ತುರ್ತುಪರಿಸ್ಥಿತಿಯ ವಾತಾವರಣವನ್ನು ತೀವ್ರವಾಗಿ ವಿರೋಧಿಸುತ್ತಿದ್ದಾರೆ. ಪರಿಣಾಮ ವಿರೋಧವನ್ನು ವ್ಯಕ್ತಪಡಿಸಲು ಇರುವ ಮೂಲಗಳನ್ನೇ ನಿರ್ಬಂಧಿಸಲು ಪ್ರಯತ್ನಿಸಲಾಗುತ್ತಿದೆ. ಪ್ರಭಾವಿ ವ್ಯಕ್ತಿಗಳನ್ನು ಕೇಸು, ತನಿಖೆ, ಕೊಲೆಗಳ ಮೂಲಕ ನಿರ್ಬಂಧಿಸಿದರೆ ಸಾಮಾನ್ಯ ನಾಗರಿಕರು ಸೋಷಿಯಲ್ ಮೀಡಿಯಾ ಮೂಲಕ ಆಕ್ರೋಶ ಹೊರ ಹಾಕುವುದನ್ನೂ ನಿಯಂತ್ರಿಸಲಾಗುತ್ತಿದೆ. ಮಾಧ್ಯಮ ಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಂಡು ಆ ಮೂಲಕ ಸುಳ್ಳು ಸುದ್ದಿಯನ್ನು ಪದೇಪದೇ ಬಿತ್ತರಿಸಿ ಜನರಿಗೆ ತಪ್ಪು ಮಾಹಿತಿ ನೀಡಿ ದಾರಿ ತಪ್ಪಿಸ ಲಾಗುತ್ತಿದೆ. ಮೈಕ್ರೊಸಾಫ್ಟ್ ಸಂಸ್ಥೆ ನಡೆಸಿದ ಸರ್ವೇ ಪ್ರಕಾರ ಜಗತ್ತಿನಲ್ಲೇ ಅತಿಹೆಚ್ಚು ಸುಳ್ಳುಸುದ್ದಿ ಬಿತ್ತರ ವಾಗುತ್ತಿರುವುದು ನಮ್ಮ ದೇಶದ ವಿವಿಧ ಮಾಧ್ಯಮಗಳ ಮೂಲಕ! ಹಾಗೊಂದು ವೇಳೆ ಯಾವುದೇ ಪ್ರಭಾವ ಕ್ಕೊಳಗಾಗದೆ ಯಾವುದಾದರೂ ಮಾಧ್ಯಮ ಮತ್ತು ಪತ್ರಕರ್ತರು ಕೆಲಸ ಮಾಡುತ್ತಿದ್ದಲ್ಲಿ ಅಂಥವರನ್ನು ಸುಲಭವಾಗಿ ದೇಶದ್ರೋಹಿಗಳೆಂದು ಕರೆಯ ಲಾಗುತ್ತಿದೆ. ಇತ್ತೀಚೆಗೆ ಕ್ಯಾರವಾನ್ ಎನ್ನುವ ವೆಬ್ ನ್ಯೂಸ್ ಬಿಡುಗಡೆ ಮಾಡಿರುವ ವರದಿಯ ಪ್ರಕಾರ ಕೇಂದ್ರ ಸರ್ಕಾರದ ಧೋರಣೆಯನ್ನು ಟೀಕಿಸುವ ಎಲ್ಲರ ಫೇಸ್ ಬುಕ್ ಪೇಜ್‌ಗಳು ಹಾಗೂ ವೈಯಕ್ತಿಕ ಖಾತೆಗಳನ್ನು ತಕ್ಷಣಕ್ಕೆ ತಿಂಗಳುಗಟ್ಟಲೆ ತಾತ್ಕಾಲಿಕವಾಗಿ ನಿರ್ಬಂಧಿಸಲಾಗುತ್ತಿದೆ. ಇಂತಹ ಅದೆಷ್ಟೋ ದೂರುಗಳು ಈಗಾಗಲೆ ದಾಖಲಾಗಿವೆ. ಪ್ರತಿಯೊಂದು ಸ್ವತಂತ್ರ ಸಂಸ್ಥೆಯ ಸ್ವಾಯತ್ತತೆಯನ್ನು ಕಸಿದುಕೊಂಡು ಆ ಮೂಲಕ ಸಮಾಜವನ್ನು ತನ್ನ ಹಿಡಿತಕ್ಕೆ ತಂದು ಕೊಳ್ಳುತ್ತಿದೆ. ಇನ್ನು ನ್ಯಾಯಾಂಗ, ಕಾರ್ಯಾಂಗ, ಶಾಸಕಾಂಗ ಮತ್ತು ಮಾಧ್ಯಮಗಳಿಂದ ಸಾಮಾನ್ಯ ಜನರು ಹೇಗೆ ತಾನೆ ನೈತಿಕತೆಯನ್ನು ಬಯಸಲು ಸಾಧ್ಯ?!

ಇನ್ನು ಸಾಮಾನ್ಯ ಜನರಲ್ಲಿ ಜಾತಿ ಜಾತಿಗಳ ಮಧ್ಯೆ, ಧರ್ಮಗಳ ಮಧ್ಯೆ ದ್ವೇಷ ಬಿತ್ತಿ ನೆರೆಮನೆಯಲ್ಲಿ ವಾಸಿಸುವವರನ್ನೇ ಅನುಮಾನದಿಂದ ನೋಡುವ ಪರಿಸ್ಥಿತಿ ನಿರ್ಮಾಣವಾಗಿದೆ. ಈ ಮೊದಲು ಈ ದೇಶದ ಜನರಲ್ಲಿ ಜಾತಿ, ಧರ್ಮಗಳ ಗೋಡೆಯಷ್ಟೇ ಇತ್ತು. ಈಗ ಆ ಗುಂಪಿಗೊಂದು ಹೊಸ ಸೇರ್ಪಡೆ ಎಡ ಬಲ ಪಂಥೀಯರೆನ್ನುವ ಅಸ್ಪೃಶ್ಯತೆ! ಇದರಿಂದಾಗಿ ಸೌಹಾರ್ದಯುತವಾಗಿದ್ದ ಎಷ್ಟೋ ಸ್ನೇಹ ಮಾನವ ಸಂಬಂಧಗಳು ಮುರಿದುಬಿದ್ದಿವೆ. ಸೇತುವೆಯಾಗ ಬೇಕಿದ್ದ ಮಾಧ್ಯಮಗಳು ಮನಸ್ಸು ಮುರಿಯುವ ಕೆಲಸಕ್ಕೆ ನಿಂತಿವೆ.

ಇವೆಲ್ಲದಕ್ಕೂ ಮೂಲಕಾರಣ ಧರ್ಮವೆಂಬ ಅಮಲು, ಕೋಮುವಾದವೆಂಬ ವಿಷಬೀಜ. ತಾನು ನಂಬಿರುವ ಸಿದ್ಧಾಂತಗಳೇ ಶ್ರೇಷ್ಠ ಎಂಬ ಭಾವವು ಶಾಂತಿ ಸೌಹಾರ್ದವನ್ನು ವಿಶ್ವಕ್ಕೇ ಸಾರಿರುವ ಭಾರತ ದಂತಹ ರಾಷ್ಟ್ರದ ಜನರ ನೆಮ್ಮದಿಯನ್ನು ಹಾಳು ಗೆಡವುತ್ತಿದೆ. ವಿಶ್ವದಾದ್ಯಂತ ನಡೆದ ಧರ್ಮಯುದ್ಧಗಳು ನಮ್ಮ ದೇಶಕ್ಕೆ ಪಾಠವಾಗಬೇಕಿತ್ತು. ಆದರೆ ದುರದೃಷ್ಟವಶಾತ್ ಪ್ರಪಂಚ ಇಷ್ಟೆಲ್ಲ ಮುಂದುವರಿದು ತಂತ್ರಜ್ಞಾನ ಯುಗದ ತುತ್ತತುದಿ ತಲುಪಿರುವ ಈ ಸಂದರ್ಭದಲ್ಲಿ ನಾವು ಧರ್ಮದ ನಶೆ ತಲೆಗೇರಿಸಿ ಕೊಂಡು ಹಿಮ್ಮುಖ ಚಲನೆ ಶುರುಮಾಡಿದ್ದೇವೆ. ಧರ್ಮವನ್ನೇ ಪ್ರಧಾನವಾಗಿಸಿಕೊಂಡು ಆ ನಿಟ್ಟಿನಲ್ಲಿ ದೇಶವನ್ನು ಕಟ್ಟಿಕೊಂಡ ಇರಾನ್ ಇವತ್ತು ಹೆಸರಿಲ್ಲ ದಂತೆ ನೆಲಕಚ್ಚಿದೆ. ಅದ್ಭುತವೆನ್ನುವಷ್ಟು ತೈಲ ನಿಕ್ಷೇಪ ಹೊಂದಿದ್ದು ಅಭಿವೃದ್ಧಿ ಹೊಂದಲು ಎಲ್ಲ ಅನುಕೂಲಕರ ಪರಿಸ್ಥಿತಿ ಇದ್ದೂ ಕೂಡ ಸದ್ದಾಮ್ ಹುಸೇನ್‌ನ ಸರ್ವಾಧಿಕಾರಿ ಧೋರಣೆ ದೇಶವನ್ನೇ ಅಧಃಪತನಕ್ಕೆ ತಳ್ಳಿತು. ಇನ್ನು ಪಾಕಿಸ್ತಾನದ ಸ್ಥಿತಿಗತಿಯಂತೂ ನಮ್ಮೆಲ್ಲರಿಗೂ ಗೊತ್ತಿರುವುದೇ. ನಮ್ಮೊಂದಿಗೇ ಸ್ವಾತಂತ್ರ್ಯ ಪಡೆದುಕೊಂಡ ದೇಶ ಧರ್ಮದ ಕೈಗೆ ದೇಶ ನಡೆಸುವ ಕೀಲಿ ಕೈ ಕೊಟ್ಟು ದಿನೇ ದಿನೇ ಉಗ್ರವಾದ ದೊಂದಿಗೆ ಸೆಣಸಬೇಕಾದ ಸ್ಥಿತಿ ತಲುಪಿದೆ. ಇನ್ನು ಅಭಿವೃದ್ಧಿಯಂತೂ ಕನಸಿನ ಮಾತು. ಇಷ್ಟೆಲ್ಲ ಹೀನ ಪರಿಸ್ಥಿತಿಗೆ ನಾವು ತಲುಪುತ್ತೇವಾ ಗೊತ್ತಿಲ್ಲ. ಆದರೆ ಧರ್ಮದ ಬೆನ್ನೇರಿ ಹೊರಟ ಯಾರ ಪಯಣವೂ ಗುರಿ ತಲುಪಿಲ್ಲವೆನ್ನುವುದು ಮಾತ್ರ ಕಟುಸತ್ಯ.

**ಪಲ್ಲವಿ ಇಡೂರ**
ನಂ. ೧೫, ೬ನೇ ಮುಖ್ಯ ರಸ್ತೆ, ೨ನೇ ಬ್ಲಾಕ್
ಆರ್. ಟಿ. ನಗರ, ಬೆಂಗಳೂರು - ೫೬೦ ೦೩೨

# ಮುಂಜಾವಿಗೆ ಗ್ರಹಗಳ ಸಾಲು

**ಶು**ಕ್ರ, ಶನಿ ಮತ್ತು ಗುರು ಮೂರೂ ಬೆಳಗಿನ ಜಾವ ಉದಯಿಸುತ್ತವೆ. ಪತ್ತೆ ಮಾಡುವುದು ಕಷ್ಟವೇನಿಲ್ಲ; ೨ನೆ ತಾರೀಖಿನ ಮುಂಜಾವು, ಶನಿ ಮತ್ತು ಚಂದ್ರ ಜೊತೆಗೂಡುತ್ತವೆ. ಮರುದಿನ ಚಂದ್ರ ಶುಕ್ರದ ಜೊತೆ ಕಾಣುತ್ತದೆ. ತಿಂಗಳುದ್ದಕ್ಕೂ ಇವುಗಳ ಸ್ಥಾನಗಳನ್ನು ಗಮನಿಸುತ್ತಾ ಬಂದರೆ ಅವುಗಳ ಚಲನೆಯಲ್ಲಿನ ವ್ಯತ್ಯಾಸ ಸ್ಫುಟವಾಗಿ ಕಂಡುಬರುತ್ತದೆ. ತಿಂಗಳ ಕೊನೆಗೆ ಪುನಃ ಚಂದ್ರ ಇಲ್ಲಿ ಹಾಜರಾದಾಗ ಶುಕ್ರದ ಜೊತೆ ಬುಧವೂ ಸೇರಿರುವುದು ಕಂಡುಬರುತ್ತದೆ. ನಿಮ್ಮ ಸಾಧಾರಣ ಮೊಬೈಲ್ ಕ್ಯಾಮೆರಾದಿಂದಲೇ ಈ ಚಲನೆಗಳನ್ನು ಚಿತ್ರೀಕರಿಸಿದರೆ ಶನಿ ಇದ್ದಲ್ಲೇ ಇದೆ; ಗುರು ಸ್ವಲ್ಪ ಚಲಿಸಿದೆ, ಶುಕ್ರ ಬಹಳ ದೂರಕ್ಕೆ (ಕೋನ ಹೆಚ್ಚು ಎಂಬರ್ಥ) ಸರಿದಿದೆ ಎಂಬುದು ತಿಳಿಯುತ್ತದೆ. ಹಿನ್ನೆಲೆಯನ್ನು ಗುರುತುಮಾಡಿಕೊಂಡರೆ ಶನಿ ಬಹಳ ನಿಧಾನವಾಗಿ ಚಲಿಸುತ್ತದೆ; ಶುಕ್ರ ವೇಗವಾಗಿ ಚಲಿಸುತ್ತದೆ ಎಂಬುದನ್ನೂ ತಿಳಿಯಬಹುದು. ಬುಧ ಮುಂಜಾವಿನ ಕೆಂಪಿನಲ್ಲಿ ಕರಗಿ ಹೋಗುತ್ತದೆಯಾದ್ದರಿಂದ ಶ್ರಮ ವಹಿಸಿ ಪತ್ತೆ ಮಾಡಬೇಕು. ತಿಂಗಳ ಕೊನೆಗೆ ನಾಲ್ಕು ಗ್ರಹಗಳು ಸಾಲುಗಟ್ಟಿ ನಿಲ್ಲುತ್ತವೆ.

ಐದನೆಯ ಗ್ರಹ ಮಂಗಳ ಸಂಜೆಯ ಆಕಾಶದಲ್ಲಿ ಕಾಣುತ್ತದೆ. ಪಶ್ಚಿಮದ ಅಂಚಿನಲ್ಲಿ ಕಾಣುವ ಇದು ದಿನವೂ ಅದೇ ಎತ್ತರದಲ್ಲಿಯೇ ಇದೆ ಎಂಬ ಭ್ರಮೆ ಹುಟ್ಟಿಸಬಹುದು. ಆದರೆ ಸೂಕ್ಷ್ಮವಾಗಿ ಗಮನಿಸಿದಲ್ಲಿ ಅದು ಮೇಷದಿಂದ ವೃಷಭಕ್ಕೆ ಚಲಿಸಿರುವುದು ತಿಳಿಯುತ್ತದೆ. ೧೧ರಂದು ಬಾಲಚಂದ್ರ ಇದರ ಪಕ್ಕದಲ್ಲಿಯೇ ಹಾದುಹೋಗುತ್ತದೆ. ತಿಂಗಳ ಕೊನೆಗೆ ಕೃತ್ತಿಕಾ ಪುಂಜದ ಪಕ್ಕದಲ್ಲಿಯೇ ಈ ಕೆಂಪು ಗ್ರಹವನ್ನು ಗುರುತಿಸಬಹುದು. ಇದು ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ.

*ತಿಂಗಳ ೨ ಹಾಗೂ ೨೯ರಂದು ಚಂದ್ರ ಶನಿಯ ಜೊತೆಗೂಡುವದನ್ನು ಗಮನಿಸಿ; ಹಿನ್ನೆಲೆಯಲ್ಲಿನ ಧನುರಾಶಿಯ ನಕ್ಷತ್ರಗಳ ಸಹಾಯದಿಂದ ಗುರು ಗ್ರಹದ ಚಲನೆ ಶನಿಗಿಂತ ಹೆಚ್ಚು ಎಂದು ತಿಳಿಯಬಹುದು.*

ಸಂಜೆಯ ಆಕಾಶದಲ್ಲಿ ಪ್ರಕಾಶಮಾನವಾದ ಪುಂಜಗಳೇ ಇವೆ. ವೃಷಭ, ಮಿಥುನ, ಸಿಂಹ ಇವುಗಳನ್ನು ಗುರುತಿಸಿದರೆ, ಕ್ಷೀಣವಾದ ಕಟಕವನ್ನು, ಮೇಷವನ್ನೂ ಗುರುತಿಬಹುದು. ಇವು ರಾಶಿಚಕ್ರದ ರಾಶಿಗಳು. ಉಳಿದ ನಕ್ಷತ್ರ ಪುಂಜಗಳೆಂದರೆ ಮಹಾವ್ಯಾಧ ಮಹಾಶ್ವಾನ, ಲಘು ಶ್ವಾನ, ವಿಜಯಸಾರಥಿ, ಉತ್ತರದಲ್ಲಿ ಪಾರ್ಥ, ಸಪ್ತರ್ಷಿ ಮಂಡಲ ದಕ್ಷಿಣದಲ್ಲಿ ನೌಕಾಪಟ ಅಲ್ಲದೆ ಅಗಸ್ತ್ಯ ನಕ್ಷತ್ರದ ಆಸುಪಾಸಿನಲ್ಲಿ ಆಕಾಶಗಂಗೆಯ ದಕ್ಷಿಣ ಭಾಗದ ಶಾಖೆಯನ್ನು ನೋಡಬಹುದು.

ತನ್ನ ಕಕ್ಷೆಯಲ್ಲಿನ ಒಂದು ಮುಖ್ಯ ಹಂತವನ್ನು ಭೂಮಿ ೨೧ರಂದು ದಾಟುವುದು. ಅಂದು ವಸಂತ ವಿಷುವ; ಯುಗಾದಿಯ ಸಂಭ್ರಮ. ಹಗಲು ರಾತ್ರಿಗಳ ಅವಧಿ ಸಮ. ಆದರೆ ಈ ಬಾರಿ ಯುಗಾದಿ ಮುಂದಕ್ಕೆ ಹೋಗಿದೆ. ಇದೇಕೆ? ಈ ಪ್ರಶ್ನೆಗೆ ಉತ್ತರವೂ ಆಕಾಶದಲ್ಲಿಯೇ ಇದೆ. ಹುಣ್ಣಿಮೆಯ ಚಂದ್ರನನ್ನು ಗಮನಿಸಿ. ಅದು ಫಲ್ಗುಣಿ ನಕ್ಷತ್ರವನ್ನು ದಾಟಿ ಬಂದಿದೆ. ಆದರೆ ಚಿತ್ರಾದ ಸಮೀಪವಂತೂ ಇಲ್ಲ. ಆದ್ದರಿಂದ ಚಿತ್ರಾ ಪೂರ್ಣಿಮಿ ಮುಂದಿನ ತಿಂಗಳೇ ಎಂದಾಗುತ್ತದೆ. ಈ ಹುಣ್ಣಿಮೆ ಫಾಲ್ಗುಣದ್ದು. ಮೂರು ವರ್ಷಕ್ಕೊಮ್ಮೆ ಅಧಿಕ ಮಾಸ ಸೇರಿಸಬೇಕಾಗಿ ಬರುವುದು ಇದೇ ಕಾರಣದಿಂದ.

**ಖಗೋಳ ದಿನಚರಿ**

೨ ಮುಂಜಾವು – ಶನಿ – ಚಂದ್ರ ಜೋಡಿ* (ಆಚ್ಛಾದನೆ ಕಾಣುವುದಿಲ್ಲ)
೩ ಮುಂಜಾವು ಶುಕ್ರ – ಚಂದ್ರ ಜೋಡಿ*
೪ ಚಂದ್ರ ಅಪಭೂ ಬಿಂದುವಿನಲ್ಲಿ; ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ
೬ ಅಮಾವಾಸ್ಯೆ
೧೧ ಮಂಗಳ – ಚಂದ್ರ ಜೋಡಿ (ಸಂಜೆ)
೧೩ ರೋಹಿಣಿ – ಚಂದ್ರ ಜೋಡಿ (ಸಂಜೆ)
೧೪ ಚಾಂದ್ರಮಾಸದ ಮೊದಲ ಪಾದ
೧೫ ಬುಧ ಗ್ರಹದ ಯುತಿ
೧೯ ಚಂದ್ರ ಪುರಭೂ ಬಿಂದುವಿನಲ್ಲಿ; ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ
೨೧ ವಸಂತ ವಿಷುವ – ಹುಣ್ಣಿಮೆ
೨೨ ಮುಂಜಾವು – ಚಂದ್ರ – ಗುರು ಜೋಡಿ*
೨೮ ಚಾಂದ್ರಮಾಸದ ಕೊನೆಯ ಪಾದ
೨೯ ಮುಂಜಾವು – ಶನಿ – ಚಂದ್ರ ಜೋಡಿ*(ಆಚ್ಛಾದನೆ ಕಾಣುವುದಿಲ್ಲ)
(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

# ಲಿಂಗತ್ವ ನ್ಯಾಯ – ಇಂದಿರಾ ಜೈಸಿಂಗ್

ಲಿಂಗತ್ವ ನ್ಯಾಯದ ಬಗ್ಗೆ ಮಾತನಾಡುವ ಮುನ್ನ ಸಾಂವಿಧಾನಿಕ ನೈತಿಕತೆ ಎಂದರೇನೆಂದು ಹೇಳಬಯಸುತ್ತೇನೆ. ಏಕೆಂದರೆ ಕೋರ್ಟ್ ಹಾಲಿನಲ್ಲಿ, ಶಾಸಕಾಂಗದಲ್ಲಿ, ನ್ಯಾಯಾಂಗದಲ್ಲಿ, ಕಾರ್ಯಾಂಗ, ಎಲ್ಲಾ ಕಡೆಗಳಲ್ಲೂ ಸಾಂವಿಧಾನಿಕ ನೈತಿಕತೆಯನ್ನು ಅನ್ವಯಿಸಿಯೇ ಆಡಳಿತ ನಡೆಸತಕ್ಕದ್ದು. ನಾವು ಅರ್ಥ ಮಾಡಿಕೊಂಡಿರುವಂತೆ, ಸಾಂವಿಧಾನಿಕ ನೈತಿಕತೆ ಎಂದರೆ ಸಂವಿಧಾನದ ಪೀಠಿಕೆಯಲ್ಲಿ ಅಡಕವಾದ ಮೂಲ ತತ್ವಗಳಾಗಿರುವ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ, ಘನತೆ ಮತ್ತು ನ್ಯಾಯಗಳಾಗಿವೆ. ಅದು ಸಂವಿಧಾನ ಕಲ್ಪಿಸಿರುವ ಮೂಲಭೂತ ಹಕ್ಕುಗಳಲ್ಲಿರುವ ಸ್ವಾತಂತ್ರ್ಯವೂ ಹೌದು. ಅದುವೇ ಸರ್ಕಾರದ ಎಲ್ಲಾ ಅಂಗಗಳನ್ನೂ ಮಾರ್ಗದರ್ಶಿಸುವಂತಹ ರಾಜ್ಯ ನಿರ್ದೇಶಕ ತತ್ವಗಳು. ಸಾಮಾನ್ಯವಾಗಿ ರಾಜ್ಯ ನಿರ್ದೇಶಕ ತತ್ವಗಳು ವಕೀಲರಿಗೆ ಮತ್ತು ನ್ಯಾಯಾಲಯಗಳಿಗೆ ಮಾತ್ರ ಸಂಬಂಧಿಸಿದ್ದೆಂದು ಅರ್ಥೈಸಲಾಗಿದೆ; ಇದು ತಪ್ಪು. ಸರ್ಕಾರವು ಶಾಸಕಾಂಗ ಮತ್ತು ಕಾರ್ಯಾಂಗಗಳನ್ನೂ ಒಳಗೊಳ್ಳಲಿದ್ದು ಈ ತತ್ವಗಳು ಅವುಗಳಿಗೂ ಮಾರ್ಗದರ್ಶನ ನೀಡುತ್ತವೆ. ಆದ್ದರಿಂದ ನಾವು ಈ ಸ್ಪಷ್ಟ ನೀತಿಯನ್ನು ಆಧರಿಸಿ ಸಂವಿಧಾನವನ್ನು ಅರ್ಥೈಸಿಕೊಳ್ಳುತ್ತೇವೆ. ಕೋರ್ಟ್ ಹಾಲುಗಳೊಳಗೆ ಎಷ್ಟು ಮಂದಿ ವಕೀಲರು ತಮ್ಮ ವಾದ ಮಂಡನೆಗಳಲ್ಲಿ ಮತ್ತು ನ್ಯಾಯಾಧೀಶರು ಆದೇಶ ಹೊರಡಿಸುವಾಗ ಸಂವಿಧಾನದ ಈ ಮೂಲತತ್ವಗಳನ್ನು ಗಂಭೀರವಾಗಿ ಪರಿಗಣಿಸುತ್ತಾರೆ ಎಂಬುದೇ ಯಕ್ಷಪ್ರಶ್ನೆ.

ಲಿಂಗತ್ವ ಎಂದರೇನು? ಲಿಂಗ ಮತ್ತು ಲಿಂಗತ್ವದ ನಡುವೆ ವ್ಯತ್ಯಾಸವಿದೆ ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕಿದೆ. 'ಲಿಂಗ' ಎನ್ನುವುದು ಜೈವಿಕವಾದರೆ 'ಲಿಂಗತ್ವ' ಎಂಬುದು ಸಾಮಾಜಿಕ ಸಂರಚನೆಯಾಗಿರುತ್ತದೆ. ಲಿಂಗತ್ವದ ಸಂರಚನೆಯಲ್ಲಿ ಪುರುಷಾಧಿಪತ್ಯ ಮತ್ತು ಸ್ತ್ರೀದ್ವೇಷ ಪ್ರಧಾನ ಪಾತ್ರ ವಹಿಸುತ್ತವೆ. ಇದು ಸಮಾಜದಲ್ಲಿ ಮಹಿಳೆಯರ ಸ್ಥಾನಮಾನವನ್ನು ನಿರ್ಧರಿಸುತ್ತದೆ. ಹಾಗಾಗಿ ಸಾರ್ವಜನಿಕ ಕ್ಷೇತ್ರದಲ್ಲಿ ಮತ್ತು ಕೆಲವೊಮ್ಮೆ ಕೋರ್ಟ್ ಹಾಲಿನೊಳಗೂ "ಒಳ್ಳೆಯ ಮಹಿಳೆ" ಮತ್ತು "ಕೆಟ್ಟ ಮಹಿಳೆ" ಎಂದು ಕರೆಯಲಾಗುವ ಸಂರಚನೆಗಳನ್ನು ನೀವು ಕೇಳಬಹುದು. ಅದೇ ರೀತಿ "ಒಳ್ಳೆಯ ಸಂತ್ರಸ್ತೆ" ಮತ್ತು "ಕೆಟ್ಟ ಸಂತ್ರಸ್ತೆ"ಯ ಸಂರಚನೆಗಳನ್ನೂ ಎದುರಾಗುತ್ತೇವೆ. ಇಂದು "ಒಳ್ಳೆಯ ಸಂತ್ರಸ್ತೆ" ಮಾತ್ರ ಸರ್ಕಾರದ ರಕ್ಷಣೆಗೆ ಅರ್ಹಳಾಗಿರುತ್ತಾಳೆಯೇ ಹೊರತು ಎಲ್ಲಾ ಸಂತ್ರಸ್ತೆಯರಲ್ಲ. ಆದ್ದರಿಂದಲೇ "ಒಳ್ಳೆಯ ಮಹಿಳೆ" ಎಂಬ ಹೇಳಿಕೆಯ ಸಂರಚನೆಯಲ್ಲಿ ಪುರುಷಾಧಿಪತ್ಯ ಮತ್ತು ಸ್ತ್ರೀದ್ವೇಷದ ಪಾತ್ರವನ್ನು ಚರ್ಚಿಸಬೇಕಾಗುತ್ತದೆ. ಇಂದು ಜಗತ್ತಿನಾದ್ಯಂತ, ಅಮೆರಿಕದಲ್ಲಿರಲಿ, ಮಧ್ಯ ಪ್ರಾಚ್ಯದಲ್ಲಿರಲಿ ಇಲ್ಲವೇ ಭಾರತದಲ್ಲೇ ಆಗಿರಲಿ, ಬಲಪಂಥೀಯ ರಾಜಕಾರಣದ ಮೇಲುಗೈಗೆ ಸಾಕ್ಷಿಯಾಗಿದ್ದೇವೆ. ನಾವು ಭಾರತದಲ್ಲೂ ಕಳೆದ ನಾಲ್ಕೂವರೆ ವರ್ಷಗಳಿಂದ ಬಲಪಂಥೀಯರ ಅಧಿಕಾರವನ್ನು ಅನುಭವಿಸಿದ್ದೇವೆ. ಇನ್ನೇನು ಚುನಾವಣೆಗಳು ಎದುರಾಗಲಿವೆ. ಬಲಪಂಥೀಯ ರಾಜಕಾರಣಕ್ಕೆ ಮುಕ್ತಿ ದೊರೆಯಲಿ ಎಂಬ ಆಶಯ ವ್ಯಕ್ತಪಡಿಸುತ್ತೇನೆ.

ಅಮೆರಿಕದಲ್ಲಿ ಬಲಪಂಥೀಯ ಆಡಳಿತವು ಮಹಿಳೆಯರ ಮೇಲೆ ಯಾವ ರೀತಿ ದುಷ್ಪರಿಣಾಮ ಬೀರಿದೆ ಎಂದರೆ ಗರ್ಭಪಾತವನ್ನು ಪ್ರೋತ್ಸಾಹಿಸುವ ಸಂಘಸಂಸ್ಥೆಗಳಿಗೆ ಧನಸಹಾಯ ನಿರಾಕರಿಸಲಾಗುತ್ತಿದೆ. ಮಹಿಳೆಯರ ಬದುಕಿನ ಹಕ್ಕಿಗೆ ಚ್ಯುತಿ ಬಂದಾಗಲೂ ಸಹ ಗರ್ಭಪಾತಕ್ಕೆ ಅವಕಾಶ ನೀಡಲಾಗುವುದಿಲ್ಲ. ಆದರೆ ಭಾರತದಲ್ಲಿ ನಮಗೆ ಈ ಸಮಸ್ಯೆ ಎದುರಾಗಿಲ್ಲ ಏಕೆಂದರೆ ನಾವು ಎಂಟಿಪಿ ಕಾಯಿದೆ (ಮೆಡಿಕಲ್ ಟರ್ಮಿನೇಷನ್ ಆಫ್ ಪ್ರೆಗ್ನೆನ್ಸಿ)

ಕೋರ್ಟ್ ಹಾಲಿನೊಳಗೆ ಜನಚಳವಳಿಗಳನ್ನು ಬೆಂಬಲಿಸುವವಳು ಎಂದು ನನ್ನನ್ನು ನಾನು ಗುರುತಿಸಿಕೊಳ್ಳುತ್ತೇನೆ. ಆದರೆ ನ್ಯಾಯಾಲಯದಾಚೆಯೂ ಜನಚಳವಳಿಗಳ ಜೊತೆ ಒಡನಾಟ ಇರಿಸಿಕೊಳ್ಳದಿದ್ದರೆ, ಕೋರ್ಟ್ ಹಾಲಿನೊಳಗೆ ಜನಚಳವಳಿಗಳನ್ನು ಬೆಂಬಲಿಸುವುದು ದುಸ್ತರ ಎಂಬುದು ನನ್ನ ಅಭಿಪ್ರಾಯ. ನನ್ನ ಬದುಕಿನಾದ್ಯಂತ ಜನಚಳವಳಿಗಳ ಜೊತೆ ಬೆರೆತು, ಅವುಗಳ ಜೊತೆ ಜೀವಿಸಿ, ಅವುಗಳ ವಿಚಾರಗಳನ್ನು ಮತ್ತು ಸಮಸ್ಯೆಗಳನ್ನು ನ್ಯಾಯಾಂಗದಲ್ಲಿ ಪ್ರತಿನಿಧಿಸಿ, ಸಂವಿಧಾನಬದ್ಧವಾಗಿ ಜನತೆಯ ಪರವಾಗಿ ಕೋರ್ಟ್ ಹಾಲಿನಲ್ಲಿ ಹೋರಾಡಲು ಯತ್ನಿಸಿರುತ್ತೇನೆ.

**ಜ್ಯೋತಿ ಎ.**



ಎಂಬ ಪ್ರಗತಿಶೀಲ ಕಾಯಿದೆಯನ್ನು ಹೊಂದಿದ್ದೇವೆ. ಇದು ಮಹಿಳೆಯರಿಗೆ ಗರ್ಭಪಾತದ ಹಕ್ಕನ್ನು ನೀಡುತ್ತದೆ; ಹಲವು ಸಂದರ್ಭಗಳಲ್ಲಿ ಮಹಿಳೆಯರು ನೋವಿಗೊಳಗಾಗುವುದನ್ನು ಇದು ಖಚಿತವಾಗಿ ಗುರುತಿಸುತ್ತದೆ.

ಈ ನಾಲ್ಕು ವರ್ಷಗಳಲ್ಲಿ ಭಾರತದೊಳಗೆ ಬಲಪಂಥೀಯ ಉಗ್ರರಾಷ್ಟ್ರೀಯವಾದವು ಧಾರ್ಮಿಕ ಸಂಪ್ರದಾಯವಾದದೊಂದಿಗೆ ಸಮ್ಮಿಳಿತಗೊಂಡು ಮಹಿಳೆಯರ ಹಕ್ಕುಗಳ ನಿಜವಾದ ಶತ್ರುವಾಗಿ ಹೊರಹೊಮ್ಮಿದೆ. ಈ ಕೂಟವು ಮಹಿಳೆಯರ ಕರ್ತೃತ್ವದ ಅಧಿಕಾರವನ್ನೇ ನಾಶ ಮಾಡುತ್ತದೆ. ಇಂದು ನಾವು ಮಹಿಳೆಯರು ಯಾವ ರೀತಿಯ ಬದುಕನ್ನು ನಡೆಸಬೇಕು, ಯಾವ ಬಗೆಯ ಬಟ್ಟೆಯನ್ನು ಧರಿಸಬೇಕು, ಯಾವ ಸ್ಥಳಗಳಿಗೆ ಹೋಗಬೇಕು, ಯಾವ ಆಹಾರವನ್ನು ತಿನ್ನಬೇಕು ಎಂಬ ಆಯ್ಕೆ ನಮ್ಮದಾಗಿಲ್ಲ, ಇವೆಲ್ಲವನ್ನೂ "ಒಳ್ಳೆಯ ಮಹಿಳೆ" ಎಂಬ ಒಂದು ನಿರ್ದಿಷ್ಟ ಪರಿಕಲ್ಪನೆಯ ಅಡಿ ಹರಿಬಿಡಲಾಗಿದೆ. ಆದ್ದರಿಂದ ಇವೆಲ್ಲವೂ ಎಲ್ಲಿಂದ ಬರುತ್ತಿವೆ ಎಂಬ ಪ್ರಶ್ನೆ ನಮ್ಮ ಮುಂದಿದೆ. ವಕೀಲೆಯಾಗಿ ಅಧ್ಯಯನದಲ್ಲಿ ತೊಡಗಿರುವ ನಾನು, ಇವೆಲ್ಲವೂ ಬಂದಿರುವುದು ಮನುಸ್ಮೃತಿಯಿಂದ ಎಂದು ಹೇಳಬಲ್ಲೆ. ರಾಜಸ್ತಾನದ ಉಚ್ಚ ನ್ಯಾಯಾಲಯದ ಆವರಣದೊಳಗೆ ಮನುವಿನ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಗಿದ್ದು, ಅದನ್ನು ತೆರವುಗೊಳಿಸಲು ಅಲ್ಲಿನ ಮಹಿಳೆಯರು ದೊಡ್ಡ ಸಮರವನ್ನೇ ಸಾರಬೇಕಾಯಿತು. ಏಕೆಂದರೆ ಮನುಸ್ಮೃತಿ ಮಹಿಳಾ ವಿರೋಧಿಯಾಗಿದ್ದು, ಎಲ್ಲಾ ಮತಧರ್ಮಗಳಿಗೂ ತಟಸ್ಥವಾಗಿರಬೇಕಾದ ಉಚ್ಚ ನ್ಯಾಯಾಲಯದ ಆವರಣದೊಳಗೆ ಇಂತಹ ಪ್ರತಿಮೆ ಇರುವುದು ಸರಿಯಾದ ಕ್ರಮವಲ್ಲ. ಉಚ್ಚ ನ್ಯಾಯಾಲಯವು ಎಲ್ಲಾ ಮತಧರ್ಮಗಳಿಗೂ ಸಮಾನವಾದ ಧೋರಣೆ ತೋರಬೇಕಾಗಿದ್ದರೂ, ಧರ್ಮನಿರಪೇಕ್ಷ ಸಂವಿಧಾನವೊಂದು ಚಲಾವಣೆಯಲ್ಲಿದ್ದರೂ ಮನುವಿನ ಮೂರ್ತಿ ಮಾತ್ರ ಇನ್ನೂ ಅಲ್ಲೇ ಇದೆ. ಅದನ್ನು ತೆರವುಗೊಳಿಸಿರಿ ಎಂದು ಒತ್ತಾಯಿಸಿದ ಮಹಿಳೆಯರ ವಿರುದ್ಧ ಬಲ ಪ್ರಯೋಗಿಸಲಾಯಿತು. ಇತ್ತೀಚೆಗೆ ರಾಜಸ್ತಾನ ಉಚ್ಚ ನ್ಯಾಯಾಲಯದ ಆವರಣದೊಳಗೆ ನಡೆದ ಘಟನೆಯಿದು. ಕೆಲವು ಮಹಿಳೆಯರು ಮನುವಿನ ಮೂರ್ತಿಯ ಮೇಲೆ ಕಪ್ಪು ಮಸಿಯನ್ನು ಬಳಿದಾಗ ಅವರನ್ನು ಬಂಧಿಸಲಾಯಿತು. ಹಿಂದೂ ಧರ್ಮವನ್ನು ಅಪಮಾನಿಸಿದರೆಂಬ ಕಾರಣ ನೀಡಿ ಅವರಿಗೆ ನಾಲ್ಕು ತಿಂಗಳಿಗೂ ಹೆಚ್ಚು ಕಾಲ ಜಾಮೀನು ನೀಡುವುದನ್ನು ನಿರಾಕರಿಸಲಾಯಿತು. ಈ ಮಟ್ಟಕ್ಕೆ ಇದೀಗ ಭಾರತದಲ್ಲಿ ಮನು ಅಂತಹವರನ್ನು ಗೌರವಿಸಿ ಅವರ ನೀತಿಗಳನ್ನು ಅನುಸರಿಸಲಾಗುತ್ತಿದೆ. ನಾನು ಆರ್‌ಎಸ್‌ಎಸ್ ಮತ್ತು ಅದರ ಸಿದ್ಧಾಂತಿಗಳ ಬರೆಹಗಳನ್ನೂ ಓದಿರುವೆ. ಎಂ. ಎಸ್. ಗೋಳ್ವಾಳ್ಕರ್ ಅವರ "ವಿ ಆರ್ ಅವರ್ ನೇಷನ್‌ಹುಡ್ ಡಿಫೈನ್ಡ್" ಮತ್ತು "ಬಂಚ್ ಆಫ್ ಥಾಟ್ಸ್" ಓದಿದ್ದೇನೆ. ಆರ್‌ಎಸ್‌ಎಸ್ ಮತ್ತು ಅದರ ರಾಜಕೀಯ ಮುಖವಾಗಿರುವ ಬಿಜೆಪಿ ಸೇರಿದಂತೆ, ಅದರ ವಿಸ್ತೃತ ಪರಿವಾರದ ಚಿಂತನೆಯಲ್ಲಿ ಮಹಿಳೆ ಗೃಹಕೃತ್ಯಗಳಿಗೆ ಸೀಮಿತವಾದವಳು ಮತ್ತು ಮಕ್ಕಳನ್ನು ಹೆರುವವಳು ಮಾತ್ರ. ಇಂತಹ ಆಲೋಚನೆಗಳನ್ನು ಆಳುವ ಪಕ್ಷಗಳು ಅನುಷ್ಠಾನಕ್ಕೆ ತಂದಾಗ ಭಾರತದಲ್ಲಿ ಮಹಿಳೆಯರು ಸರ್ಕಾರದಿಂದ ಇನ್ನೆಂತಹ ಸುರಕ್ಷತೆಯನ್ನು ನಿರೀಕ್ಷಿಸಲು ಸಾಧ್ಯ? ಇದೇ ಮಂಗಳೂರಿನಲ್ಲಿ ಪಾರ್ಕಿನೊಳಗೆ ಹೋಗಲಿಚ್ಛಿಸುವ ಮಹಿಳೆಯರ ಮೇಲೆ ಹಲ್ಲೆಗಳಾಗಿವೆ, ಇದೇ ಕರ್ನಾಟಕದಲ್ಲಿ ಗೌರಿ ಲಂಕೇಶ್ ಅವರ ಎದೆಗೆ ಗುಂಡಿಟ್ಟು ಕೊಲ್ಲಲಾಗಿದೆ. ಇದರ ತನಿಖೆ ಸಮಾಧಾನಕರವಾಗಿ ನಡೆದಿದೆ ಎಂದರೂ ಮತ್ತೊಂದೆಡೆ ಸಂವಿಧಾನದ ಮೂಲ ತತ್ವಗಳಾದ ಧರ್ಮನಿರಪೇಕ್ಷತೆ, ಪ್ರಜಾತಂತ್ರ ಮತ್ತು ಸರ್ವರಿಗೂ ನ್ಯಾಯಕ್ಕಾಗಿ ಗೌರಿ ಲಂಕೇಶ್ ತಮ್ಮ ಪ್ರಾಣವನ್ನೇ ಒತ್ತೆ ಇಟ್ಟರೆಂಬ ಸತ್ಯವನ್ನು ಎಂದಿಗೂ ಮರೆಯಲಾಗದು.

ನಮ್ಮ ಸಮಾಜದಲ್ಲಿ ಇಂತಹದ್ದೇ ಪದ್ಧತಿ ರೂಢಿಯಲ್ಲಿತ್ತು. ಮಹಿಳೆ ರಜಸ್ವಲೆಯಾದಾಗ ಕೇವಲ ದೇವಾಲಯದೊಳಗೆ ಹೋಗದಿರುವುದು ಮಾತ್ರವಲ್ಲ, ಮನೆಯಿಂದಲೂ ಹೊರಗೆ ವಾಸಿಸಬೇಕಾಗಿತ್ತು. ಇದನ್ನು ಸಂವಿಧಾನಬಾಹಿರ ಎಂದು ಘೋಷಿಸಿ ನಿಷೇಧಿಸಲಾಯಿತು. ಈಗ ಋತುಮತಿಯಾದ ಮಹಿಳೆ ತನ್ನೆಲ್ಲಾ ಕೆಲಸಕಾರ್ಯಗಳನ್ನು ಮಾಡಿಕೊಳ್ಳುತ್ತಾ ಮನೆಯೊಳಗೆ ಎಲ್ಲರಂತೆ ಸಹಜವಾಗಿ ಬದುಕುವಂತಾಗಿದೆ. ಆದ್ದರಿಂದ ಶಬರಿಮಲೆಯಲ್ಲಿ ಅಂತಹ ಒಂದು ಪದ್ಧತಿ ಇತ್ತು ಎಂದ ಮಾತ್ರಕ್ಕೆ ಈ ಸಂವಿಧಾನಬಾಹಿರ ಪದ್ಧತಿಯನ್ನು ಮುಂದುವರಿಸಿಕೊಂಡು ಹೋಗುವುದೇಕೆ? ಮಹಿಳೆಯರನ್ನು ಪ್ರತ್ಯೇಕವಿರಿಸುವ ಸಂಪ್ರದಾಯ ಹಿಂದೆ ಇರಲಿಲ್ಲ ಎಂದು ಕೆಲವರು ವಾದಿಸುತ್ತಾರೆ. ಶಬರಿಮಲೆಯಲ್ಲಿ ಮಹಿಳೆಯರಿಗೆ ಪ್ರವೇಶ ನಿರಾಕರಿಸುವುದನ್ನು ಒಂದು ಬಗೆಯ ಅಸ್ಪೃಶ್ಯತೆ ಎಂದು ನಾನು ವಾದಿಸಿದಾಗ ಒಬ್ಬ ನ್ಯಾಯಾಧೀಶರಾದರೂ ನನ್ನ ವಾದಮಂಡನೆಯನ್ನು ಒಪ್ಪಿದರು. ಮುಟ್ಟಾದ ಮಹಿಳೆ ಒಂದು ನಮೂನೆಯ ಅಸ್ಪೃಶ್ಯತೆಯನ್ನು ಅನುಭವಿಸುತ್ತಾಳೆ.

ನ್ಯಾಯಾಲಯಗಳ ಹಲವು ತೀರ್ಪುಗಳು ಹೊರಬಂದಿವೆ. ಇತ್ತೀಚಿನ ಶಬರಿಮಲೆ ಕುರಿತ ತೀರ್ಪಿನಲ್ಲಿ ನ್ಯಾಯಮೂರ್ತಿಗಳು ಸಾಂವಿಧಾನಿಕ ನೈತಿಕತೆಯನ್ನಾಧರಿಸಿ ಆದೇಶವನ್ನು ದಾಖಲಿಸಿದ್ದಾರೆ. ೧೦-೫೦ ವರ್ಷಗಳ ಒಳಗಿನ ಮಹಿಳೆಯರಿಗೆ ದೇವಾಲಯದೊಳಗೆ ಪ್ರವೇಶ ನಿರಾಕರಿಸುವುದು ಸಂವಿಧಾನಬಾಹಿರವಾದುದು. ನಾನು ಈ ಪ್ರಕರಣದಲ್ಲಿ ವಾದಿಸುತ್ತಿರುವಾಗ ಒಂದು ವಿಚಿತ್ರ ಘಟನೆ ನಡೆಯಿತು. ಮುಟ್ಟು ಎಂದು ನಾನು ಬಹಿರಂಗವಾಗಿಯೇ ಪ್ರಸ್ತಾಪ ಮಾಡುತ್ತಿದ್ದಾಗಲೂ ದೇವಸ್ವಂ ಮಂಡಳಿಯ ಪರ ವಾದ ಮಂಡಿಸುತ್ತಿದ್ದ ಹಿರಿಯ ವಕೀಲರು, "ಯುವರ್ ಲಾರ್ಡ್‌ಶಿಪ್, ಅದರ ಕಾರಣಕ್ಕಾಗಿ, ಅದರ ಕಾರಣದಿಂದ... ಮಹಿಳೆಯರು ಪ್ರವೇಶಿಸುವಂತಿಲ್ಲ" ಎನ್ನುತ್ತಲಿದ್ದರು. ಅವರು ತಮ್ಮ ಬಾಯಿ ತೆರೆದು "ಮುಟ್ಟು" ಎಂದು ಹೇಳುವುದಕ್ಕೂ ಹಿಂಜರಿಯುತ್ತಿದ್ದರು! ನಾನು ಮೇಲೆದ್ದು, "ಸ್ವಾಮಿ ವಕೀಲರೆ, ಅದು ಎಂದರೇನು" ಎಂದು ಕೇಳಬೇಕಾಯಿತು. ಆಗಲೂ ಸಹ ಅವರ ಬಾಯಿಂದ ಮುಟ್ಟು ಎಂಬ ಪದ ಹೊರಬರಲೇ ಇಲ್ಲ. ಮುಟ್ಟು ಎಂಬ ಪದವನ್ನು ಉಚ್ಚರಿಸಲು ಅವರು ನಾಚಿ ನೀರಾಗುತ್ತಿದ್ದರು. ನಾನು ಮತ್ತೆ ಅವರನ್ನು ಕೇಳಿದೆ, "ಏನಾದರೂ 'ಅದು' ಎಂದರೆ ಮುಟ್ಟು ಎನ್ನುತ್ತಿದ್ದೀರಾ ನೀವು?" ಎಂದು. ಅವರು ಮೌನಕ್ಕೆ ಜಾರಿದರು. ೧೦-೫೦ ವಯೋಮಾನದ ಹೊರತಾದ ಮಹಿಳೆಯರಿಗೆ ದೇವಾಲಯದೊಳಗೆ ಪ್ರವೇಶವಿರುವುದರಿಂದ ಇದು ಲಿಂಗ ತಾರತಮ್ಯದ ಪ್ರಶ್ನೆಯಾಗುವುದಿಲ್ಲ ಎಂಬುದು ಅವರ ವಾದವಾಗಿತ್ತು. ಆದರೆ ೧೦-೫೦ ವಯೋಮಾನದ ಪುರುಷರಿಗೆ ದೇವಾಲಯದೊಳಗೆ ಪ್ರವೇಶವಿರುವಾಗ, ಮುಟ್ಟು ಎಂಬ ಜೈವಿಕ ಕ್ರಿಯೆಯ ನೆಪವೊಡ್ಡಿ ಮಹಿಳೆಯರಿಗೆ ದೇಗುಲದೊಳಗೆ ಪ್ರವೇಶ ನಿರಾಕರಿಸುವುದು ಖಂಡಿತವಾಗಿಯೂ ಲಿಂಗಭೇದದ ಪ್ರಶ್ನೆಯೇ ಎಂದು ನಾನು ವಾದಿಸಿದ್ದೆ. ಲಿಂಗಾಧಾರಿತವಾಗಿ ತಾರತಮ್ಯ ಎಸಗುವಂತಿಲ್ಲ ಎಂಬುದು ಸಂವಿಧಾನದ ಮೂಲಭೂತ ತತ್ವವಾಗಿರುತ್ತದೆ. ಇದೀಗ ತೀರ್ಪನ್ನು ಮರುಪರಿಶೀಲಿಸುವಂತೆ ಕೋರಿ ಸರ್ವೋಚ್ಚ ನ್ಯಾಯಾಲಯದಲ್ಲಿ ಪುನರ್‌ಪರಿಶೀಲನಾ ದಾವೆಗಳನ್ನು ಹೂಡಲಾಗಿದೆ. ಅವೆಲ್ಲವೂ ಲಿಂಗ ತಾರತಮ್ಯವನ್ನಾಧರಿಸಿವೆ. ಸರ್ವೋಚ್ಚ ನ್ಯಾಯಾಲಯ ಏನು ಮಾಡಲಿದೆ ಎಂದು ಕಾದು ನೋಡಬೇಕಿದೆ. ನ್ಯಾಯಪೀಠದ ನ್ಯಾಯಾಧೀಶರೊಬ್ಬರಾದ ನ್ಯಾ. ನಾರಿಮನ್ ತಮ್ಮ ಆದೇಶದಲ್ಲಿ ಹೀಗೆ ದಾಖಲಿಸಿರುತ್ತಾರೆ: ಎಲ್ಲಾ ಹಳೆಯ ಧಾರ್ಮಿಕ ಗ್ರಂಥಗಳಲ್ಲೂ ಮಹಿಳೆಯರ ಮುಟ್ಟಿನ ಪ್ರಕ್ರಿಯೆಯನ್ನು ಮೈಲಿಗೆ ಎಂದು ಪರಿಗಣಿಸುವ ಹೇಳಿಕೆಗಳನ್ನು ಕಾಣಬಹುದು. ಭಾಗವತಪುರಾಣ, ಹಳೆಯ ಒಡಂಬಡಿಕೆ, ಕುರಾನ್, ವಸಿಷ್ಠನ ಧರ್ಮಸೂತ್ರ ಮತ್ತು ಬೌದ್ಧ ಗ್ರಂಥಗಳಿಂದ ಉಲ್ಲೇಖಗಳನ್ನು ದಾಖಲಿಸಿರುತ್ತಾರೆ. ಸಂವಿಧಾನಬದ್ಧವಾಗಿ ನಡೆದುಕೊಳ್ಳುವ ನ್ಯಾಯಾಲಯಗಳ ಮೊರೆಹೋದಾಗ ಲಿಂಗಾಧಾರಿತ ತಾರತಮ್ಯಕ್ಕೆ ಅವಕಾಶವಿಲ್ಲ ಎಂದು ಸ್ಪಷ್ಟವಾಗಿ ನುಡಿಯುವುದು ಅವುಗಳ ಜವಾಬ್ದಾರಿಯಾಗಿರುತ್ತದೆ.

ಅವಳು ಎಲ್ಲರಂತೆ ಇರಲಾರಳು; ಎಲ್ಲರಂತೆ ಬದುಕಲಾರಳು. ಅವಳನ್ನು ದೇವಾಲಯದೊಳಗೆ ಹೋಗದಿರು ಎನ್ನುವುದು ಅಸ್ಪೃಶ್ಯತೆಯ ಆಚರಣೆಯೇ ಆಗಿರುತ್ತದೆ. ಈ ವಾದಸರಣಿಯನ್ನು ನಾನು ಮುಂದಿಟ್ಟಾಗ ಪ್ರತಿರೋಧ ಎದುರಿಸಬೇಕಾಯಿತು. ಅಸ್ಪೃಶ್ಯತೆ ಎನ್ನುವುದು ಜಾತಿಗೆ ಮಾತ್ರ ಸಂಬಂಧಿಸಿದ್ದೆಂದು ಕೆಲವರು ಹೇಳಿದರು. ನಾನು ಸಂವಿಧಾನದ ಅನುಚ್ಛೇದ ೧೭ರ ಅನ್ವಯ "ಎಲ್ಲಾ ಸ್ವರೂಪಗಳ ಅಸ್ಪೃಶ್ಯತೆಗಳನ್ನೂ" ನಿರ್ಮೂಲನೆ ಮಾಡುವ ಅಗತ್ಯವಿದೆ ಎಂದು ವಾದಿಸಿದಾಗ ನ್ಯಾ. ಚಂದ್ರಚೂಡ್ ಅವರು ಅದಕ್ಕೆ ಸಮ್ಮತಿ ವ್ಯಕ್ತಪಡಿಸುತ್ತಾ, "ಹೌದು, ಭಾರತದಲ್ಲಿ ಇದೊಂದು ಹೊಸ ಬಗೆಯ ಅಸ್ಪೃಶ್ಯತೆಯನ್ನು ನೋಡುತ್ತಿದ್ದೇವೆ ಮತ್ತು ಇದನ್ನು ಹೋಗಲಾಡಿಸಬೇಕಿದೆ" ಎಂದರು.




ಇದರಾಚೆ ಇನ್ನೊಂದು ವಿಷಯವಿದೆ. ಅಯ್ಯಪ್ಪ ಒಬ್ಬ ನೈಷ್ಠಿಕ ಬ್ರಹ್ಮಚಾರಿಯಾದ್ದರಿಂದ ಮಹಿಳೆಯರನ್ನು ದೇವಾಲಯದೊಳಗೆ ನಿಷೇಧಿಸಬೇಕೆಂಬುದು ವಾದವಾಗಿತ್ತು. ಈ ಅಂಶವು ತೀರ್ಪಿನಲ್ಲಿ ಉಲ್ಲೇಖವಾಗಿದೆ. ಇದರ ಹಿನ್ನೆಲೆಯಲ್ಲಿ ಮಹಿಳೆಯ ಕುರಿತ ಒಂದು ಸಾಮಾನ್ಯ ಕಲ್ಪನೆಯು ಚರ್ಚಿತವಾಗಿತ್ತು. ದೇವಾಲಯದೊಳಗೆ ಮಹಿಳೆಯರು ಪ್ರವೇಶಿಸಿದರೆ ಅಯ್ಯಪ್ಪ ಸ್ವಾಮಿಯ ಬ್ರಹ್ಮಚರ್ಯ ಭಂಗವಾಗುತ್ತದೆ ಎಂದು ಹೇಳಲಾಗಿತ್ತು. ಮಹಿಳೆ ಯಾವಾಗಲೂ ಪುರುಷನನ್ನು ಪಾಪಕಾರ್ಯಕ್ಕೆ ಸೆಳೆಯುವವಳಾಗಿರುವುದರಿಂದ ಅವಳನ್ನು ಅಯ್ಯಪ್ಪನ ಗುಡಿಯೊಳಗೆ ಪ್ರವೇಶಿಸದಂತೆ ತಡೆಯಬೇಕು ಎಂದು ತಿಳಿಸಲಾಗಿದೆ. ಇದೂ ಕೂಡ ಸಂವಿಧಾನಬಾಹಿರ ಎಂದು ತೀರ್ಪಿನಲ್ಲಿ ಹೇಳಲಾಗಿದೆ. ಏಕೆಂದರೆ ಮಹಿಳೆಯರಿಗೆ ಘನತೆಯಿಂದ ಕೂಡಿದ, ಪ್ರಥಮ ದರ್ಜೆ ನಾಗರಿಕರ ಸ್ಥಾನಮಾನ ನೀಡದೆ, ಅದೇ ಹಳೆಯ ಸಿದ್ಧಮಾದರಿಯ ಮನಸ್ಥಿತಿಯಲ್ಲಿ ಪಾಪಕಾರ್ಯಕ್ಕೆ ಸೆಳೆಯುವವಳೆಂದು ಅರ್ಥೈಸಿಕೊಳ್ಳುವುದು ಸಂವಿಧಾನದ ಮೂಲ ಆಶಯಗಳಿಗೆ ವಿರುದ್ಧವಾದುದು.

ಗೋರಕ್ಷಣೆಯ ಹೆಸರಿನಲ್ಲಿ ದುಷ್ಟ ಶಕ್ತಿಗಳು ಇತ್ತೀಚೆಗೆ ಉತ್ತರ ಪ್ರದೇಶದಲ್ಲಿ ಪೊಲೀಸನೊಬ್ಬನನ್ನು ಕೊಂದಿರುವುದನ್ನು ಕಂಡಿದ್ದೇವೆ. ಸರ್ವೋಚ್ಚ ನ್ಯಾಯಾಲಯದ ನ್ಯಾ. ದೀಪಕ್ ಮಿಶ್ರಾ ಮತ್ತು ನ್ಯಾ. ಚಂದ್ರಚೂಡ್ ಅವರುಗಳು ಸರ್ಕಾರಕ್ಕೆ ನಿರ್ದೇಶನ ನೀಡಿ ಪ್ರತಿ ರಾಜ್ಯ ಸರ್ಕಾರವೂ ಗೃಹ ಇಲಾಖೆಯ ಕಾರ್ಯದರ್ಶಿಯಡಿ ಒಬ್ಬೊಬ್ಬ ನೋಡಲ್ ಅಧಿಕಾರಿಯನ್ನು ನೇಮಿಸಿ ಇಂತಹ ಹಿಂಸಾಕೃತ್ಯಗಳು ನಡೆಯದಂತೆ ನೋಡಿಕೊಳ್ಳಬೇಕೆಂದು ತಾಕೀತು ಮಾಡಿರುತ್ತಾರೆ. ಆದರೆ ಕಳೆದ ನಾಲ್ಕೂವರೆ ವರ್ಷಗಳಲ್ಲಿ ಕೆಲವು ದುಷ್ಟ ಶಕ್ತಿಗಳು ಹೇಗೆ ಕಾನೂನನ್ನು ತಮ್ಮ ಕೈಗೆ ತೆಗೆದುಕೊಂಡಿವೆ ಎಂದು ನಾವು ನೋಡುತ್ತಿದ್ದೇವೆ. ಹಳ್ಳಿಗಳಲ್ಲಿ ತಮ್ಮಿಚ್ಛೆಯ ಬದುಕನ್ನು ಬದುಕಬೇಕೆನ್ನುವ ಮಹಿಳೆಯರ ಮೇಲೆ ಈ ಗುಂಪುಗಳೇ ಹಲ್ಲೆಗೈಯುತ್ತಿರುವುದು. ನಾವು "ಒಳ್ಳೆಯ ಹಿಂದೂ ಮಹಿಳೆ"ಯರಾಗಿ ಬದುಕಬೇಕೆಂದು ಅವರು ಆದೇಶಿಸುತ್ತಾರೆ.

ಇವುಗಳ ಮೂಲ ಪುರುಷಾಧಿಪತ್ಯ ಮತ್ತು ಸ್ತ್ರೀದ್ವೇಷದ ಸೈದ್ಧಾಂತಿಕ ದೃಷ್ಟಿಕೋನವೇ ಆಗಿರುತ್ತದೆ. ಮಹಿಳೆಗೆ ಯಾವುದೇ ಕರ್ತೃತ್ವದ ಅಧಿಕಾರವನ್ನೂ ಅದು ನಿರಾಕರಿಸುತ್ತದೆ. ೨೦೦೪–೨೦೧೪ರ ನಡುವೆ ಸರ್ಕಾರದಲ್ಲಿ ಮಹಿಳೆಯರ ಪರವಾಗಿದ್ದ ಧೋರಣೆಗಳನ್ನು ಕಂಡಿದ್ದೆವು. ಆ ಕಾಲಘಟ್ಟದಲ್ಲಿ ಹಲವು ಪ್ರಗತಿಶೀಲ ಶಾಸನಗಳನ್ನು ರಚಿಸಲಾಯಿತು. ೨೦೦೫ರಲ್ಲಿ ಮಹಾತ್ಮಾ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ರೂಪಿಸಲಾಯಿತು. ಇದು ಮಹಿಳೆಯರ ಉದ್ಯೋಗದ ಹಕ್ಕನ್ನು ಎತ್ತಿಹಿಡಿಯಿತು. ಆಹಾರ ಸುರಕ್ಷತಾ ಕಾಯಿದೆಯನ್ನೂ ಜಾರಿಗೊಳಿಸಲಾಯಿತು. ಇದರ ಮೂಲಕ ಬಡತನದ ರೇಖೆಗಿಂತ ಕೆಳಗಿರುವವರಿಗೆ ನಿರ್ದಿಷ್ಟ ಪ್ರಮಾಣದ ಪಡಿತರದ ಹಂಚಿಕೆಯನ್ನು ಖಾತರಿಗೊಳಿಸಲಾಯಿತು. ಮಹಿಳೆಯರನ್ನು ಕೌಟುಂಬಿಕ ಹಿಂಸೆಯಿಂದ ರಕ್ಷಣೆ ಮಾಡಲು ಕಾಯಿದೆಯನ್ನು ೨೦೦೫ರಲ್ಲಿ ರೂಪಿಸಲಾಯಿತು. ಮಹಿಳೆಯರ ವಿರುದ್ಧದ ಕೌಟುಂಬಿಕ ದೌರ್ಜನ್ಯ ನಿಂತಿದೆ ಎಂದರ್ಥವಲ್ಲ. ಇತ್ತೀಚಿನ ವಿಶ್ವಸಂಸ್ಥೆಯ ಸಮೀಕ್ಷೆಯ ಪ್ರಕಾರ, ೨೦೧೭ರಲ್ಲಿ ಮರಣ ಹೊಂದಿದ ಶೇ. ೮೦ಕ್ಕೂ ಹೆಚ್ಚಿನ ಮಹಿಳೆಯರು ತಮ್ಮ ಮನೆಯೊಳಗೇ ಸಾವನ್ನಪ್ಪಿದ್ದಾರೆ. ಇದು ಭಾರತದಲ್ಲಿನ ಕೌಟುಂಬಿಕ ಹಿಂಸೆಯ ಭೀಕರತೆಯನ್ನು ಸೂಚಿಸುತ್ತಲೇ, ಮಹಿಳೆಯರಿಗೆ ಮನೆ ಸುರಕ್ಷಿತವಾದ ಸ್ಥಳವಾಗಿದೆಯೇ ಎಂಬ ಆತಂಕದ ಪ್ರಶ್ನೆ ಹುಟ್ಟುಹಾಕುತ್ತದೆ. ಕುಟುಂಬದ ಒಳಗೆ ಸೇರಿದಂತೆ ಸಮಾಜದೆಲ್ಲೆಡೆ ಮಹಿಳೆಯರ ವಿರುದ್ಧದ ಹಿಂಸೆ ಅಧಿಕಗೊಂಡಿದೆ. ನಾನು ಆಗಲೇ ಹೇಳಿದಂತೆ ಜಗತ್ತಿನಾದ್ಯಂತ ಬಲಪಂಥೀಯ ಸಿದ್ಧಾಂತದಿಂದಾಗಿ ಸ್ತ್ರೀದ್ವೇಷ ಸಾಮಾನ್ಯೀಕರಣಗೊಂಡು ಪುರುಷಾಧಿಪತ್ಯದ ಮೌಲ್ಯಗಳು ಸಹಜ ಎನಿಸುವಂತಾಗಿ ಮಹಿಳೆಯರ ಮೇಲಿನ ಹಿಂಸೆ ಹೆಚ್ಚುತ್ತಿದೆ. ಅವರು ನಮಗೆ ಕೊಟ್ಟಿರುವಂತಹ ಪಾತ್ರಗಳಿಗಿಂತ ಭಿನ್ನವಾಗಿ ನಾವು ನಮ್ಮದೇ ಹಾದಿಯಲ್ಲಿ ಸ್ವತಂತ್ರವಾಗಿ ನಡೆದು ಹೋದರೂ ಅವರ ಹಿಂಸಾಕೃತ್ಯಗಳು ಮುಂದುವರಿಯುವುದನ್ನು ನಾವು ನೋಡಿದ್ದೇವೆ.

೨೦೧೩ರ ಉದ್ಯೋಗ ಸ್ಥಳದಲ್ಲಿ ಮಹಿಳೆಯರ ಮೇಲಿನ ಲೈಂಗಿಕ ಕಿರುಕುಳ (ತಡೆಗಟ್ಟುವಿಕೆ, ನಿಷೇಧ, ನಿವಾರಣೆ) ಕಾಯಿದೆಯ ಕುರಿತು ಹೇಳಬೇಕಾದರೆ, ಇದು ಮೀಟೂ ಚಳವಳಿಗೆ ಮತ್ತು ಉದ್ಯೋಗಸ್ಥ ಮಹಿಳೆಯರಿಗೆ ನೇರವಾಗಿ ಸಂಬಂಧಿಸಿದ್ದು. ಉದ್ಯೋಗ ಸ್ಥಳದಲ್ಲಿನ ಲೈಂಗಿಕ ಕಿರುಕುಳದ ಬಗ್ಗೆ ಹೆಚ್ಚು ಒತ್ತುನೀಡುತ್ತಿದ್ದೇನೆ. ತಮ್ಮಲ್ಲಿ ಒಂದಲ್ಲಾ ಒಂದು ಪ್ರತಿಭೆ, ಕೌಶಲ್ಯಗಳಿರುತ್ತವೆ; ಅವುಗಳನ್ನು ಬಳಸಿಕೊಂಡು ದುಡಿಮೆ ಮಾಡೋಣ ಎಂದು ಮಹಿಳೆಯರು ನೌಕರಿಗೆ ಹೋಗುತ್ತಾರೆಯೇ ಹೊರತು ಮಾಲೀಕರ ಕೈಗಳಲ್ಲಿ ಭೋಗದ ವಸ್ತುಗಳಾಗಲು ಅಲ್ಲ. ಮೀಟೂ ಚಳವಳಿಯಲ್ಲಿ ಮಹಿಳೆಯರು ಮಾತನಾಡಿದರು ಮತ್ತು ಅದು ಮಹಿಳೆಯರ ಸಂವಿಧಾನಬದ್ಧ ಹಕ್ಕನ್ನು ಚಲಾಯಿಸಿದರು. ದೇಶದ ಚರಿತ್ರೆಯಲ್ಲಿ ಇದು ಹೆಮ್ಮೆಯ ಕ್ಷಣವಾಗಿ ದಾಖಲಾಯಿತು. ೨೦೧೪ರ ಡಿಸೆಂಬರ್‌ನಲ್ಲಿ ದೆಹಲಿಯ ಬೀದಿಯಲ್ಲಿ ಯುವತಿಯೊಬ್ಬಳ ಮೇಲೆ ಭೀಕರವಾಗಿ ನಡೆದ ಸಾಮೂಹಿಕ ಅತ್ಯಾಚಾರ–ಕೊಲೆಯ ನಂತರ ಸರ್ಕಾರ ನ್ಯಾ. ವರ್ಮಾ ಆಯೋಗವನ್ನು ರಚಿಸಿ ಅತ್ಯಾಚಾರ ಪ್ರತಿಬಂಧಕ ಕಾನೂನುಗಳಿಗೆ ತಿದ್ದುಪಡಿ ತಂದಿತು. ಅದರ ಜೊತೆಗೆ ಅತ್ಯಾಚಾರ ಸಂತ್ರಸ್ತೆಯರ ಪರಿಹಾರಕ್ಕಾಗಿ ಕೇಂದ್ರ ನಿಧಿಯೊಂದನ್ನು ಸ್ಥಾಪಿಸಿತು. ಈ ಹಣವನ್ನು ಬೇರೆ ಯಾವ ಉದ್ದೇಶಕ್ಕೂ ಬಳಸಲಾಗದು. ಆದರೆ ಈ ನಿಧಿ ಬಳಕೆಯಾಗದೆ ಉಳಿದಿರುವುದು ದುರಂತ. ಯೋಜನೆಗಳು ಸಮರ್ಪಕವಾಗಿ ಜಾರಿಯಾಗುತ್ತಿಲ್ಲ.

ಈ ಐದು ವರ್ಷಗಳಲ್ಲಾಗಿರುವ ಒಳ್ಳೆಯ ಬದಲಾವಣೆಗಳ ಬಗ್ಗೆ ಹೇಳುತ್ತೇನೆ. ಕೇಂದ್ರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯವು ಒಂದು ವೆಬ್ ಪೋರ್ಟಲ್ ಆರಂಭಿಸಿ ಸೈಬರ್ ಬೆದರಿಕೆ–ಅಪರಾಧ, ಮಕ್ಕಳ ಮೇಲಿನ ದೌರ್ಜನ್ಯಗಳು ಇತ್ಯಾದಿಗಳ ಬಗ್ಗೆ ನೇರವಾಗಿ ದೂರು ದಾಖಲಿಸುವ ವ್ಯವಸ್ಥೆ ಮಾಡಿದೆ. ಇದು ಆರೋಗ್ಯಕರ ಬೆಳವಣಿಗೆ. ಆದರೆ ಬೇಟಿ ಬಚಾವೊ – ಬೇಟಿ ಪಡಾವೊ ಯೋಜನೆಯ ಅನುಷ್ಠಾನದ ಹೊರತಾಗಿಯೂ ಹರ್ಯಾಣ, ಪಂಜಾಬ್‌ಗಳಂತಹ ರಾಜ್ಯಗಳಲ್ಲಿ ಲಿಂಗಾನುಪಾತ ಸುಧಾರಿಸಿಲ್ಲ ಎಂದು ಸಿಎಜಿ ವರದಿಗಳೂ ಸಹ ಸೂಚಿಸುತ್ತಿವೆ. ತ್ರಿವಳಿ ತಲಾಖ್ ತೀರ್ಪಿರಬಹುದು, ಇನ್ನೊಂದಿರಬಹುದು, ಈ ನಾಲ್ಕು ವರ್ಷಗಳಲ್ಲಿ ನಾವು ಲಿಂಗ ಸಮಾನತೆಗೆ ಸಂಬಂಧಪಟ್ಟಂತೆ ಏನೆಲ್ಲಾ ಆರೋಗ್ಯಕರ ಬೆಳವಣಿಗೆಗಳನ್ನು ಕಂಡಿದ್ದೇವೋ, ಅವುಗಳೆಲ್ಲವೂ ಸಾಧ್ಯವಾಗಿರುವುದು ನ್ಯಾಯಾಲಯಗಳಿಂದಲೇ ಹೊರತು ಸರ್ಕಾರಗಳಿಂದಲ್ಲ. ಭಾರತೀಯ ಪ್ರಜೆಗಳಾದ ನಾವು ಸರ್ವೋಚ್ಚ ನ್ಯಾಯಾಲಯದಲ್ಲಿ ತ್ರಿವಳಿ ತಲಾಖ್ ವಿರುದ್ಧ ಹೋರಾಟ ನಡೆಸಿದೆವು. ಅದರಲ್ಲಿದ್ದ ನಾವೆಲ್ಲರೂ ಧ್ವನಿಗೂಡಿಸಿ ತ್ರಿವಳಿ ತಲಾಖ್ ಸಂವಿಧಾನಬಾಹಿರ ಎಂದೆವು. ನ್ಯಾಯಾಲಯವೂ ನಮ್ಮ ವಾದವನ್ನು ಅಂಗೀಕರಿಸಿತು. ಲಿಂಗತ್ವ ನ್ಯಾಯದ ಪರವಾಗಿರುವ ಇತ್ತೀಚಿನ ಎರಡು ಪ್ರಮುಖ ತೀರ್ಪುಗಳೆಂದರೆ ತ್ರಿವಳಿ ತಲಾಖ್ ವಿರುದ್ಧದ ಆದೇಶ ಮತ್ತು ಶಬರಿಮಲೆ ಸಂಬಂಧಿಸಿದ ತೀರ್ಪು ಎಂದೇ ಹೇಳಬಹುದು. ಆದರೆ ಈ ಎರಡು ತೀರ್ಪುಗಳ ಅನುಷ್ಠಾನದ ವಿಷಯದಲ್ಲಿ ಸರ್ಕಾರದ ಆಷಾಢಭೂತಿತನ ಎದ್ದುಕಾಣುತ್ತದೆ.

ತ್ರಿವಳಿ ತಲಾಖ್ ವಿಚಾರದಲ್ಲಿ ಕೇಂದ್ರ ಸರ್ಕಾರ ಮಾಡಿದ್ದೇನು? ತಾನು ಮುಸ್ಲಿಮ್ ಮಹಿಳೆಯರ ಪರವೆಂಬ ತೋರ್ಪಡಿಕೆಗಾಗಿ ತ್ರಿವಳಿ ತಲಾಖ್ ನಿಷೇಧಿಸಿಬಿಟ್ಟೆನೆಂದು ಹೇಳಿಕೊಂಡಿತು. ತ್ರಿವಳಿ ತಲಾಖ್ ನಿಷೇಧಿಸುವುದೇನೋ ಸರಿಯೇ, ಅದು ಸಂವಿಧಾನಬಾಹಿರವೂ ಹೌದು. ಆದರೆ ಕಾನೂನು ರಚಿಸಿ ಅದನ್ನು ಅಪರಾಧ ಎಂದು ಪರಿಗಣಿಸಿದ್ದೇಕೆ? ಮಹಿಳಾ ಸಂಘಟನೆಗಳು ತ್ರಿವಳಿ ತಲಾಖ್ ಸಂವಿಧಾನಬಾಹಿರ ಎಂಬುದನ್ನು ಸ್ವಾಗತಿಸಿದರೂ ಅದರ ಅಪರಾಧೀಕರಣವನ್ನು ಒಪ್ಪಲಿಲ್ಲ. ಏಕೆಂದರೆ ತ್ರಿವಳಿ ತಲಾಖ್ ಸಂವಿಧಾನಬಾಹಿರವೆಂದಾದರೆ ಅದನ್ನು ಉಚ್ಚರಿಸಿದರೂ ವಿಚ್ಛೇದನವಾಗುವುದಿಲ್ಲ! ಅದರ ಉಚ್ಚಾರದಿಂದ ಕಾನೂನಾತ್ಮಕವಾಗಿ ಪರಿಣಾಮವಾಗದು ಎಂಬುದು ಸರಳಜ್ಞಾನ. ತ್ರಿವಳಿ ತಲಾಖ್ ಮಸೂದೆ ಸಂಸತ್ತಿನ ಮುಂದಿದೆ. (ಲೋಕಸಭೆಯಲ್ಲಿ ಅಂಗೀಕಾರಗೊಂಡು ಈಗ ರಾಜ್ಯಸಭೆಯಲ್ಲಿ ನಿಂತಿದೆ).

ಶಬರಿಮಲೆ ತೀರ್ಪಿನ ಅನುಷ್ಠಾನದ ಕುರಿತ ಧೋರಣೆ ಹೇಗಿದೆ ನೋಡಿ. ಇನ್ನೂ ನ್ಯಾಯಾಲಯದ ಆದೇಶವನ್ನು ಜಾರಿಗೊಳಸಿಲ್ಲ, ಇನ್ನೂ ಮಹಿಳೆಯರು ದೇವಸ್ಥಾನವನ್ನು ಪ್ರವೇಶಿಸಿಲ್ಲ. (ಈಗ ಪ್ರವೇಶ ದೊರಕಿದೆ.) ತೀರ್ಪಿನ ಅನುಷ್ಠಾನವನ್ನು ವಿರೋಧಿಸಿ ಪ್ರತಿಭಟನೆಗಳು ಕೂಡ ಜರುಗುತ್ತಿವೆ ಎಂಬುದು ನಮಗೆ ತಿಳಿದಿದೆ. ಬಿಜೆಪಿ ಶಬರಿಮಲೆಯಲ್ಲಿ ಪೊಲೀಸರನ್ನು ನ್ಯಾಯಾಲಯದ ಆದೇಶದ ಪರವಾಗಿ ಕೆಲಸಮಾಡಿ ಎಂದು ಹೇಳುವ ಬದಲು ತಮ್ಮ ಆತ್ಮಸಾಕ್ಷಿಯ ಪರವಾಗಿ ಕಾರ್ಯನಿರ್ವಹಿಸಿ ಎಂದು ತೀರ್ಪಿನ ಅನುಷ್ಠಾನಕ್ಕೆ ಅಡ್ಡಗಾಲು ಹಾಕಿರುವುದು ದಾಖಲಾಗಿದೆ. ಒಂದು ಆಳುವ ಪಕ್ಷ ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಜಾರಿಗೊಳಸಬಾರದೆಂದು ಜನರನ್ನು ಆಗ್ರಹಿಸಿ ಬೀದಿಗಿಳಸುವುದನ್ನು ನೋಡುತ್ತಿರುವುದು ನಾನು ಇದೇ ಮೊದಲು. ಇದು ನನಗೆ ಆಘಾತ ತಂದಿದೆ. ಸರ್ವೋಚ್ಚ ನ್ಯಾಯಾಲಯದ ಪ್ರತಿಯೊಂದು ಆದೇಶವನ್ನೂ ಪಾಲನೆ ಮಾಡಬೇಕಾದ ಆಡಳಿತಾರೂಢರು ಅದರ ವಿರುದ್ಧವೇ ಪ್ರತಿಭಟನೆಗೆ ನಿಂತಾಗ ಅವರೇ ನ್ಯಾಯಾಲಯದ ಎದುರು ಚರ್ಚೆಯ ವಿಷಯವಾಗಬೇಕಾಗುತ್ತಾರೆ.

ನಿಜವಾಗಿಯೂ ಲಿಂಗತ್ವ ನ್ಯಾಯ ಕಲ್ಪಿಸುವುದೆಂದರೆ ಮಹಿಳೆಯರಿಗೆ ಕರ್ತೃತ್ವದ ಅಧಿಕಾರ ನೀಡುವುದು, ಅವರು ಬದುಕಿನಲ್ಲಿ ಏನು ಮಾಡಲಿಚ್ಛಿಸುವರೋ ಅದರ ತೀರ್ಮಾನವನ್ನು ಅವರೇ ಕೈಗೊಳ್ಳಲು ಬಿಡುವುದು.

ಮಹಿಳೆಯನ್ನು ಎಲ್ಲಾ ಕ್ಷೇತ್ರಗಳಲ್ಲೂ ಸಬಲೀಕರಣಗೊಳಿಸುವುದರ ಮುಖಾಂತರ, ಅದರಲ್ಲೂ ಅವಳನ್ನು ಆರ್ಥಿಕವಾಗಿ ಸದೃಢಗೊಳಿಸುವುದರ ಮೂಲಕ ವಿಮೋಚನೆಗೊಳಿಸಬೇಕಿದೆ. ಮೊದಲು, ಮಹಿಳೆ ತನ್ನ ಕಾಲ ಮೇಲೆ ತಾನು ನಿಲ್ಲುವಂತಾಗಬೇಕು; ಅವಳ ಆರ್ಥಿಕ ಅವಲಂಬನೆ ಹೋಗಬೇಕು. ಅವಳು ವಿವಾಹಿತೆಯಾಗಿರಲಿ, ಅವಿವಾಹಿತೆಯಾಗಿರಲಿ, ತನ್ನ ಜೀವನಾಧಾರವನ್ನು ಗಳಿಸುವ ಹಕ್ಕು ಮಹಿಳೆಗೆ ದೊರಕಬೇಕಿದೆ. ಮಹಿಳೆಯರ ಮೇಲಿನ ಕೌಟುಂಬಿಕ ಹಿಂಸೆ ಅಗಾಧವಾಗಿದೆ ಎಂದು ನನ್ನ ವೃತ್ತಿಜೀವನದಿಂದ ಕಂಡುಕೊಂಡಿದ್ದೇನೆ. ವಿವಾಹಗಳು ವಿಫಲವಾದಾಗ ಮಹಿಳೆಯರು ಹಣಕಾಸಿನ ಮುಗ್ಗಟ್ಟನ್ನು ಎದುರಿಸದೆ ತಮ್ಮ ಬದುಕನ್ನು ಕಟ್ಟಿಕೊಳ್ಳುವ ಅಧಿಕಾರ ನೀಡಬೇಕೆಂದು ಒತ್ತಿ ಹೇಳುತ್ತಿದ್ದೇನೆ. ಬಹಳಷ್ಟು ಮಹಿಳೆಯರು ತಮ್ಮ ವೈವಾಹಿಕ ಜೀವನ ತೀರಾ ಕಷ್ಟದಾಯಕವಾಗಿದ್ದರೂ ಆರ್ಥಿಕ ಅವಲಂಬನೆಯಿಂದಾಗಿ ನೋವುಗಳನ್ನು ಅನುಭವಿಸಿಕೊಂಡೇ ಬದುಕು ನಡೆಸುತ್ತಿರುತ್ತಾರೆ. ಒಂದು ದೃಷ್ಟಿಕೋನ – ಅವಳಿಗೆ ಬದುಕು ಸೃಷ್ಟಿಸಿಕೊಳ್ಳುವ ಅಧಿಕಾರ ನೀಡುವುದು. ಇನ್ನೊಂದು ಹಿಂದುತ್ವದ ದೃಷ್ಟಿಕೋನ – ಮಹಿಳೆಯನ್ನು ಗಂಡುಮಕ್ಕಳನ್ನು ಹೆರುವ ಯಂತ್ರವೆಂದಷ್ಟೇ ಪರಿಗಣಿಸುವುದು.

ನಾನು ನನ್ನ ದೇಶವನ್ನು ಪ್ರೀತಿಸುತ್ತೇನೆ. ನನ್ನ ವೃತ್ತಿಬದುಕನ್ನು ಲಿಂಗತ್ವ ನ್ಯಾಯಕ್ಕೆ ಮುಡುಪಾಗಿಟ್ಟಿದ್ದೇನೆ. ನಮ್ಮ ಸಂವಿಧಾನ ಇಂದು ಅಪಹರಣಕ್ಕೆ ತುತ್ತಾಗುತ್ತಿರುವ ಅಪಾಯದಲ್ಲಿದೆ. ಸಂವಿಧಾನವನ್ನು ಸಂರಕ್ಷಿಸುವುದು ನಮ್ಮ ಕರ್ತವ್ಯವಾಗಿದೆ ಎಂದು ನಂಬಿದ್ದೇನೆ. ನಾನು ಪ್ರತಿನಿತ್ಯವೂ ಸರ್ವೋಚ್ಚ ನ್ಯಾಯಾಲಯದಲ್ಲಿ ಮಹಿಳೆಯರ ಹಕ್ಕುಗಳ ಪರವಾಗಿ ವಾದ ಮಂಡಿಸುತ್ತಾ ನನ್ನ ನಾಗರಿಕ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದೇನೆ.

*(ಸರ್ವೋಚ್ಚ ನ್ಯಾಯಾಲಯದ ಹಿರಿಯ ನ್ಯಾಯವಾದಿ ಇಂದಿರಾ ಜೈಸಿಂಗ್ ಮಂಗಳೂರಿನಲ್ಲಿ ೧೭.೧೨.೨೦೧೮ರಂದು ದಿ॥ ಬಿ. ವಿ. ಕಕ್ಕಿಲ್ಲಾಯ ಸ್ಮರಣಾರ್ಥ ಉಪನ್ಯಾಸ ಕಾರ್ಯಕ್ರಮದಲ್ಲಿ ನೀಡಿದ ಉಪನ್ಯಾಸದ ಭಾವಾನುವಾದ)*

**ಜ್ಯೋತಿ ಎ.**
ಫ್ಲಾಟ್ ನಂ. ಎಸ್–೩, ನಂ. ೩೭, "ಅನಂತರತ್ನ ರೆಸಿಡೆನ್ಸಿ"
೧೩ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು – ೫೬೦ ೦೪೦
ಇಮೇಲ್ : jyothia67@gmail.com

## 'ಹೊಸತು' ಪ್ರಾಯೋಜಕರಿಗೆ ಹೃತ್ಪೂರ್ವಕ ಧನ್ಯವಾದಗಳು

ನಾವು ಓದುಗರಲ್ಲಿ ಮಾಡಿಕೊಂಡ ವಿಶೇಷ ಮನವಿಗೆ ಸ್ಪಂದಿಸಿ ಆರ್ಥಿಕ ಬೆಂಬಲ ನೀಡುವ ಮೂಲಕ ನೆರವಾದ ಕೆಳಕಂಡ ಆತ್ಮೀಯ ಬಂಧುಗಳಿಗೆ 'ಹೊಸತು' ಬಳಗದ ಕೃತಜ್ಞತೆಗಳು.

1. **ಡಾ॥ ಕೆ. ಎನ್. ಪ್ರಸಾದ್**
   ಬೆಂಗಳೂರು ... **ರೂ. 5,000/–**
2. **ಡಾ॥ ಹೆಚ್. ವೈಜಯಂತಿ**
   ಕಾರವಾರ ... **ರೂ. 5,000/–**
3. **ಶ್ರೀ ಮುರಳಿಧರ ಚಿಕ್ಕಮಗಳೂರು**
   ಬೆಂಗಳೂರು ... **ರೂ. 10,000/–**
4. **ಶ್ರೀ ಎಂ. ಎನ್. ಕೇಶವರಾವ್**
   ಬೆಂಗಳೂರು ... **ರೂ. 5,000/–**
5. **ಶ್ರೀ ಸಿ. ವಿ. ರಘುಪತಿ**
   ಬೆಂಗಳೂರು ... **ರೂ. 5,000/–**
6. **ಶ್ರೀ ಕೆ. ಕಿರಣ್ ಚೌಬೀನ**
   ಬೆಂಗಳೂರು ... **ರೂ. 5,000/–**

'ಹೊಸತು' ಓದುಗರು, ಹಿತೈಷಿಗಳು ಮುಂದೆಯೂ ಇದೇ ರೀತಿ ಸಹಕರಿಸಿ ಪತ್ರಿಕೆಯು ಆರ್ಥಿಕವಾಗಿ ಸದೃಢಗೊಳ್ಳಲು ನೆರವಾಗಬೇಕೆಂದು ವಿನಮ್ರವಾಗಿ ಕೋರುತ್ತೇವೆ.

**– ಪ್ರಕಾಶಕ**

# ಈಶ್ವರಯ್ಯ ಅನಂತಪುರ

## – ಒಂದು ನೆನಪು



ಹಿರಿಯ ಪತ್ರಕರ್ತ, ಅಂಕಣಕಾರ, ಕಥೆಗಾರ, ಕಲಾಸಕ್ತ ಮತ್ತು ವಿಮರ್ಶಕ ಅನಂತಪುರದ ಈಶ್ವರಯ್ಯ, ೭೮ ವರ್ಷಗಳ ಜೀವನಯಾತ್ರೆಯನ್ನು ಪೂರೈಸಿ ದಿನಾಂಕ ೩೧–೧೨–೨೦೧೮ರಂದು ನಿಧನರಾದರು. ಅವರಿಗೆ ನವಕರ್ನಾಟಕ ಬಳಗದ ನಮನಗಳು.

ನವಕರ್ನಾಟಕದ ಹಿತೈಷಿ ಮತ್ತು ಪ್ರಕಾಶನದ ಚಟುವಟಿಕೆಗಳನ್ನು ಮೆಚ್ಚುತ್ತಿದ್ದ ಅವರು, ೧೯೮೧ರಲ್ಲಿ ವಿಶ್ವಕಥಾಕೋಶ ಮಾಲಿಕೆಯ ೧೬ನೇ ಸಂಪುಟ 'ಅವಸಾನ'ವನ್ನು (ಗ್ರೀಸ್, ಸೈಪ್ರಸ್ ಮತ್ತು ಟರ್ಕಿ ಕಥೆಗಳು) ಚೊಕ್ಕವಾಗಿ ಅನುವಾದಿಸಿಕೊಟ್ಟು ಸಹಕರಿಸಿದ್ದರು. ಉತ್ತಮ ಅನುವಾದವೆಂದು ಸಂಪಾದಕ ಬಳಗದ ಮೆಚ್ಚುಗೆಗೆ ಪಾತ್ರವಾದ ಕೃತಿ ಅದು.

ಈಶ್ವರಯ್ಯ ಕಾಸರಗೋಡು ಜಿಲ್ಲೆಯ ಕುಂಬಳೆಗೆ ೫ ಕಿ. ಮೀ. ದೂರದಲ್ಲಿರುವ ಅನಂತಪುರದಲ್ಲಿ ೧೯೪೦ರ ಆಗಸ್ಟ್ ೧೪ರಂದು ಜನಿಸಿದರು. ಖ್ಯಾತ ಅನಂತಪದ್ಮನಾಭಸ್ವಾಮಿ ದೇವಾಲಯವಿರುವ ಊರು ಅದು. ಅಮೃತಸರದ ಸ್ವರ್ಣ ಮಂದಿರದಂತೆ, ಸರೋವರದ ಮಧ್ಯೆ ದೇವಾಲಯವಿರುವುದು ಅದರ ವೈಶಿಷ್ಟ್ಯ. ಪ್ರಾಥಮಿಕ ಶಿಕ್ಷಣವನ್ನು ಹುಟ್ಟೂರಿನಲ್ಲಿ ಮತ್ತು ಹೈಸ್ಕೂಲು ಶಿಕ್ಷಣವನ್ನು ಬದಿಯಡ್ಕದಲ್ಲಿ ಪೂರೈಸಿ, ಕಾಲೇಜು ಕಲಿಯಲು ಅವರು ಉಡುಪಿಗೆ ಹೋದರು. ಅಲ್ಲಿನ ಸಾಂಸ್ಕೃತಿಕ ವಾತಾವರಣ ಮತ್ತು ಇಂಗ್ಲಿಷ್ ಸಾಹಿತ್ಯದ ವಿದ್ಯಾರ್ಥಿಯಾದ ಅವರಿಗೆ ಅಲ್ಲಿಯೇ ಪತ್ರಿಕೆಯಲ್ಲಿ ಕೆಲಸ ಮಾಡಲು ಒದಗಿ ಬಂದ ಅವಕಾಶ ಅವರನ್ನು ಉಡುಪಿಯಲ್ಲಿಯೇ ಉಳಿಸಿಕೊಂಡಿತು.

'ತುಷಾರ' ಮಾಸಪತ್ರಿಕೆಯ ಸ್ಥಾಪಕ ಸಂಪಾದಕರಾಗಿ, ಪತ್ರಿಕೆಗೆ ಭದ್ರವಾದ ಬುನಾದಿ ಹಾಕಿಕೊಟ್ಟರು. ಅವರು ಅನುಸರಿಸಿದ ಕ್ರಮಗಳಿಂದ ಪತ್ರಿಕೆ ಅಪಾರ ಸಂಖ್ಯೆಯ ಓದುಗರನ್ನು ಗಳಿಸಲು, ಪ್ರಸಾರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಲು ಕಾರಣರಾದರು. ತುಷಾರದಲ್ಲಿ ತಮ್ಮ ಒಂದು ಕವಿತೆ, ಕಥೆ, ಅಥವಾ ಲೇಖನ ಪ್ರಕಟವಾದ ಬಗ್ಗೆ ಸಂಭ್ರಮಿಸುವ, ಅದನ್ನು ಹೆಮ್ಮೆಯಿಂದ ಹೇಳಿಕೊಳ್ಳುವ ಬಳಗ ಹುಟ್ಟಿಕೊಳ್ಳಲು ಈಶ್ವರಯ್ಯನವರ ವ್ಯಕ್ತಿತ್ವ ಸದ್ದಿಲ್ಲದೆ ಕೆಲಸ ಮಾಡಿತ್ತು. ಕೆಲವು ಮಿತ್ರರು ಅವರನ್ನು 'ತುಷಾರಯ್ಯ' ಎಂದೂ ಕರೆಯುತ್ತಿದ್ದುದುಂಟು! ಅಷ್ಟರಮಟ್ಟಿಗೆ ಅವರು ತುಷಾರಕ್ಕೆ ಅಂಟಿಕೊಂಡಿದ್ದರು. ಜೊತೆಗೆ ಉದಯವಾಣಿ ಸಾಪ್ತಾಹಿಕ ಪುರವಣಿಯನ್ನು ಅವರೇ ರೂಪಿಸುತ್ತಿದ್ದರು. ಬರೆಯಬಲ್ಲವರನ್ನು ಗುರುತಿಸಿ, ಅಂಥವರಿಗೆ ಪ್ರೋತ್ಸಾಹ ನೀಡುತ್ತಿದ್ದರು. ಅವರೊಂದಿಗೆ ಸಂಪರ್ಕವಿರಿಸಿಕೊಳ್ಳುತ್ತಿದ್ದರು. ಅವರೇ ನೆನಪು ಮಾಡಿಕೊಳ್ಳುವಂತೆ ಹೀಗೆ ಸಂಪರ್ಕವಿರಿಸಿಕೊಳ್ಳುವುದನ್ನು ಕಲಿತದ್ದು 'ಕಸ್ತೂರಿ' ಸಂಪಾದಕರಾಗಿದ್ದ ಪಾ. ವೆಂ. ಆಚಾರ್ಯರಿಂದ. ಇವರು ಬರೆಯಲು ಪ್ರಾರಂಭಿಸಿದ ದಿನಗಳಲ್ಲಿ ಪಾ. ವೆಂ. ನೀಡಿದ್ದ ಸಲಹೆ ಸೂಚನೆಗಳು, ಸಂಪಾದಕನ ಕುರ್ಚಿಯಲ್ಲಿ ಕುಳಿತಾಗ ನೆರವಿಗೆ ಬಂದವು.

ಅವರ ಈ ನಡವಳಿಕೆಯ ಪರಿಚಯ ನನಗೂ ಆಗಿದೆ. ತುಷಾರದಲ್ಲಿ ನನ್ನ ಕಥೆಗಳನ್ನು ಪ್ರಕಟಿಸುವ ಮೂಲಕ ಪ್ರೋತ್ಸಾಹಿಸಿದ್ದಾರೆ. ತುಷಾರದಲ್ಲಿ ಪ್ರಕಟವಾದ ಲೇಖನದ ಸಂಭಾವನೆಯ ಚೆಕ್ ಕಳಿಸುವಾಗ, ಬೇರೆ ಲೇಖನ ಅಥವಾ ಕಥೆ ಕಳಿಸಿಕೊಡಿ ಎಂಬ ಸಾಲು ಇದ್ದೇ ಇರುತ್ತಿತ್ತು. ಒಮ್ಮೆ, ಹಿಪ್ಪಿಗಳ ಬಗ್ಗೆ ಲೇಖನ ಬರೆದುಕೊಡುವಂತೆ ಅವರಿಂದ ಪತ್ರ ಬಂದಾಗ ನನಗಾದ ಆಶ್ಚರ್ಯ ಅಷ್ಟಿಷ್ಟಲ್ಲ! ಆವರೆಗೆ ಹಿಪ್ಪಿ ಸಂಸ್ಕೃತಿಯ ಬಗೆಗೆ ತಲೆಕೆಡಿಸಿಕೊಳ್ಳದಿದ್ದ ನಾನು ಸಾಮಗ್ರಿಗಾಗಿ ಲೈಬ್ರರಿಯ ಪುಸ್ತಕಗಳ ಪುಟ ಮಗುಚಬೇಕಾಯಿತು. ಹಾಗೆಯೇ ಕಲಾಕ್ಷೇತ್ರದ ಆದ್ಯ ಪ್ರವರ್ತಕಿ ರುಕ್ಮಿಣಿ ದೇವಿ ಅರುಂಡೇಲರ ಕುರಿತು ನನ್ನಿಂದ ಲೇಖನ ಬರೆಸಿ ಪ್ರಕಟಿಸಿದರು. ಅವರ ಸ್ನೇಹದ ನಡವಳಿಕೆ ಮತ್ತು ಪ್ರೋತ್ಸಾಹದ ಕಾರಣ ನನ್ನ ಕಥೆಗಳೇ ಅಲ್ಲದೆ ಅನೇಕ ಸಚಿತ್ರ ಮತ್ತು ಪ್ರವಾಸ ಲೇಖನಗಳು ಉದಯವಾಣಿ ಸಾಪ್ತಾಹಿಕದಲ್ಲಿ ಪ್ರಕಟವಾದವು. ತುಷಾರದಲ್ಲಿ ಸಂಗೀತ ಲೋಕದ ಬಾಲಪ್ರತಿಭೆಗಳ ಬಗ್ಗೆ ಬರೆದ ಲೇಖನಗಳು ಪ್ರಕಟವಾದವು.

ಅವರು ಹುಟ್ಟಿದ ಮನೆಯಲ್ಲಿ ಸಂಗೀತದ ವಾತಾವರಣವಿತ್ತು. ತಂದೆ ಯಕ್ಷಗಾನ ಪ್ರಿಯರು.

ಅವರು ಲೇಖನಗಳು ಮತ್ತು ವರದಿಗಳ ಜೊತೆಗೆ ಪ್ರಕಟಿಸಲು, ಫೋಟೋಗ್ರಾಫರುಗಳು ಒದಗಿಸುತ್ತಿದ್ದ ಚಿತ್ರಗಳು ಅವರಿಗೆ ತೃಪ್ತಿ ನೀಡುತ್ತಿರಲಿಲ್ಲ. ಲೇಖನಗಳಿಗೆ ಸೂಕ್ತವಾಗುವಂತೆ ಫೋಟೋ ತೆಗೆಯಲು ಸಹಾಯಕವಾಗುವಂತೆ ತಾವೇ ಫೋಟೋಗ್ರಫಿಯನ್ನು ಕಲಿತರು. ಆ ಕಲೆ ಕರಗತವಾದನಂತರ, 'ಫೋಕಲ್ ಫೋಟೋ ಕ್ಲಬ್' ಸ್ಥಾಪಿಸಿ, ಹಲವು ಕಿರಿಯ ಹವ್ಯಾಸಿ ಫೋಟೋಗ್ರಾಫರುಗಳನ್ನು ತರಬೇತುಗೊಳಿಸಿದರು. ಕೆಲವು ಶಾಲಾ ಕಾಲೇಜುಗಳಿಗೂ ಅದನ್ನು ವಿಸ್ತರಿಸಿದರು.

**ಪರಂಜ್ಯೋತಿ**

ಭಾಗವತಿಕೆ ಮಾಡುತ್ತಿದ್ದರು. ಸಣ್ಣಪ್ರಾಯದಿಂದಲೇ ಸಂಗೀತ ಅವರ ಕಿವಿಗೆ ಬೀಳುತ್ತ, ಸಂಗೀತವನ್ನು ಆಸ್ವಾದಿಸುವುದನ್ನು ರೂಢಿಸಿಕೊಂಡರು. ಒಂದೆರಡು ವರ್ಷ ಸಂಗೀತ ಪಾಠ ಹೇಳಿಸಿಕೊಂಡರು. ಕೊಳಲು ಮತ್ತು ಇತರ ಸಂಗೀತ ವಾದ್ಯಗಳನ್ನು ನುಡಿಸುವುದನ್ನು ಕಲಿತರು. ಉಡುಪಿಯಲ್ಲಿ ಕಾಲೇಜಿಗೆ ಸೇರಿದನಂತರ ಸಂಗೀತ ಕಲಿಕೆ ನಿಂತಿತಾದರೂ, ಸಂಗೀತ ಕೇಳಿಸಿಕೊಳ್ಳುವುದನ್ನು ಮುಂದುವರಿಸಿದರು. ದಿನಕಳೆದಂತೆ ಸಂಗೀತ ಅವರನ್ನು ಆವರಿಸಿಕೊಂಡಿತು. ಎಲ್ಲ ಬಗೆಯ ಸಂಗೀತ ಕೇಳಿಸಿಕೊಳ್ಳುವುದನ್ನು ರೂಢಿಸಿಕೊಂಡು ಅವರೊಬ್ಬ ಮಹಾನ್ ಶ್ರೋತೃವಾದರು. ಸಂಗೀತದ ಸೂಕ್ಷ್ಮಗಳು ಒಂದೊಂದಾಗಿ ಎದೆಗೆ ಹೊಕ್ಕು, ಸಂಗೀತದ ಬಗ್ಗೆ ಅಧಿಕಾರವಾಣಿಯಿಂದ ಮಾತಾಡಬಲ್ಲ ತಜ್ಞರಾದರು. ಉದಯವಾಣಿ ಅಂಕಣದಲ್ಲಿ ಪ್ರಕಟವಾಗುತ್ತಿದ್ದ ಸಂಗೀತ ವಿಮರ್ಶಾ ಲೇಖನಗಳು, ಆ ಕ್ಷೇತ್ರದಲ್ಲಿ ಅವರಿಗೆ ದಕ್ಕಿದ್ದ ತಿಳಿವಳಿಕೆಯ ಸಂಕೇತವಾಗಿದ್ದವು. ಹಲವರ ಹೊಗಳಿಕೆಗೆ, ಕೆಲವರ ತೆಗಳಿಕೆಗೂ ಪಾತ್ರವಾಗಿದ್ದವು. ಉಡುಪಿಯಲ್ಲಿ 'ರಾಗಧ್ವನಿ' ತಂಡವನ್ನು ಸ್ಥಾಪಿಸಿ ನಡೆಸಿದ ಚಟುವಟಿಕೆಗಳು ಅನೇಕ ಸಂಗೀತ ರಸಿಕರು ರೂಪುಗೊಳ್ಳುವುದಕ್ಕೆ ಕಾರಣವಾಯಿತು.




ಅವರ ಲೇಖನಗಳು ಮತ್ತು ವರದಿಗಳ ಜೊತೆಗೆ ಪ್ರಕಟಿಸಲು, ಫೋಟೋಗ್ರಾಫರುಗಳು ಒದಗಿಸುತ್ತಿದ್ದ ಚಿತ್ರಗಳು ಅವರಿಗೆ ತೃಪ್ತಿ ನೀಡುತ್ತಿರಲಿಲ್ಲ. ಲೇಖನಗಳಿಗೆ ಸೂಕ್ತವಾಗುವಂತೆ ಫೋಟೋ ತೆಗೆಯಲು ಸಹಾಯಕವಾಗುವಂತೆ ತಾವೇ ಫೋಟೋಗ್ರಫಿಯನ್ನು ಕಲಿತರು. ಆ ಕಲೆ ಕರಗತವಾದನಂತರ, 'ಫೋಕಲ್ ಫೋಟೋ ಕ್ಲಬ್' ಸ್ಥಾಪಿಸಿ, ಹಲವು ಕಿರಿಯ ಹವ್ಯಾಸಿ ಫೋಟೋಗ್ರಾಫರುಗಳನ್ನು ತರಬೇತುಗೊಳಿಸಿದರು. ಕೆಲವು ಶಾಲಾ ಕಾಲೇಜುಗಳಿಗೂ ಅದನ್ನು ವಿಸ್ತರಿಸಿದರು.

ಸಂಗೀತ, ಯಕ್ಷಗಾನ, ನಾಟಕ, ನೃತ್ಯ, ಫೋಟೋಗ್ರಫಿ – ಹೀಗೆ ಅವರ ಆಸಕ್ತಗಳು ಹಲವು. ಪತ್ರಿಕೆಯ ಕೆಲಸದ ಒತ್ತಡದಿಂದಾಗಿ, ಸಣ್ಣಕಥೆಗಳ ಬರವಣಿಗೆಯನ್ನು ಮುಂದುವರಿಸಲು ಅವರಿಂದ ಸಾಧ್ಯವಾಗಲಿಲ್ಲ. ತುಷಾರದಲ್ಲಿ ಅವರು ಬರೆಯುತ್ತಿದ್ದ ಕೌಟುಂಬಿಕ ಅಂಕಣ ಬರಹ 'ಸರಸ' ಬಹಳ ಜನಪ್ರಿಯವಾಗಿತ್ತಲ್ಲದೆ, ಹೆಚ್ಚು ಸಂಖ್ಯೆಯ ಓದುಗರನ್ನು ಗಳಿಸಿತ್ತು.

ನಮ್ಮ ಮೊದಲ ಭೇಟಿಯಾದದ್ದು ಮದರಾಸಿನಲ್ಲಿ. ಕೇಂದ್ರ ಸಾಹಿತ್ಯ ಅಕಾಡೆಮಿ ಏರ್ಪಡಿಸಿದ್ದ ಸಾಹಿತ್ಯ ಕಮ್ಮಟದಲ್ಲಿ ಅವರು ಭಾಗವಹಿಸಿದ್ದರು. ನಾವು ತೀರಾ ಅಪರಿಚಿತರೇನೂ ಆಗಿರಲಿಲ್ಲ. ಅವರ ಸಹೋದರ ಶ್ರೀಕೃಷ್ಣಯ್ಯ ಅನಂತಪುರ ಸೇರಿದಂತೆ ನಾವು ಅನೇಕ ಯುವ ಬರಹಗಾರರು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ನಮ್ಮ ಕತೆ ಕವನಗಳ ಮೂಲಕ ಆಗಲೇ ಸಾಕಷ್ಟು ಪರಿಚಿತರಾಗಿದ್ದೆವು. ಆ ಭೇಟಿಯ ಸಂದರ್ಭದಲ್ಲಿ ನಾವು ಮಾತಾಡಿಕೊಂಡದ್ದು ಆದಾಗ ನಾವು ತೊಡಗಿಕೊಂಡಿದ್ದ ಫೋಟೋಗ್ರಫಿ ಹವ್ಯಾಸದ ಬಗ್ಗೆ. ಸಮಾನಾಸಕ್ತರ ಮಧ್ಯೆ ನಡೆಯುತ್ತಿದ್ದ ವಿಚಾರವಿನಿಮಯ!

ಯಕ್ಷಗಾನಪ್ರಿಯರಾಗಿದ್ದ ಅವರು, ಯಕ್ಷಗಾನ ಪ್ರಸಂಗಗಳ ಕ್ಯಾಸೆಟ್ ಮಾಡಿಸಲು ಮದರಾಸಿಗೆ ಬಂದಾಗ ನಮ್ಮ ಭೇಟಿಯಾಗುತ್ತಿತ್ತು. ಆಗಿನ ಅತ್ಯುತ್ತಮ ರೆಕಾರ್ಡಿಂಗ್ ಕಂಪೆನಿ ಎಂದು ಹೆಸರಾಗಿದ್ದ ಮಹೇಶರ ಸಂಗೀತಾ ಸಂಸ್ಥೆಯಲ್ಲಿ ಅವು ತಯಾರಾಗುತ್ತಿದ್ದವು. ಯಕ್ಷಗಾನದಲ್ಲಿ ಖ್ಯಾತರಾಗಿದ್ದ ಕುಂಬಳೆ ಸುಂದರ ರಾವ್, ಡಾ॥ ಪ್ರಭಾಕರ ಜೋಶಿ ಹಾಗೂ ಇತರರು ಅವರೊಂದಿಗಿರುತ್ತಿದ್ದರು. ನಮ್ಮ ಮಧ್ಯೆ ಫೋಟೋಗ್ರಫಿ ಸಂಬಂಧದ ಮಾತುಕತೆಗಳು ನಡೆಯುತ್ತಿದ್ದವು. ಒಮ್ಮೆ ಉಡುಪಿಗೆ ಹೋಗಿದ್ದಾಗ ಅರ್ಧದಿನ ಅವರೊಂದಿಗೆ ಕಳೆದಿದ್ದೆ. ಉಡುಪಿ ಬೀದಿಯಲ್ಲಿ ತಿರುಗಾಡಿದ್ದೆವು. ಅವರ ಕೋಣೆಯಲ್ಲಿ ರಾಶಿ ಬಿದ್ದಿದ್ದ ಕ್ಯಾಸೆಟ್‌ಗಳಿಂದ ಮರಾಠಿ ಅಭಂಗಗಳನ್ನು ಕೇಳುತ್ತ ಮಾತುಕತೆಯಲ್ಲಿ ತೊಡಗಿದ್ದೆವು.

ಬೆಂಗಳೂರಿಗೆ ಬಂದನಂತರ, ಹಿಂದಿನಂತೆ ಲೇಖನಗಳನ್ನು ಬರೆಯಲು ಅವಕಾಶವಾಗಿರಲಿಲ್ಲ! ಒಮ್ಮೆ ೨೦೦೬ರಲ್ಲಿ, ಮೌಲ್ಯ ಪ್ರಕಾಶನದವರು ಏರ್ಪಾಟು ಮಾಡಿದ್ದ ಸನ್ಮಾನ ಸಮಾರಂಭದಲ್ಲಿ ಭೇಟಿಯಾಗಿದ್ದೆವು. ಸನ್ಮಾನಿತರಲ್ಲಿ ಅವರೂ ಸೇರಿದ್ದರು. ಆಗಲೇ ನಿವೃತ್ತರಾಗಿದ್ದರೂ, ಉದಯವಾಣಿಯಲ್ಲಿ ಅವರ ಸೇವೆ ಮುಂದುವರಿದಿತ್ತು. ಉಡುಪಿಯಲ್ಲಿ ಮಗನ ಮನೆಯಲ್ಲಿದ್ದೇನೆ. ಮೊಮ್ಮಗ ಜೊತೆಗಿದ್ದಾನೆ ಎಂದಿದ್ದರು.

ಕಳೆದ ವರ್ಷ, ನಾನು ಬರೆಯುತ್ತಿದ್ದ ಪುಸ್ತಕಕ್ಕಾಗಿ ಮಾಹಿತಿ ಸಂಗ್ರಹಿಸಲು ಈಶ್ವರಯ್ಯನವರನ್ನು ಸಂಪರ್ಕಿಸಿದ್ದೆ. ನನಗೆ ಬೇಕಾಗಿದ್ದ ಮಾಹಿತಿ ದೊರಕಲಿಲ್ಲ.

ಪತ್ರಿಕೆ, ಕಲೆ, ಸಾಹಿತ್ಯ, ಸಂಗೀತ, ಯಕ್ಷಗಾನ ಮತ್ತು ಫೋಟೋಗ್ರಫಿ – ಹೀಗೆ ಹಲವು ಕ್ಷೇತ್ರಗಳಲ್ಲಿ ಗಾಢವಾಗಿ, ಕ್ರಿಯಾಶೀಲರಾಗಿ ತೊಡಗಿಕೊಂಡಿದ್ದ ಅವರು, ತಮ್ಮ ಹುದ್ದೆಯನ್ನು ತಪಸ್ವಿಯಂತೆ ನಿಷ್ಠೆಯಿಂದ ನಿರ್ವಹಿಸಿದರು. ಇತರ ಕ್ಷೇತ್ರಗಳನ್ನು ಅವರು ಗಂಭೀರ ಅಧ್ಯಯನದಿಂದ ಒಲಿಸಿಕೊಂಡಿದ್ದರು. ಆಳವಾದ ತಜ್ಞತೆ ಗಳಿಸಿದ್ದರು. ಅವರು ಅರಿತದ್ದನ್ನು ಇತರರಿಗೆ ಹಂಚುವ ಕೈಂಕರ್ಯ ಯಶಸ್ವಿಯಾಗಿ ನಡೆಸಿದರು. ಈಶ್ವರಯ್ಯನವರದು ಸಾರ್ಥಕ ಬದುಕು.

**ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೨೧–ಬಿ ಅಡ್ಡರಸ್ತೆ, ಶ್ರೀರಾಮ ದೇವಾಲಯ ರಸ್ತೆ
ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– *ಪ್ರಕಾಶಕ*




ಚಲನಚಿತ್ರದಲ್ಲಿ ರೋಸಾಳ ಜೀವನದ ಎರಡು ಘಟ್ಟಗಳಿಗೆ ಪ್ರಾಧಾನ್ಯತೆ ನೀಡಲಾಗಿದೆ. ಮೊದಲನೆಯ ಘಟ್ಟದಲ್ಲಿ, ಪ್ರಥಮ ವಿಶ್ವ ಸಮರದವರೆಗಿನ ಜರ್ಮನಿಯ ಸಮಾಜವಾದಿ ಹೋರಾಟಗಳ ಚಟುವಟಿಕೆಗಳಲ್ಲಿ ಆಕೆಯ ಪಾತ್ರವನ್ನು ಚಿತ್ರೀಕರಿಸಲಾಗಿದೆ. ಎರಡನೆಯದರಲ್ಲಿ ಆ ಯುದ್ಧದ ಅವಧಿಯಲ್ಲೇ ಆಕೆಯ ಸೆರೆಮನೆವಾಸ ಇತ್ಯಾದಿಗಳನ್ನು ತೋರಿಸಲಾಗಿದೆ.

# ರೋಸಾ ಲುಕ್ಸಂಬರ್ಗ್

## ಒಂದು ಬಯೋಪಿಕ್ ಚಲನಚಿತ್ರ

**ಕ್ರಾಂ**ತಿಕಾರಿಯ ಜೀವನ ಮುಳ್ಳು, ಕಲ್ಲುಗಳ ಹಾದಿಯೇ ಸರಿ. ಹೀಗಿರಬೇಕಾದರೇ, ಒಂದು ನೂರು ವರ್ಷಗಳಿಗೂ ಹಿಂದೆ, ಒಬ್ಬ ಮಹಿಳಾ ಕ್ರಾಂತಿಕಾರಿ ಸಮಸಮಾಜದ ನಿರ್ಮಾಣಕ್ಕಾಗಿ ಬದ್ಧತೆ ಹಾಗೂ ದಿಟ್ಟತನದಿಂದ ಹೋರಾಟಗಳನ್ನು ನಡೆಸಿ, ಬರ್ಬರವಾಗಿ ಹತ್ಯೆಯಾಗಿದ್ದನ್ನು ಊಹಿಸಿಕೊಂಡರೇ ಆಕೆಯ ಬಗೆಗೆ ಗೌರವ ಮೂಡುತ್ತದೆ; ಕಂಗಳು ಮಂಜಾಗುತ್ತವೆ. ಆಕೆಯೇ ರೋಸಾ ಲುಕ್ಸಂಬರ್ಗ್, ಜರ್ಮನಿಯ ಕ್ರಾಂತಿಕಾರಿ ಸಮಾಜವಾದಿ ತತ್ವಶಾಸ್ತ್ರಜ್ಞೆ ಹಾಗೂ ರಾಜಕೀಯ ಕಾರ್ಯಕರ್ತೆ.

ಇತ್ತೀಚೆಗೆ ರೋಸಾ ಲುಕ್ಸಂಬರ್ಗ್ ಕುರಿತ ಬಯೋಪಿಕ್ ಚಲನಚಿತ್ರವನ್ನು ವೀಕ್ಷಿಸುವ ಸದವಕಾಶ ದೊರೆಯಿತು. ಬಯೋಪಿಕ್ ಚಲನಚಿತ್ರವನ್ನು ನಿರ್ಮಿಸುವುದು ಕಷ್ಟಕರವಾದ ಹಾಗೂ ಸವಾಲಿನ ಕೆಲಸ. ಇಂತಹ ಚಲನಚಿತ್ರದ ಕೇಂದ್ರ ವ್ಯಕ್ತಿ ಜೀವಿಸಿದ್ದ ಕಾಲದ ಕೂಲಂಕಷ ಅಧ್ಯಯನ, ಸನ್ನಿವೇಶಗಳ ಅರಿವು, ಸೂಕ್ತ ಆಕರಗಳ ಪರಿಶೀಲನೆ ಮುಂತಾದ ಹತ್ತು ಹಲವು ವಿಚಾರಗಳನ್ನು ಸೂಕ್ಷ್ಮವಾಗಿ ಹಾಗೂ ಆಳವಾಗಿ ಅಭ್ಯಸಿಸಬೇಕಾಗುತ್ತದೆ. ಇದಕ್ಕಾಗಿ ಅಪಾರ ಶ್ರಮವನ್ನು ವಿನಿಯೋಗಿಸಬೇಕು. ಸಾಮಾನ್ಯವಾಗಿ ಈ ಕಾರ್ಯಕ್ಕೆ ತುಂಬ ಅವಧಿ ವ್ಯಯವಾಗುತ್ತದೆ. ಚಿತ್ರಕಥೆಯ ತರುವಾಯ ಚಿತ್ರೀಕರಣವೂ ಇತರ ಫೀಚರ್ ಫಿಲ್ಮ್‌ಗಳಿಗಿಂತ ಹೆಚ್ಚಿನ ಸಮಯ ತೆಗೆದುಕೊಳ್ಳುವ ಸಾಧ್ಯತೆಗಳೇ ಜಾಸ್ತಿ.

ಆಧುನಿಕ ಯುರೋಪಿನ ರಾಜಕೀಯ ಚರಿತ್ರೆಯಲ್ಲಿ ರೋಸಾ ಲುಕ್ಸಂಬರ್ಗ್‌ದು ಗಮನೀಯ ಸ್ಥಾನ. ಆದರೆ ಕ್ರಾಂತಿಕಾರಿ ಚರಿತ್ರೆಯಲ್ಲಿ ಆಕೆಗೆ ಲಭ್ಯವಾಗಬೇಕಿದ್ದ ಮನ್ನಣೆ ದೊರಕಿಲ್ಲ ಎಂದರೆ ಉತ್ಪ್ರೇಕ್ಷೆಯಾಗುವುದಿಲ್ಲ. ನಲವತ್ತೊಂಬತ್ತು ವರ್ಷಗಳ ಕಾಲ ಮಾತ್ರ ಜೀವಿಸಿದ್ದ ರೋಸಾ ಜರ್ಮನಿಯ ದುಡಿಯುವ ವರ್ಗದ ಹೋರಾಟಗಳಲ್ಲಿ, ಸಮಾಜವಾದಿ ಆಂದೋಲನಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸಿದಳು; ಅವುಗಳಿಗೆ ಕ್ರಾಂತಿಕಾರಿ ಆಯಾಮವನ್ನು ನೀಡಿದಳು. ಸೈದ್ಧಾಂತಿಕ ವಿಷಯಗಳಲ್ಲೂ ಆಕೆಗೆ ಪ್ರಖರವಾದ ಜ್ಞಾನವಿತ್ತು. ಆಕೆಗೆ ಒಂದು ಕಾಲು ಊನವಾಗಿತ್ತು. ಆದರೂ ದೈಹಿಕ ತೊಂದರೆಗಳನ್ನು ಲೆಕ್ಕಿಸದೆ ಸಮಷ್ಟಿಯ ಹಿತದಲ್ಲಿ ಆಕೆ ಒಬ್ಬ ಮಹಿಳಾವಾದಿಯಾಗಿಯೂ ಅನುಪಮ ಕೊಡುಗೆಗಳನ್ನು ನೀಡಿದಳು.

ಈ ಚಲನಚಿತ್ರದಲ್ಲಿ ರೋಸಾಳ ಜೀವನದ ಎರಡು ಘಟ್ಟಗಳಿಗೆ ಪ್ರಾಧಾನ್ಯತೆ ನೀಡಲಾಗಿದೆ. ಮೊದಲನೆಯ ಘಟ್ಟದಲ್ಲಿ, ಪ್ರಥಮ ವಿಶ್ವ ಸಮರದವರೆಗಿನ ಜರ್ಮನಿಯ ಸಮಾಜವಾದಿ ಹೋರಾಟಗಳ ಚಟುವಟಿಕೆಗಳಲ್ಲಿ ಆಕೆಯ ಪಾತ್ರವನ್ನು ಚಿತ್ರೀಕರಿಸಲಾಗಿದೆ. ಎರಡನೆಯದರಲ್ಲಿ ಆ ಯುದ್ಧದ ಅವಧಿಯಲ್ಲೇ ಆಕೆಯ ಸೆರೆಮನೆವಾಸ ಇತ್ಯಾದಿಗಳನ್ನು ತೋರಿಸಲಾಗಿದೆ. ಚಲನಚಿತ್ರದಾದ್ಯಂತ ಆಕೆಯ ಸುತ್ತ ಯಾವುದೇ ಬಗೆಯ ಪ್ರಭಾವಳಿಯನ್ನು ಕಟ್ಟದೇ ಇರುವುದು ಒಂದು ಇತ್ಯಾತ್ಮಕ ಸಂಗತಿ. ಎಲ್ಲ ಮಾನವರಂತೆ ಆಕೆಯ ವ್ಯಕ್ತಿತ್ವದಲ್ಲೂ ಕಂದು ಬಣ್ಣವಿತ್ತು ಎಂಬುದನ್ನು ಸೂಕ್ಷ್ಮವಾಗಿ ಹಾಗೂ ಸೂಚ್ಯವಾಗಿ ಬಿಂಬಿಸಲಾಗಿದೆ. ಔತಣಕೂಟಗಳಂತಹ ಸಂದರ್ಭಗಳಲ್ಲಿ ಆಕೆ ಎಡ್ವರ್ಡ್ ಬರ್ನ್‌ಸ್ಟೈನ್‌ನನ್ನು ಒಳಗೊಂಡು ತನ್ನ ಇತರ ಕೆಲವು ಪರಿಷ್ಕರಣವಾದಿ ಸಂಗಾತಿಗಳ ಬಗೆಗೆ ಕಿಡಿಕಾರುತ್ತಾಳೆ. ಆಕೆಯ ಪ್ರಿಯತಮನಾಗಿದ್ದ ಲಿಯೊ ಜೋಗಿಚೆಸ್ ಕ್ರಾಂತಿಕಾರಿ ಸಮಾಜವಾದಿ ನಾಯಕನೂ ಆಗಿದ್ದ. ಆತ ತನ್ನ ಚಟುವಟಿಕೆಗಳ ನಡುವೆ ಓರ್ವ ಮಹಿಳೆಯ ಜೊತೆ ಸಂಪರ್ಕವನ್ನು ಬೆಳೆಸಿ, ಆಕೆಗೆ ಹತ್ತಿರದವನಾದ ವಿಷಯ ಆತನಿಂದಲೇ ತಿಳಿದಾಗ ರೋಸಾ ಕ್ರುದ್ಧಳಾಗುತ್ತಾಳೆ. ನಂತರ ರೋಸಾ ತನಗಿಂತಲೂ ಕಿರಿಯನಾದ ಕ್ಲಾರಾ ಝೆಟ್ಕಿನ್ (ಈಕೆ ಜರ್ಮನಿಯ ಖ್ಯಾತ ಸಮಾಜವಾದಿ /ಮಹಿಳಾವಾದಿಯಾಗಿರುತ್ತಾಳೆ)ಳ ಮಗನ ಬಗೆಗೆ ಅನುರಕ್ತೆಯಾಗುತ್ತಾಳೆ. ಇಂತಹ ಕೆಲವು ಸಂಗತಿಗಳು ಈ ಚಲನಚಿತ್ರದಲ್ಲಿ ಅಡಕಗೊಂಡಿರುವುದು, ರೋಸಾಳ ವೈಯಕ್ತಿಕ ಆಯಾಮವನ್ನು ಅನಾವರಣಗೊಳಿಸುತ್ತವೆ. ವ್ಯಕ್ತಿತ್ವವೊಂದರ ಈ ತೆರನಾದ ಅಭಿವ್ಯಕ್ತಿ ಕೆಲವರಿಗೆ ಕಿರಿಕಿರಿಯೆನ್ನಿಸಬಹುದು. ಆದರೆ ಇದು ವಸ್ತುನಿಷ್ಠ ಚಿತ್ರಣವಾಗುತ್ತದೆ ಎಂದು ಇನ್ನು ಕೆಲವರ ಅಂಬೋಣ.

ಹಿಂಸೆಯ ವಿರುದ್ಧದ ರೋಸಾ ನಿಲುವುಗಳ ಒಂದು ಝಲಕ್ ಈ ಚಲನಚಿತ್ರದಲ್ಲಿದೆ. ಪ್ರಥಮ ವಿಶ್ವ ಸಮರದ ಪ್ರಾರಂಭದಲ್ಲಿ ಜರ್ಮನಿಯ ಸೋಷಿಯಲ್ ಡೆಮಾಕ್ರೆಟಿಕ್ ಪಕ್ಷ ಕೈಸರ್ (ಜರ್ಮನಿಯ ಚಕ್ರವರ್ತಿಯನ್ನು ಹೀಗೆಂದು ಕರೆಯಲಾಗುತ್ತಿತ್ತು. ಆಗ ಎರಡನೇ ವಿಲ್‌ಹೆಲ್ಮ್ ಚಕ್ರವರ್ತಿಯಾಗಿದ್ದ)ನ ಮಿಲಿಟರಿವಾದಕ್ಕೆ ಆತುಕೊಂಡಾಗ, ದುಡಿಯುವ ವರ್ಗದ ಅಂತರರಾಷ್ಟ್ರೀಯ ಭ್ರಾತೃತ್ವದ ಪರಿಕಲ್ಪನೆಗೆ ಈ ನಡೆ ಮಾರಕ ಎಂದು ಆಕೆ ನೇರವಾಗಿ ಪ್ರತಿಕ್ರಿಯಿಸುತ್ತಾಳೆ. ಆ ಸಂದರ್ಭದಲ್ಲಿ ಆಕೆ “ಶಾಂತಿ ಸಮಯದಲ್ಲಿ ವಿಶ್ವದ ಕಾರ್ಮಿಕರೇ ಒಂದಾಗಿ; ಯುದ್ಧದ ಸಂದರ್ಭದಲ್ಲಿ ಒಬ್ಬರು ಮತ್ತೊಬ್ಬರ ಗಂಟಲನ್ನು ಇರಿಯಿರಿ” ಎಂದು ಹತಾಶೆ ಹಾಗೂ

**ಮ. ಶ್ರೀ. ಮುರಳಿ ಕೃಷ್ಣ**





*ರೋಸಾ ಲುಕ್ಸಂಬರ್ಗ್ ಚಲನ ಚಿತ್ರದ ಕೆಲವು ಘಟನೆ*

ನೋವಿನಿಂದ ನುಡಿಯುತ್ತಾಳೆ! ಹೀಗೆ ಆಕೆ ಕಮ್ಯುನಿಸ್ಟ್ ಮ್ಯಾನಿಫೆಸ್ಟೋದಲ್ಲಿರುವ ಅಂತಿಮ ಹೇಳಿಕೆಯನ್ನು ದುಃಖಿತಪ್ತಳಾಗಿ ತಿರುಚುತ್ತಾಳೆ! ಈ ಕಾಲಘಟ್ಟದಲ್ಲೇ. ರಷ್ಯಾದ ಕ್ರಾಂತಿಕಾರಿ ನಾಯಕ ವ್ಲಾದಿಮಿರ್ ಲೆನಿನ್‌ನ ಸಮಾಜವಾದಿ ಕ್ರಾಂತಿಯ ಹಾಗೂ ತರುವಾಯದ ಕೆಲವು ನಿಲುವುಗಳನ್ನು ರೋಸಾ ಸ್ಪಷ್ಟವಾಗಿ ಪ್ರಶ್ನಿಸಿದ್ದಳು ಎಂಬುದನ್ನೂ ನೆನಪಿಸಿಕೊಳ್ಳಬೇಕು.

ಪ್ರಥಮ ವಿಶ್ವ ಸಮರದಲ್ಲಿ ಜರ್ಮನಿ ಸೋಲನ್ನು ಅನುಭವಿಸಿ, ಜರ್ಜರಿತ ವಾಯಿತು. ೧೯೧೮ರಲ್ಲಿ ಅಲ್ಲಿ ಒಂದರ್ಥದಲ್ಲಿ ಕ್ರಾಂತಿಕಾರಿ ಎನ್ನಬಹುದಾದ ಪಲ್ಲಟ ಜರುಗಿ, ರಾಜಪ್ರಭುತ್ವ ಕೊನೆಗೊಂಡು, ಸಂಸದೀಯ ಪ್ರಜಾಪ್ರಭುತ್ವವಾದಿ ವ್ಯವಸ್ಥೆಯೊಂದು ರೂಪುಗೊಂಡಿತು. ಈ ಬದಲಾವಣೆಯ ಹಾದಿ ಸುಗಮ ವಾಗಿರಲಿಲ್ಲ. ಹಿಂಸೆ, ಸಾವು-ನೋವುಗಳು ಸಂಭವಿಸಿದವು. ಇದಕ್ಕೆ ಸಂಬಂಧಿಸಿದ ಯಾವುದೇ ಘಟನೆಗಳ ಚಿತ್ರೀಕರಣ ಈ ಚಲನಚಿತ್ರದಲ್ಲಿಲ್ಲ. ಕ್ರಾಂತಿಯ ಮುಂಚಿನ ಅವಧಿಯಲ್ಲಿ ರೋಸಾ ಕಾರಾಗೃಹದಲ್ಲಿರುತ್ತಾಳೆ. ಆ ಸಂದರ್ಭದಲ್ಲಿನ ಆಕೆಯ ಆಲೋಚನೆಗಳನ್ನು ಸೌಂಡ್‌ಟ್ರ್ಯಾಕ್ ಮೂಲಕ ವೀಕ್ಷಕರಿಗೆ ದಾಟಿಸಲಾಗಿದೆ. ಆಕೆ ಮಾಡುವ ಭಾಷಣಗಳು ಗ್ರಹಿಸಲು ಸುಲಭವಾಗಿವೆ; ಎಲ್ಲರಿಗೂ ದಕ್ಕುತ್ತವೆ. ಸಮುದಾಯಗಳ ಮಧ್ಯದಿಂದಲೇ ಜನಕ್ರಾಂತಿ ಸಹಜವಾಗಿ ಸಂಭವಿಸಬೇಕು ಎಂಬುದು ಆಕೆಯ ದೃಢ ನಿಲುಮೆಯಾಗಿರುತ್ತದೆ. ಇದು ಸಹ ಚಲನಚಿತ್ರದಲ್ಲಿ ಧ್ವನಿಸಲ್ಪಟ್ಟಿದೆ. ಸಮಾಜವಾದಿ ಹೋರಾಟಗಳ ಆಕೆಯ ಸಂಗಾತಿ ಕಾರ್ಲ್ ಲೀಬ್ನೆಕ್ಟ್‌ನ ಮಡದಿ ಸೋನಿಷ್ಟ್‌ಕ್ಸಾಗೆ ರೋಸಾ ಬಂಧಿಖಾನೆಯಿಂದ ಬರೆಯುವ ಪತ್ರಗಳು ಆಕೆಯ ಮಾನವೀಯ ತುಡಿತಗಳನ್ನು ಬಹಿರಂಗಗೊಳಿಸುತ್ತವೆ. ರೋಸಾಳಿಗೆ ಯುದ್ಧದ ಭೀಕರತೆಗಳು ದುಃಸ್ವಪ್ನಗಳಂತೆ ಕಾಡುತ್ತಿರುತ್ತವೆ. ಇವುಗಳನ್ನು ಯುದ್ಧದ ತುಣುಕುಗಳ ಕಪ್ಪು-ಬಿಳುಪು ಫುಟೇಜುಗಳ ಮೂಲಕ ತೋರಿಸಲಾಗಿದೆ.

ಕ್ರಾಂತಿಯ ತರುವಾಯ ರೋಸಾ ಜೈಲಿನಿಂದ ಬಿಡುಗಡೆಯಾಗುತ್ತಾಳೆ. ಸ್ವಲ್ಪ ಸಮಯದ ನಂತರ ಆಕೆ ಮತ್ತು ಆಕೆಯ ಸಂಗಡಿಗರ ಮೇಲೆ 'ಫ್ರೈ ಕಾರ್ಪ್' (ಪ್ರಥಮ ವಿಶ್ವಸಮರದಲ್ಲಿ ಭಾಗವಹಿಸಿದ್ದ ಸೈನ್ಯಾಧಿಕಾರಿಗಳು-ಹಿರಿಯ ಸೈನಿಕರಿದ್ದ ಬಲಪಂಥೀಯ ಮಿಲಿಷಿಯಾ) ಮುಗಿಬೀಳುತ್ತದೆ. ಸಂಗಾತಿ ಕಾರ್ಲ್ ಲೀಬ್ನೆಕ್ಟ್‌ನ ಜೊತೆ ರೋಸಾಳನ್ನು ಈ ಪಡೆಯ ಸೈನಿಕರು ಜನವರಿ ೧೫, ೧೯೧೯ರಂದು ಅಮಾನುಷವಾಗಿ ಹತ್ಯೆ ಮಾಡಿ, ನಾಲೆಯೊಂದರಲ್ಲಿ ಅವರ ಮೃತ ಶರೀರಗಳನ್ನು ಬಿಸಾಡುತ್ತಾರೆ (ಒಗೆಯುವ ಕ್ರಿಯೆಯನ್ನು ಸೂಚ್ಯವಾಗಿ ಬಿಂಬಿಸಲಾಗಿದೆ). ಚಲನಚಿತ್ರದ ಈ ಅಂತಿಮ ದೃಶ್ಯ ವೀಕ್ಷಕರ ಮನಸ್ಸನ್ನು ಕಲಕುತ್ತದೆ.

೧೯೮೬ರಲ್ಲಿ ಬಿಡುಗಡೆಯಾದ, ೧೨೩ ನಿಮಿಷಗಳ ಈ ಚಲನಚಿತ್ರದ ನಿರ್ದೇಶಕಿ ಮಗರೇತು ವನ್ ತೋಟ. ವಿಶ್ವದ ಒಬ್ಬ ಅಗ್ರ ಮಹಿಳಾವಾದಿ ಚಲನಚಿತ್ರ ನಿರ್ದೇಶಕಿ ಎಂದೇ ಈಕೆ ಗುರುತಿಸಲ್ಪಡುತ್ತಾರೆ. ರೋಸಾ ಪಾತ್ರಧಾರಿ ಬಾರ್ಬರಾ ಸುಕೋವ ಮನೋಜ್ಞವಾಗಿ ನಟಿಸಿ ಮಿಂಚಿದ್ದಾರೆ. ಈ ಪಾತ್ರಕ್ಕಾಗಿ ಅವರಿಗೆ ಕಾನ್ ಚಲನಚಿತ್ರೋತ್ಸವದ ಶ್ರೇಷ್ಠ ನಟಿ ಪ್ರಶಸ್ತಿ ಲಭಿಸಿತು. ಈಕೆ ಜರ್ಮನಿಯ ಖ್ಯಾತ ಚಲನಚಿತ್ರ ನಿರ್ದೇಶಕ ದಿವಂಗತ ಫಾಸ್‌ಬಿಂದರ್‌ನ ಜೊತೆ ನಟಿಯಾಗಿ ಕೆಲಸ ಮಾಡಿದ್ದಾರೆ. ಒಂದು ಮೂಲದ ಪ್ರಕಾರ, ಫಾಸ್‌ಬಿಂದರ್ ಈ ಚಲನಚಿತ್ರವನ್ನು ನಿರ್ದೇಶಿಸಬೇಕಿತ್ತು ಆದರೆ ಕಾರಣಾಂತರಗಳಿಂದ ಅವರು ನಿರ್ದೇಶನದ ಜವಾಬ್ದಾರಿಯನ್ನು ಹೊರಲಾಗಲಿಲ್ಲ. ನಂತರ ಈ ಕರ್ತವ್ಯ ಮಗರೇತುರವರ ಹೆಗಲಿಗೇರಿತು. ಈಕೆಯ ಪ್ರತಿಭೆಯನ್ನು ಅರಿತಿದ್ದ ಫಾಸ್‌ಬಿಂದರ್ ಇದು ಅತ್ಯಂತ ಸೂಕ್ತ ಆಯ್ಕೆ ಎಂದು ಪ್ರತಿಕ್ರಿಯಿಸಿದರಂತೆ!

ರೋಸಾ ಲುಕ್ಸಂಬರ್ಗ್‌ಳ ಸಂಕೀರ್ಣ ವ್ಯಕ್ತಿತ್ವದ ಪರಿಚಯವನ್ನು ಈ ಚಲನಚಿತ್ರ ಸ್ಥೂಲವಾಗಿ ಮಾಡಿಕೊಡುತ್ತದೆ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧

## ಅಭಿನಂದನೆ...

ಕರ್ನಾಟಕ ಸಾಹಿತ್ಯ ಅಕಾಡೆಮಿಯ ೨೦೧೮ನೇ ಸಾಲಿನ ವಿವಿಧ ಪ್ರಶಸ್ತಿಗಳಿಗೆ ನವಕರ್ನಾಟಕ ಮತ್ತು ಹೊಸತು ಬಳಗದ ಕೆಳಕಂಡ ಸಾಹಿತಿಗಳು ಆಯ್ಕೆಯಾಗಿದ್ದಾರೆ. ಡಾ॥ ಎಚ್. ಎಸ್. ವೆಂಕಟೇಶ ಮೂರ್ತಿ ಮತ್ತು ಡಾ॥ ಬಿ. ಎ. ವಿವೇಕ ರೈ ಅವರಿಗೆ "ಗೌರವ ಪ್ರಶಸ್ತಿ";

ಡಾ॥ ಪುರುಷೋತ್ತಮ ಬಿಳಿಮಲೆ, ಡಾ॥ ಪಾರ್ವತಿ ಜಿ. ಐತಾಳ್, ಸತೀಶ ಕುಲಕರ್ಣಿ, ಡಾ॥ ರಂಗರಾಜ ವನದುರ್ಗ, ಡಾ॥ ಗಂಗಾರಾಂ ಚಂಡಾಳ ಮತ್ತು ಡಾ॥ ಎಚ್. ಎಲ್. ಪುಷ್ಪಾ ಅವರಿಗೆ "ಸಾಹಿತ್ಯಶ್ರೀ ಪ್ರಶಸ್ತಿ". ಡಾ॥ ವಿನಯಾ ಒಕ್ಕುಂದ, ಚಂದ್ರಶೇಖರ ತಾಳ್ಯ, ರೇಣುಕಾ ರಮಾನಂದ, ಬಸವರಾಜ ಸಬರದ, ಪ್ರಜ್ಞಾ ಮತ್ತಿಹಳ್ಳಿ, ಇಂದಿರಾ ಹೆಗಡೆ, ಡಾ॥ ಎಚ್. ಟಿ. ಹಳ್ಳಿಕೇರಿ ಮತ್ತು ಪ್ರೊ॥ ಎಚ್. ಟಿ. ಪೋತೆ ಅವರಿಗೆ ೨೦೧೭ನೇ ಸಾಲಿನ 'ಪುಸ್ತಕ ಬಹುಮಾನ'. ಹಾಗೆಯೇ ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ ಹೆಚ್. ಆರ್. ಸುಜಾತಾ ಅವರ "ನೀಲಿ ಮೂಗಿನ ನತ್ತು" ಕೃತಿಗೆ "ಮಧುರ ಚೆನ್ನ ದತ್ತಿನಿಧಿ" ಬಹುಮಾನ.

ಎಲ್ಲರಿಗೂ "ನವಕರ್ನಾಟಕ" ಹಾಗೂ "ಹೊಸತು" ಬಳಗದ ಅಭಿನಂದನೆಗಳು.




ನಾನು ಓದಿದ ಪುಸ್ತಕ

# ಸಂವಿಧಾನದಲ್ಲಿ ಮಹಿಳೆ

ಅಂಬೇಡ್ಕರ್ ಅವರ ನೇತೃತ್ವದಲ್ಲಿ ರೂಪುಗೊಂಡ ಸಂವಿಧಾನವು ಮಹಿಳೆಯರಿಗೆ ಯಾವ್ಯಾವ ಹಕ್ಕುಗಳನ್ನು ನೀಡಿದೆ ಎಂಬುದನ್ನು ತ್ವರಿತ ಓದಿಗೆ ಅನುವಾಗುವಂತೆ ಸರಳವಾಗಿ ಪಟ್ಟಿ ಮಾಡಿದ್ದಾರೆ. ಲಿಂಗತಾರತಮ್ಯ ನಿಷೇಧ, ಸಾರ್ವಜನಿಕ ಸ್ಥಳಗಳಿಗೆ ಮುಕ್ತ ಅವಕಾಶ, ವೈಯಕ್ತಿಕ ಸ್ವಾತಂತ್ರ್ಯ ಹಾಗೂ ಘನತೆಯ ಹಕ್ಕು, ಮಾನವ ಸಾಗಾಟ ಹಾಗೂ ಒತ್ತಾಯದ ದುಡಿಮೆಯ ನಿಷೇಧ, ಸಮಾನ ಕೆಲಸಕ್ಕೆ ಸಮಾನ ವೇತನ, ಬಾಣಂತಿ ಸವಲತ್ತು, ಇಂತಹ ಅನೇಕ ಹಕ್ಕುಗಳನ್ನು ಖಾತ್ರಿಪಡಿಸಲಾಗಿದೆ. ಈ ಮೂಲಭೂತ ಹಕ್ಕುಗಳಿಗೆ ಚ್ಯುತಿ ಬಂದರೆ ಸಾಂವಿಧಾನಿಕ ಪರಿಹಾರಕ್ಕಾಗಿ ಅನುಚ್ಛೇದ ೩೨ರ ಅಡಿಯಲ್ಲಿ ಸುಪ್ರೀಂ ಕೋರ್ಟಿಗೆ ಹೋಗಬಹುದು.

*ಲೇಖಕರು :* **ಡಾ॥ ಎಚ್. ಎಸ್. ಅನುಪಮಾ**
ಪುಟಗಳು : xiv+೯೪=೧೦೮ ಬೆಲೆ : ರೂ. ೬೦/-
ಪ್ರಕಾಶಕರು : **ಲಡಾಯಿ ಪ್ರಕಾಶನ**
೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨ ೧೦೧

ಇತ್ತೀಚೆಗಷ್ಟೇ ಬಿಡುಗಡೆಯಾದ ಡಾ॥ ಎಚ್. ಎಸ್. ಅನುಪಮಾ ಬರೆದಿರುವ "ಸಂವಿಧಾನ ಮತ್ತು ಮಹಿಳೆ" ಒಂದು ಗಮನಾರ್ಹ ಪುಸ್ತಕ. ಸಂವಿಧಾನ ಎಂದರೆ ಏನು ಎನ್ನುವುದರಿಂದ ಹಿಡಿದು ಅದು ರೂಪುಗೊಂಡಿದ್ದು ಹೇಗೆ, ಅದರಲ್ಲಿ ಭಾಗಿಯಾಗಿದ್ದ ಮಹಿಳೆಯರ ಪಾತ್ರವೇನು, ಮಹಿಳೆಯರಿಗೆ ಅದು ಏನನ್ನು ನೀಡಿದೆ ಮುಂತಾದವುಗಳ ಬಗ್ಗೆ ಚಿಕ್ಕದಾಗಿ, ಸರಳವಾಗಿ, ಅಚ್ಚುಕಟ್ಟಾಗಿ ಅನುಪಮಾ ಕಟ್ಟಿಕೊಟ್ಟಿದ್ದಾರೆ.

ಸಂವಿಧಾನಕ್ಕೆ ಅಪಾಯ ಬಂದೊದಗಿರುವ ಇಂದಿನ ಸಂದರ್ಭದಲ್ಲಿ ಇಂತಹದೊಂದು ಪುಸ್ತಕ ಅವಶ್ಯಕವಾಗಿತ್ತು. ಪ್ರಜಾಪ್ರಭುತ್ವ, ಜಾತ್ಯತೀತತೆಯನ್ನು ಆಧಾರವಾಗಿರಿಸಿಕೊಂಡಿರುವ ಸಂವಿಧಾನವು ಹಿಂದುತ್ವವಾದಿಗಳ ಕಣ್ಣಿಗೆ ಮುಳ್ಳಾಗಿದೆ. ಈ ಸಂವಿಧಾನವನ್ನು ಬದಿಗಿರಿಸಿ ಮನುಸ್ಮೃತಿಯನ್ನು ದೇಶದ ಮೇಲೆ ಹೇರಬೇಕೆಂಬ ಹುನ್ನಾರ ನಡೆದಿದೆ. ಈ ಹಿನ್ನೆಲೆಯಲ್ಲಿ ಸಂವಿಧಾನವನ್ನು ಅರ್ಥಮಾಡಿಕೊಳ್ಳುವುದು ಹಿಂದೆಂದಿಗಿಂತಲೂ ಹೆಚ್ಚು ಅವಶ್ಯಕವಾಗಿದೆ. ಅದರಲ್ಲೂ ಮಹಿಳೆಯರಿಗೆ ಇದನ್ನು ತಲುಪಿಸುವುದು ಅತಿ ಅಗತ್ಯವಾಗಿದೆ.

ಕಾನೂನಿನ ವಿದ್ಯಾರ್ಥಿಗಳು, ಕಾನೂನು ತಜ್ಞರನ್ನು ಹೊರತುಪಡಿಸಿದರೆ ಸಂವಿಧಾನವನ್ನು ಓದಿಕೊಂಡಿರುವವರ ಸಂಖ್ಯೆ ಕಡಿಮೆಯೇ. ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಕುತ್ತು ಬಂದಾಗಲೋ, ಸಾಂವಿಧಾನಿಕ ಬಿಕ್ಕಟ್ಟು ಸೃಷ್ಟಿಯಾದಾಗಲೋ ಅದಕ್ಕೆ ಸಂಬಂಧಪಟ್ಟಷ್ಟು ಸಂವಿಧಾನದ ಬಗ್ಗೆ ಚರ್ಚೆಯಾಗುತ್ತದೆ. ಆದರೆ ಒಟ್ಟಾರೆ ಸಂವಿಧಾನ ಏನು ಹೇಳುತ್ತದೆ ಎನ್ನುವುದು ಬಹುಪಾಲು ಅಕ್ಷರಸ್ಥರಿಗೂ ತಿಳಿದಿಲ್ಲ. ಹಾಗಾಗಿ ಈ ಪುಸ್ತಕ ಬಹಳ ಮೌಲಿಕವಾಗಿದೆ.

ಈ ನೆಲದ ಭವಿಷ್ಯದ ಕುರಿತು ಹಿರಿಯರು, ದಾರ್ಶನಿಕರು, ಹೋರಾಟಗಾರರು ಕಂಡ ಕನಸು ಸಂವಿಧಾನ ಎಂದು ಹೇಳುವ ಅನುಪಮಾ, ದೇಶದ ಎಲ್ಲ ಕಾನೂನುಗಳ ಮೂಲ ಸಂವಿಧಾನವೆನ್ನುತ್ತಾರೆ. ದೇಶದ ಮೂಲಭೂತ ರಾಜಕೀಯ ನೀತಿ, ಸರ್ಕಾರದ ಅಧಿಕಾರಗಳು ಮತ್ತು ಜವಾಬ್ದಾರಿಗಳು, ಸಾಮಾನ್ಯ ಪ್ರಜೆಗಳ ಹಕ್ಕುಗಳು ಮತ್ತು ಕರ್ತವ್ಯಗಳನ್ನು - ಇದೆಲ್ಲವನ್ನೂ ನಿಗದಿಪಡಿಸುವುದೇ ಸಂವಿಧಾನ. ಸರ್ಕಾರಗಳು ಅಧಿಕಾರ ಚಲಾಯಿಸುವುದಕ್ಕೆ ಅಗತ್ಯವಾದ ನಿಯಮಗಳು ಹಾಗೂ ಕಾನೂನುಗಳು ಸಂವಿಧಾನದ ಚೌಕಟ್ಟಿನಲ್ಲಿ ಜನ್ಮ ತಾಳುತ್ತವೆ.

ಸಂವಿಧಾನದ ಪಾರಮ್ಯದ ಬಗ್ಗೆ ಹೇಳುತ್ತಾ, ಭಾರತವು ನೂರಾರು ಮತ-ಧರ್ಮ-ಪಂಥಗಳು, ಸಾವಿರಾರು ಜಾತಿ-ಕುಲಗಳು, ಸಾವಿರಾರು ಭಾಷೆಗಳನ್ನು ಹೊಂದಿರುವ ವಿಭಿನ್ನತೆ, ವೈವಿಧ್ಯತೆಯ ದೇಶವಾಗಿದ್ದು, ಇದು ಪರಸ್ಪರರ ಹೊಡೆದಾಟದಿಂದ ಛಿದ್ರವಾಗದಂತೆ ಕಾಪಾಡಿಕೊಂಡು ಬಂದಿರುವುದು ಸಂವಿಧಾನದ ಹೆಗ್ಗಳಿಕೆ ಎಂದು ವಿವರಿಸುತ್ತಾರೆ. ಮಹಿಳೆಯರ ವಿಷಯಕ್ಕೆ ಸಂಬಂಧಿಸಿದಂತೆ ಸ್ಥಳೀಯ ರೂಢಿ, ಆಚರಣೆಗಳು ಸಂವಿಧಾನದ ಆಶಯಗಳಿಗಿಂತ ಹೆಚ್ಚು ಜನರ ಬುದ್ಧಿಭಾವಗಳನ್ನು ಆವರಿಸುವಂತೆ ಮಾಡಲಾಗಿದ್ದು ಸಂವಿಧಾನದತ್ತವಾಗಿ, ಕಾನೂನಾತ್ಮಕವಾಗಿ ದೊರೆತ ಹಕ್ಕು, ಸವಲತ್ತುಗಳು ಮಹಿಳೆಯರನ್ನು ತಲುಪದೇ ಹೋಗಿವೆ ಎಂದು ಅಭಿಪ್ರಾಯಪಡುತ್ತಾರೆ.

**ಡಾ॥ ಎಚ್. ಜಿ. ಜಯಲಕ್ಷ್ಮಿ**

**ಸಂವಿಧಾನ ಮತ್ತು ಮಹಿಳಾ ಹಕ್ಕುಗಳು**

ಅಂಬೇಡ್ಕರ್ ಅವರ ನೇತೃತ್ವದಲ್ಲಿ ರೂಪುಗೊಂಡ ಸಂವಿಧಾನವು ಮಹಿಳೆಯರಿಗೆ ಯಾವ್ಯಾವ ಹಕ್ಕುಗಳನ್ನು ನೀಡಿದೆ ಎಂಬುದನ್ನು ತ್ವರಿತ ಓದಿಗೆ ಅನುವಾಗುವಂತೆ ಸರಳವಾಗಿ ಪಟ್ಟಿ ಮಾಡಿದ್ದಾರೆ. ಲಿಂಗತಾರತಮ್ಯ ನಿಷೇಧ, ಸಾರ್ವಜನಿಕ ಸ್ಥಳಗಳಿಗೆ ಮುಕ್ತ ಅವಕಾಶ, ವೈಯಕ್ತಿಕ ಸ್ವಾತಂತ್ರ್ಯ ಹಾಗೂ ಘನತೆಯ ಹಕ್ಕು, ಮಾನವ ಸಾಗಾಟ ಹಾಗೂ ಒತ್ತಾಯದ ದುಡಿಮೆಯ ನಿಷೇಧ, ಸಮಾನ ಕೆಲಸಕ್ಕೆ ಸಮಾನ ವೇತನ, ಬಾಣಂತಿ ಸವಲತ್ತು, ಇಂತಹ ಅನೇಕ ಹಕ್ಕುಗಳನ್ನು ಖಾತ್ರಿಪಡಿಸಲಾಗಿದೆ. ಈ ಮೂಲಭೂತ ಹಕ್ಕುಗಳಿಗೆ ಚ್ಯುತಿ ಬಂದರೆ ಸಾಂವಿಧಾನಿಕ ಪರಿಹಾರಕ್ಕಾಗಿ ಅನುಚ್ಛೇದ ೩೨ರ ಅಡಿಯಲ್ಲಿ ಸುಪ್ರೀಂ ಕೋರ್ಟಿಗೆ ಹೋಗಬಹುದು.

ಇದರ ಜೊತೆಗೆ ಮಹಿಳೆಯರ ಮೇಲೆ ನಡೆಯುವ ಹಿಂಸೆ, ದೌರ್ಜನ್ಯಗಳ ತಡೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೂಪಿಸಿದ ಕಾಯ್ದೆಗಳ ಮೂಲಕ ದೊರೆತ ಹಕ್ಕುಗಳ ಪಟ್ಟಿ ಸಿಗುತ್ತದೆ. ಇವುಗಳಲ್ಲಿ ಬಹುತೇಕ ಕಾಯ್ದೆಗಳು ಮಹಿಳಾ ಹೋರಾಟದ ಪರಿಣಾಮವಾಗಿ ರೂಪುಗೊಂಡವುಗಳು. ಇವುಗಳಲ್ಲಿ ಒಂದು ಐಪಿಸಿ ಅಡಿಯಲ್ಲಿ ಬರುವ ಕಾನೂನುಗಳು. ಉದಾಹರಣೆಗೆ ಅತ್ಯಾಚಾರ (ಐಪಿಸಿ ಸೆ. ೩೭೬) ವರದಕ್ಷಿಣೆಗಾಗಿ ಹತ್ಯೆ, ವರದಕ್ಷಿಣೆಗಾಗಿ ಕಿರುಕುಳ (ಐಪಿಸಿ ಸೆ. ೩೦೨/೩೦೪-ಬಿ) ಇತ್ಯಾದಿ.

ಇನ್ನೊಂದು ಅಪರಾಧ ಗುರುತಿಸಲು ಬಳಸುವಂಥ ಮತ್ತು ಮಹಿಳಾ ಹಿತಾಸಕ್ತಿಯನ್ನು

ಕಾಯಲು ರೂಪುಗೊಂಡ ಕಾನೂನುಗಳ ಪಟ್ಟಿ. ಉದಾಹರಣೆಗೆ, ದೇವದಾಸಿ ಪದ್ಧತಿ ತಡೆಕಾಯ್ದೆ, ವರದಕ್ಷಿಣೆ ನಿಷೇಧಕಾಯ್ದೆ, ಬಾಲ್ಯವಿವಾಹ (ತಡೆಗಟ್ಟುವಿಕೆ) ಕಾಯ್ದೆ ಇತ್ಯಾದಿ. ಕಾನೂನುಗಳ ಮೂಲಕ ದೊರೆತ ಕೆಲವು ಹಕ್ಕುಗಳ ವಿವರಣೆಗಳನ್ನು, ಮಹಿಳಾ ಸಶಕ್ತೀಕರಣಕ್ಕಾಗಿ ಕೈಗೊಂಡ ಕ್ರಮಗಳು, ಯೋಜನೆಗಳನ್ನು ಲೇಖಕಿ ವಿವರಿಸುತ್ತಾರೆ.

ಇದರ ಜೊತೆಗೆ ಸಂವಿಧಾನದ ಆಶಯಗಳನ್ನು ಎತ್ತಿ ಹಿಡಿದ ಇತ್ತೀಚಿನ ಎರಡು ಸುಪ್ರೀಂ ಕೋರ್ಟಿನ ತೀರ್ಪುಗಳನ್ನು ವಿಶದವಾಗಿ ವಿವರಿಸುತ್ತಾರೆ. ಅವು ಕೇರಳದ ಶಬರಿಮಲೆ ಅಯ್ಯಪ್ಪಸ್ವಾಮಿ ದೇವಾಲಯಕ್ಕೆ ಮಹಿಳೆಯರ ಪ್ರವೇಶ ಮತ್ತು ಸಲಿಂಗ ಕಾಮಿಗಳ ಲೈಂಗಿಕ ಆಯ್ಕೆ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ್ದು. ಇವೆರಡೂ ತೀರ್ಪುಗಳ ಬಗ್ಗೆ ಹೇಳುತ್ತಾ, ಬಹುಸಂಖ್ಯಾತರ ಒತ್ತಡಗಳ ನಡುವೆಯೂ ಅಲ್ಪಸಂಖ್ಯಾತರ ಹಕ್ಕುಗಳ ರಕ್ಷಣೆ ಸಾಧ್ಯವಾಗುವ ಭರವಸೆ ಮೂಡಿದೆ. ವ್ಯಕ್ತಿಗತ ಸ್ವಾತಂತ್ರ್ಯ, ಘನತೆ ಮತ್ತು ಖಾಸಗೀತನಗಳೆಂಬ ಮೂಲಭೂತ ಹಕ್ಕು ಚಲಾಯಿಸಿ ಭವಿಷ್ಯದ ನಾಗರಿಕ ಹೋರಾಟಗಳನ್ನು ಕಟ್ಟಬಹುದು ಎಂಬ ಹೊಸದಿಕ್ಕು ತೆರೆದುಕೊಂಡಿದೆ ಎನ್ನುತ್ತಾರೆ ಅನುಪಮಾ.

**ಸಂವಿಧಾನ ಸಭೆಯಲ್ಲಿ ಮಹಿಳೆಯರು**

ನಮ್ಮ ಸಮಾಜದಲ್ಲಿ ಸಾಮಾನ್ಯವಾಗಿ ಮಹಿಳೆಯರನ್ನು ಕಡೆಗಣಿಸಲಾಗುತ್ತದೆ. ಅವರ ಸಾಧನೆಗಳನ್ನು ಗುರುತಿಸುವುದಿಲ್ಲ. ಸಂವಿಧಾನ ರಚನೆಯ ಪ್ರಕ್ರಿಯೆಯಲ್ಲಿ ತೊಡಗಿಕೊಂಡ ಮಹಿಳೆಯರ ಕೊಡುಗೆಯ ಬಗ್ಗೆಯೂ ಇದೇ ಅವಜ್ಞೆ ಕಂಡುಬರುತ್ತದೆ ಎನ್ನುವ ಅನುಪಮಾ, ಸಂವಿಧಾನ ಸಭೆಯಲ್ಲಿದ್ದ ೧೫ ಮಹಿಳೆಯರ ಬಗ್ಗೆ ಬರೆಯುತ್ತಾರೆ. ಅವರು ಸ್ವಾತಂತ್ರ್ಯ ಹೋರಾಟಗಾರ್ತಿಯರು. ವಿಭಿನ್ನ ಹಿನ್ನೆಲೆಗಳಿಂದ ಬಂದವರು. ಬಾಲ್ಯವಿವಾಹ, ವೈಧವ್ಯ, ಕೌಟುಂಬಿಕ ದೌರ್ಜನ್ಯ, ಜಾತಿ ದಬ್ಬಾಳಿಕೆಗಳಂತಹ ಪಿತೃಪ್ರಾಧಾನ್ಯದ ಕ್ರೂರತನಗಳಿಗೆ ಬಲಿಯಾದವರು.

ಅವರಲ್ಲಿ ಕೆಲವರ ಪರಿಚಯ ಹೀಗಿದೆ. ವಿಶ್ವ ಮಾನವ ಹಕ್ಕು ಘೋಷಣೆಯಾದ 'ಆಲ್ ಮೆನ್ ಆರ್ ಬಾರ್ನ್‌ಈಕ್ವಲ್' ಎಂಬ ಬದಲು 'ಆಲ್ ಹ್ಯೂಮನ್ ಬೀಯಿಂಗ್ಸ್ ಆರ್ ಬಾರ್ನ್‌ಈಕ್ವಲ್' ಎಂದು ಮಾಡಿಸಿದವರು ಹನ್ಸಾಜೀವರಾಜ್ ಮೆಹ್ತಾ. ಪದವಿಗೆಂದು ಮದರಾಸಿಗೆ ಹೋದಾಗ ಎದೆಯ ಮೇಲೆ ವಸ್ತ್ರ ಧರಿಸಿದ ಕೇರಳದ ಅಸ್ಪೃಶ್ಯ ಸಮುದಾಯದ ಮೊದಲ ಮಹಿಳೆ ದಾಕ್ಷಾಯಿಣಿ ವೇಲಾಯುಧನ್. 'ಪರ್ದಾ ಟು ಪಾರ್ಲಿಮೆಂಟ್' ಆತ್ಮಕಥೆ ಬರೆದ ಸಂವಿಧಾನ ರಚನಾ ಸಭೆಯ ಏಕೈಕ ಮುಸ್ಲಿಂ ಮಹಿಳೆ ಬೇಗಂ ಐಜಾಜ್ ರಸೂಲ್. ಇಂಥ ಅಪರೂಪದ ಮಹಿಳೆಯರ ಚಿತ್ರಣವಿದೆ.

ಮನುಸ್ಮೃತಿ ಏನನ್ನು ಹೇಳುತ್ತದೆ, ಮಹಿಳೆ ಹೇಗಿದ್ದಳು, ಮಹಿಳೆ ಹೇಗಿದ್ದಾಳೆ ಎನ್ನುವುದರ ಸಂಕ್ಷಿಪ್ತ ವಿವರಣೆಗಳನ್ನು ಕೊಡುತ್ತಾ ಲೇಖಕಿ, ಮಹಿಳೆಯರಾಗಿ ಸಾಂವಿಧಾನಿಕ ಆಶಯಗಳ ಪರವಾಗಿ ನಾವೇನು ಮಾಡಿದ್ದೇವೆಂದು ನಮ್ಮನ್ನೇ ಪ್ರಶ್ನಿಸಿಕೊಳ್ಳೋಣ ಎನ್ನುತ್ತಾರೆ. ಕೇವಲ ೮೮ ಪುಟಗಳಲ್ಲಿ ಎಷ್ಟೊಂದು ಮಹತ್ವದ ವಿಷಯಗಳನ್ನು ಚರ್ಚಿಸಿರುವ ಡಾ॥ ಅನುಪಮಾರ ಈ ಪುಸ್ತಕ ಮಹತ್ವದ್ದಾಗಿದೆ. ಸಂಗ್ರಹ ಯೋಗ್ಯವಾಗಿದೆ.

**ಡಾ॥ ಎಚ್. ಜಿ. ಜಯಲಕ್ಷ್ಮಿ**
ನಂ. ೧೩೦, ಔಟ್‌ಹೌಸ್ ಮೊದಲನೇ ಮಹಡಿ,
ಗೋವಿಂದಪ್ಪ ರಸ್ತೆ
ಗಾಂಧಿ ಬಜಾರ್, ಬೆಂಗಳೂರು – ೫೬೦ ೦೦೪




# ಭಾರತೀಯ ಮಹಿಳಾ ವಿಮೋಚನೆಯ ಆಂದೋಲನ

ಮಾರ್ಕ್ಸ್ ಅಂತರರಾಷ್ಟ್ರೀಯ ಸಂಘಟನೆಯ ವೇದಿಕೆಯಲ್ಲಿ ಮಹಿಳೆಯರ ಹಕ್ಕಿನ ಬಗ್ಗೆ ಪ್ರಪಥಮವಾಗಿ ಪ್ರಸ್ತಾಪ ಮಾಡಿದನು. ಕಾರ್ಮಿಕರು ಇವನ ಚಿಂತನೆಯಿಂದ ಪ್ರೇರಿತರಾದರು. ಕಾರ್ಮಿಕರು ಚಳುವಳಿಯಲ್ಲಿ ಸ್ತ್ರೀಪುರುಷರೆಲ್ಲರೂ ಹೋರಾಟಕ್ಕೆ ಮುಂದಾದರು. ೧೮೭೧ರ ಪ್ಯಾರಿಸ್ ಕಮ್ಯೂನ್ ಒಂದು ಚರಿತ್ರಾರ್ಹ ಆಂದೋಲನ. ಮಹಿಳೆಯರು ರಣಚಂಡಿಯರಾಗಿ ಅತ್ಯಂತ ವೀರಾವೇಶದಿಂದಲೇ ಪ್ರಭುತ್ವದ ನೇಣಿಗೆ ಕೊರಳೊಡ್ಡಿ ಹೋರಾಟದ ಕಹಳೆಗೆ ನಾಂದಿ ಹಾಡಿದ್ದರು. ಆಗ ಹಚ್ಚಿದ ವಿಮೋಚನೆಯ ಹಣತೆ ಇಂದಿಗೂ ಉರಿಯುತ್ತಿದೆ.




*ಮೂಲ :* **ಕನಕ್ ಮುಖರ್ಜಿ** *ಕನ್ನಡಕ್ಕೆ :* **ರಾಹು**
*ಪುಟಗಳು :* xxiv+೧೮೨=೨೦೬
*ಬೆಲೆ :* ರೂ. ೧೫೦/–
*ಪ್ರಕಾಶಕರು :* **ಲಡಾಯಿ ಪ್ರಕಾಶನ**
೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಕ**ನಕ್ ಮುಖರ್ಜಿಯವರ "ಭಾರತೀಯ ಮಹಿಳಾ ವಿಮೋಚನೆಯ ಆಂದೋಲನ" ಕೃತಿಯನ್ನು ಕನ್ನಡಕ್ಕೆ 'ರಾಹು'ರವರು ಅನುವಾದಿಸಿದ್ದಾರೆ. ಲಡಾಯಿ ಪ್ರಕಾಶನದಿಂದ ಬೆಳಕು ಕಂಡಿದೆ.

ಪಿತೃ ಪ್ರಧಾನ ಸಂಸ್ಕೃತಿಯ ಇತಿಹಾಸದಲ್ಲಿ ೨ನೇ ದರ್ಜೆಯಲ್ಲೇ ನಲುಗಿದ ಹೆಣ್ಣು ತನ್ನ ಆತ್ಮಬಲವನ್ನು ಪಡೆಯಲು ಮಾಡಿದ ಪ್ರತಿ ಪ್ರಯತ್ನದ ಹೆಜ್ಜೆ ಗುರುತು ಇಲ್ಲಿ ದಾಖಲಾಗಿದೆ. ಮೊಟ್ಟಮೊದಲು ಮತದಾನ ಮಾಡುವ ಹಕ್ಕನ್ನು ಪಡೆಯಲು ನಡೆದ ಹೋರಾಟವನ್ನು ಅರಿತರೆ, ಸ್ವಯಂ ಮತದಾನ ಮಾಡುವ ಕರ್ತವ್ಯವನ್ನು ಯಾರೂ ಮರೆಯಲಾರರು. ಮಹಿಳೆಯ ಶೋಷಣೆಗೆ ತಲಸ್ಪರ್ಶಿ ಶೋಧನೆಯನ್ನು ಕೈಗೊಂಡಿದ್ದು ಮಾರ್ಕ್ಸ್‌ವಾದಿ ತತ್ವಶಾಸ್ತ್ರ ಮಾತ್ರ ಎನ್ನುತ್ತಾರೆ. ಕನಕ್ ಮುಖರ್ಜಿಯವರು ತಮ್ಮ ಹೋರಾಟಗಾರ್ತಿಯ ಅನುಭವದಿಂದಲೇ ಮಹಿಳಾ ವಿಮೋಚನಾ ಹಾದಿಯ ವಿವಿಧ ಮಜಲುಗಳನ್ನು ಮಂಡಿಸಿದ್ದಾರೆ. ಕನಿಷ್ಠಳಾಗಿಯೇ ಬದುಕಬೇಕಾಗಿರುವ ಹಣೆಬರಹವನ್ನು ಯಾವ ದೇವರೂ ಬರೆದಿಲ್ಲ. ಪುರುಷ ಪ್ರಧಾನದ ತಾರತಮ್ಯದ ಭಾವನೆಯಿಂದ ಶೋಷಣೆಗೆ ಒಳಗಾಗಿದ್ದೇವೆ. ವರ್ಗಾಧಾರಿತ ಸಾಮಾಜಿಕ ವ್ಯವಸ್ಥೆಯು ಮಹಿಳಾ ಶೋಷಣೆಯ ಮೂಲ ಬೇರಿಗೆ ನೀರೆರೆಯುತ್ತಿದೆ. "ಮಹಿಳೆಯರನ್ನು ಸಾಮಾಜಿಕ ಉತ್ಪಾದನೆಯ ಶ್ರಮ ಸಂದರ್ಭದಲ್ಲಿ ಪುನಃ ತೊಡಗಿಸುವ ಮೂಲಕ ಮಾತ್ರ ಅವರ ವಿಮೋಚನೆಗೆ ನಾಂದಿ ಹಾಡಬಹುದೆಂದು ನಿಚ್ಚಳವಾಗಿ ತೋರಿಸಿಕೊಟ್ಟಿದೆ, ಉತ್ಪಾದನಾ ಪ್ರಕ್ರಿಯೆಯ ಅವಿಭಾಜ್ಯ ಅಂಗವಾಗಿ ಮಾಡುವ ಮೂಲಕವೇ

**ನಾಗಜ್ಯೋತಿ ತರೀಕೆರೆ**

ಸ್ತ್ರೀ ಕುಲವು ಬಿಡುಗಡೆಯ ಕಡೆಗೆ ಹೆಜ್ಜೆಹಾಕಬಹುದು" ಎಂದಿದ್ದಾರೆ. ಅಂತರರಾಷ್ಟ್ರೀಯ ಆಂದೋಲನಗಳ ಬಿಸಿಗಾಳಿ ಭಾರತೀಯ ಮಹಿಳೆಯರನ್ನು ಬೆಳಕಿನ ಕಡೆಗೆ ಮುನ್ನಡೆಸಲು ಸಾಧ್ಯವಾದ ಬಗೆಯನ್ನು ವಿವರವಾಗಿ ನಮ್ಮ ಮುಂದೆ ಇಟ್ಟಿದ್ದಾರೆ.

ಮಾರ್ಕ್ಸ್ ಅಂತರರಾಷ್ಟ್ರೀಯ ಸಂಘಟನೆಯ ವೇದಿಕೆಯಲ್ಲಿ ಮಹಿಳೆಯರ ಹಕ್ಕಿನ ಬಗ್ಗೆ ಪ್ರಪ್ರಥಮವಾಗಿ ಪ್ರಸ್ತಾಪ ಮಾಡಿದನು. ಕಾರ್ಮಿಕರು ಇವನ ಚಿಂತನೆಯಿಂದ ಪ್ರೇರಿತರಾದರು. ಕಾರ್ಮಿಕರು ಚಳುವಳಿಯಲ್ಲಿ ಸ್ತ್ರೀಪುರುಷರೆಲ್ಲರೂ ಹೋರಾಟಕ್ಕೆ ಮುಂದಾದರು. ೧೮೭೧ರ ಪ್ಯಾರಿಸ್ ಕಮ್ಯೂನ್ ಒಂದು ಚರಿತ್ರಾರ್ಹ ಆಂದೋಲನ. ಮಹಿಳೆಯರು ರಣಚಂಡಿಯರಾಗಿ ಅತ್ಯಂತ ವೀರಾವೇಶದಿಂದಲೇ ಪ್ರಭುತ್ವದ ನೇಣಿಗೆ ಕೊರಳೊಡ್ಡಿ ಹೋರಾಟದ ಕಹಳೆಗೆ ನಾಂದಿ ಹಾಡಿದ್ದರು. ಆಗ ಹಚ್ಚಿದ ವಿಮೋಚನೆಯ ಹಣತೆ ಇಂದಿಗೂ ಉರಿಯುತ್ತಿದೆ. ಪ್ಯಾರಿಸ್‌ನ ಮಹಿಳಾ ಕಾರ್ಮಿಕರ ಬಲಿದಾನ ಮರೆಯದ ಘಟನೆಯಾಗಿದೆ. ಮಹಾನ್ ಕಮ್ಯುನಿಸ್ಟ್ ನೇತಾರಳಾಗಿದ್ದ "ಕ್ಲಾರಾ ಜೆಟ್‌ಕಿನ್" ಸಮಾಜವಾದಿ ಜರ್ಮನಿಯಲ್ಲಿ ಹೋರಾಟದ ಧ್ವಜವನ್ನು ಬಹು ಎತ್ತರಕ್ಕೆ ಏರಿಸಲು ಸರ್ವ ಪ್ರಯತ್ನವನ್ನು ಮಾಡಿದರು. ಮತದಾನಕ್ಕಾಗಿ ಸಂಘಟನೆಗಾಗಿ ನಡೆಸಿದ ಸುದೀರ್ಘ ಹೋರಾಟವನ್ನು ಎಳೆಎಳೆಯಾಗಿ ಅರ್ಥೈಸಿದ್ದಾರೆ.

೧೯೦೮ರ ಮಾರ್ಚ್ ೮ರಂದು ಅಮೇರಿಕಾದ ನ್ಯೂಯಾರ್ಕ್ ನಗರದ ಮಹಿಳಾ ಕಸೂತಿ ಕಾರ್ಮಿಕರ ಹೋರಾಟದ ದಿನವನ್ನು ಅಂತಾರಾಷ್ಟ್ರೀಯ ಮಹಿಳಾ ವಿಮೋಚನಾ ಆಂದೋಲನಗಳಿಗೆ ನಿರ್ದೇಶನ ನೀಡುವ, ಮಾರ್ಗದರ್ಶನ ಮಾಡುವ ದಿನಗಳನ್ನಾಗಿ ಅಂಗೀಕರಿಸಿದರು ಎಂಬ ವಿವರವಾದ ತಿಳುವಳಿಕೆಯನ್ನು ನೀಡಿದ್ದಾರೆ. ವಿಮೋಚನಾ ದಾರಿಯ ಪಥಿಕರ ಸಾಧನೆಯು ಮತ್ತೊಮ್ಮೆ ದೃಷ್ಟಿಪಟಲದಲ್ಲಿ ಮೂಡುತ್ತದೆ. ಬ್ರಿಟಿಷ್ ಆಡಳಿತದ ಹಿಕ್ಮತ್ತುಗಳನ್ನು ಹೋರಾಟಗಾರರು ಹಿಮ್ಮೆಟ್ಟಿಸಿದ ವಿಚಾರವನ್ನು ವಿವರಿಸುತ್ತಾ ಭಾರತದ ಇತಿಹಾಸದಲ್ಲಿ ಹೋರಾಟದ ಪುರುಷ ಹಾಗೂ ಮಹಿಳಾ ಕಲಿಗಳನ್ನು ಸ್ಮರಿಸುತ್ತಾರೆ. ಇಲ್ಲಿ ಪ್ರತಿ ರಾಜ್ಯದ ಹೋರಾಟದ ಕಥನವನ್ನೂ ದಾಖಲಿಸಿದ್ದಾರೆ. ಮಹಿಳಾ ಶಕ್ತಿಯೊಂದಿಗೆ ಸಹಕರಿಸಿ ಪ್ರೇರಣೆ ನೀಡಿದ ಪುರುಷರ ಕೊಡುಗೆಯನ್ನು ಪ್ರೀತಿಯಿಂದ ಅಭಿನಂದಿಸುತ್ತಾರೆ.

ಸ್ವಾತಂತ್ರ್ಯ ಚಳುವಳಿಗೆ ಉತ್ಸಾಹ ತುಂಬಿದ ವಿದೇಶಿ ಮಹಿಳೆಯರ ಪ್ರೇರಣೆಗಳನ್ನು ದಾಖಲಿಸಿದ್ದಾರೆ. ಕಮ್ಯುನಿಸ್ಟ್ ಹೋರಾಟದ ಕೊಡುಗೆಯಲ್ಲಿ ಮಹಿಳೆಯರ ಪಾತ್ರ ನ್ಯಾಶನಲ್ ಫೆಡರೇಷನ್ ಆಫ್ ಇಂಡಿಯನ್ ವುಮನ್‌ನಲ್ಲಿ ಒಂದಾದ ಮಹಿಳಾ ಹೋರಾಟ ತನ್ನದೇ ಆದ ಸಂವಿಧಾನ ಘೋಷಿಸಿದ್ದನ್ನು ನೆನಪಿಸಿದ್ದಾರೆ. "ಭಾರತೀಯ ಮಹಿಳೆಯರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಂಪೂರ್ಣ ವಿಮೋಚನೆಗಾಗಿ ಕೆಲಸ ಮಾಡುತ್ತದೆ. ಎಲ್ಲ ಮಹಿಳೆಯರಿಗೂ ಸಂತೋಷದಾಯಕ ತಾಯಿತನವನ್ನು ಖಾತ್ರಿಪಡಿಸಲು ದುಡಿಯುತ್ತದೆ."



ಕ್ರಿಯೇಟಿವ್ ಕಟ್ ಮಾಡೋದಿಕ್ಕೆ ಹೊಗಿ ಈ ರೀತಿ ಮಾಡಿದ್ದಾನೆ

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರೋತ್ತರ ಭಾರತದ ಮಹಿಳಾ ಪರ ಹೋರಾಟಗಳು ವಿಮೋಚನೆಯ ದಾರಿಗುಂಟ ನೆಟ್ಟಿರುವ ಮೈಲಿಗಲ್ಲುಗಳ ಸರಮಾಲೆಯೇ ಇಲ್ಲಿ ಮೈವೆತ್ತಿದೆ. ಕೇಂದ್ರ ಸರ್ಕಾರದ ನಡೆಯನ್ನು ಸೂಕ್ಷ್ಮವಾಗಿ ವಿಮರ್ಶಿಸುತ್ತಾ ಮಹಿಳಾಪರ ಕಾಳಜಿ ಬರೀ ಕಾನೂನಿನಲ್ಲಿ ಮಾತ್ರ ಕಾಣಿಸುತ್ತಿದೆಯೇ ಹೊರತು ಕಾರ್ಯ ವೈಖರಿಯಲ್ಲಿ ಅಲ್ಲ. ಸಾಮ್ರಾಜ್ಯಶಾಹಿಗಳು ಕುಟುಂಬದಲ್ಲೇ ಬಿರುಕನ್ನುಂಟು ಮಾಡಿ ಪರಸ್ಪರ ದ್ವೇಷದ ಬೀಜಗಳು ಅಂಕುರಿಸುವಂತೆ ಹುನ್ನಾರ ಹೂಡುತ್ತಿವೆ. ಈ ಬಗ್ಗೆ ಎಚ್ಚರಿಕೆಯಿಂದ ಪ್ರಜಾಸತ್ತಾತ್ಮಕ ಆಂದೋಲನದ ಗುರಿ ನಿಶ್ಚಿತವಾಗಿದ್ದು ದಮನಿತರ ಪರವಾಗಿ ಮುನ್ನಡೆಯ ತಕ್ಕದ್ದು ಎಂಬ ಪ್ರಗತಿಪರ ಧೋರಣೆ ಹರಳುಗಟ್ಟಿದೆ.

ಮಹಿಳೆಯರು ರಾಜಕೀಯ ಸ್ವಾತಂತ್ರ್ಯ ಪಡೆದು ಸಮಾನ ಆಶಯದ ಪಾತಳಿಯಲ್ಲಿ ನೆಮ್ಮದಿಯುತವಾದ ಬದುಕನ್ನು ಪಡೆಯಲು ಬೇಕಾದ ಪೂರ್ವ ತಯಾರಿ, ಜ್ಞಾನ ಈ ಕೃತಿಯ ಅಧ್ಯಯನದಿಂದ ದೊರೆಯುತ್ತದೆ. ಲಾಗಾಯ್ತಿನಿಂದ ಹೆಣ್ಣು ತನ್ನ ಪ್ರಜ್ಞೆಯನ್ನು ಮರಳಿ ಪಡೆಯಲು ಮಾಡುತ್ತಿರುವ ಪ್ರಯತ್ನಗಳಲ್ಲಿ ಲಕ್ಷ ಲಕ್ಷ ಮಹಿಳೆಯರ ಆತ್ಮಾರ್ಪಣೆಯ ಘೋರ ಇತಿಹಾಸವಿದೆ. ಶೋಷಣೆ, ಕೀಳರಿಮೆ, ಸ್ವಮರುಕದ ಅಧೀನದಲ್ಲಿ ಹೂತುಹೋಗಿರುವ ಆತ್ಮಬಲವನ್ನು ಸಂಚಯಿಸಿಕೊಳ್ಳಲು ಈ ಕೃತಿಯ ಅಧ್ಯಯನವು ಕೈದೀವಿಗೆಯಾಗಿದೆ. ಹೆಣ್ಣಿನ ಅಪಮಾನಕ್ಕೆ ಎಷ್ಟು ದೀರ್ಘವಾದ ಇತಿಹಾಸ ಇದೆ ಎಂಬ ಆಳವಾದ ಅರಿವು ಮೂಡುತ್ತದೆ. ಎದ್ದು ನಿಂತು ಕೊಡವಿ ಕೊಂಡು ಬೆನ್ನುಮೂಳೆಯನ್ನು ನೇರಗೊಳಿಸಿಕೊಳ್ಳಲು ಪ್ರೇರಣೆ ನೀಡುತ್ತದೆ. ಮಹಿಳಾ ವಿಮೋಚನೆಯ ಇತಿಹಾಸ ಅರಿಯುವ ತುರ್ತು ಈ ಘಳಿಗೆಗೂ ಇದೆ. ಆಧುನೀಕರಣದ ಸುಂಟರಗಾಳಿಯಲ್ಲಿ ಮತಿಯನ್ನು ಸಿಲುಕಗೊಡದೆ ಆತ್ಮಶಕ್ತಿಯನ್ನು ನಿಶಿತಗೊಳಿಸಿಕೊಳ್ಳಲು ಪ್ರತಿ ಮಹಿಳೆಗೆ ತನ್ನ ಇತಿಹಾಸವನ್ನು ತಾನೇ ಅರಿಯಲು ಕನಕ್ ಮುಖರ್ಜಿಯವರ ಚಿಂತನೆ, ಹೋರಾಟ, ಸ್ಫೂರ್ತಿ ನಿರಂತರವಾಗಿ ನೀಡುತ್ತಾ ಈ ಗ್ರಂಥವು ಮಹಿಳಾ ಚೇತನವನ್ನು ಜಾಗೃತಗೊಳಿಸುತ್ತದೆ.

**ನಾಗಜ್ಯೋತಿ ತರೀಕೆರೆ**
ಹಂಪಿ ವಿಶ್ವವಿದ್ಯಾಲಯ, ಸಾಹಿತ್ಯ ಅಧ್ಯಯನ ವಿಭಾಗ
ಸಂಶೋಧನಾ ವಿದ್ಯಾರ್ಥಿನಿ
ಕುವೆಂಪು ಅಧ್ಯಯನ ಕೇಂದ್ರ, ಕುಪ್ಪಳಿ
nagajyothi 1968@gmail.com

# ಗಜ಼ಲ್




ಜಾತಿ ಮತಗಳನ್ನು ತೊರೆದು ಕಾಯುತ್ತಿರುವೆ ಹಿಡಿಯಷ್ಟು ಪ್ರೀತಿಗಾಗಿ
ಮಡಿ ಮೈಲಿಗೆ ಬದಿಗೆ ಒತ್ತಿ ಹುಡುಕುತ್ತಿರುವೆ ಹಿಡಿಯಷ್ಟು ಪ್ರೀತಿಗಾಗಿ

ಸಪ್ಪೆಯಾಗಿ ಬಿದ್ದಿವೆ ಮಾತುಗಳೆಲ್ಲವೂ ಒಂಟಿಯಾಗಿ
ರಾಗದಿ ಧ್ವನಿಗೂಡುವುದನ್ನೆ ಹಂಬಲಿಸುತ್ತಿರುವೆ ಹಿಡಿಯಷ್ಟು ಪ್ರೀತಿಗಾಗಿ

ಹಸಿದ ಒಡಲು ಅನುಗಾಲವು ಸೊರಗುತ್ತಿದೆ ಒಳಗೊಳಗೆ
ಸವಿ ಅನ್ನದ ಅಗುಳಿಗೆ ಕೈ ಚಾಚುತ್ತಿರುವೆ ಹಿಡಿಯಷ್ಟು ಪ್ರೀತಿಗಾಗಿ

ಕ್ಷಣಕ್ಷಣಗಳ ಭವದ ಬವಣೆಗೆ ಜೀವ ತತ್ತರಿಸುತ್ತಿದೆ
ನೂರು ಆಸೆಗಳನ್ನು ಒದ್ದು ಹೊರಗೆ ಹಾಕುತ್ತಿರುವೆ ಹಿಡಿಯಷ್ಟು ಪ್ರೀತಿಗಾಗಿ

"ಶಂಕರನ" ತನು ಮನದ ಮನೆಯು ಪಾಳು ಬಿದ್ದಿದೆ
ಅರಿವೆ ಜೋಳಿಗೆ ಹಿಡಿದು ಅಲೆದಾಡುತ್ತಿರುವೆ ಹಿಡಿಯಷ್ಟು ಪ್ರೀತಿಗಾಗಿ

**ಶಿವಶಂಕರ ಕಡದಿನ್ನಿ**
ಎಂ.ಎ. ಪ್ರಥಮ ವರ್ಷ, ಕನ್ನಡ ವಿಭಾಗ
ಗುಲ್ಬರ್ಗ ವಿಶ್ವವಿದ್ಯಾಲಯ, ಕಲಬುರಗಿ, ರಾಯಚೂರು



## ವೆನೆಜುವೇಲ : ಅಮೆರಿಕದ ಕ್ಷಿಪ್ರಕ್ರಾಂತಿ ಯತ್ನ ವಿಫಲ

**ಈ** ಶತಮಾನದ ಆದಿಯಲ್ಲಿ ಬಲಿಷ್ಠ ಉತ್ತರ ಅಮೆರಿಕಕ್ಕೆ ಎದುರಾಗಿ ನಿಂತು ದಕ್ಷಿಣ ಅಮೆರಿಕ ಖಂಡದ ದೇಶಗಳಿಗೆ ಮಾರ್ಗದರ್ಶಿಯಾಗಿದ್ದ ವೆನೆಜುವೇಲ ಇಂದು ತೀವ್ರವಾದ ಆರ್ಥಿಕ ಬಿಕ್ಕಟ್ಟಿನ ಜೊತೆಗೆ ರಾಜಕೀಯ ಗೊಂದಲಕ್ಕೆ ಈಡಾಗಿದೆ. ಇಪ್ಪತ್ತೊಂದನೆ ಶತಮಾನದ ಜಾಗತಿಕ ರಾಜಕಾರಣದಲ್ಲಿ ಸಮಾಜವಾದಿ ವಿಚಾರಗಳಿಗೆ ಪುನಶ್ಚೇತನ ನೀಡಿದ. ಅಮೆರಿಕದ ಮುಕ್ತ ಮಾರುಕಟ್ಟೆಗೆ ಪರ್ಯಾಯವಿದೆ ಎಂದು ತೋರಿಸಿಕೊಟ್ಟ ದಕ್ಷಿಣ ಅಮೆರಿಕದ ದೇಶ ವೆನೆಜುವೇಲ. ಕ್ರಾಂತಿಕಾರಿ ಬದಲಾವಣೆಗಳನ್ನು ಜಾರಿಗೆ ತಂದು ದೇಶದ ಆಡಳಿತ ಚುಕ್ಕಾಣಿ ಹಿಡಿದು ಹದಿನೈದು ವರ್ಷ ಮುನ್ನಡೆಸಿದವರು ಹ್ಯೂಗೋ ಚಾವೆಜ್. ಹಲವು ಪ್ರಥಮಗಳಿಗೆ ಹೆಸರಾಗಿದ್ದ ಇವರ ನಿಧನಾ ನಂತರ ಅಧಿಕಾರಕ್ಕೆ ನಿಕೊಲಾಸ್ ಮಡುರೋ ಈಗ ವಸ್ತುಶಃ ಉತ್ತರ ಅಮೆರಿಕದ ಆಕ್ರಮಣದ ಭೀತಿಯಲ್ಲಿದ್ದಾರೆ. ಜಾಗತಿಕ ತೈಲ ಬೆಲೆ ಇಳಿಕೆಯಿಂದ ಆರ್ಥಿಕ ಮುಗ್ಗಟ್ಟು ಎದುರಿಸುತ್ತಿರುವ ವೆನೆಜುವೇಲ ಅಮೆರಿಕದ ಆರ್ಥಿಕ ದಿಗ್ಬಂಧನವನ್ನೂ ಹೊರಬೇಕಾಗಿ ಬಂದಿದೆ.

ಅಧ್ಯಕ್ಷ ಮಡುರೋ ಪದಚ್ಯುತಗೊಳಿಸಲು ನಡೆಸಿದ ಪ್ರಯತ್ನ ಸಂಪೂರ್ಣವಾಗಿ ವಿಫಲಗೊಂಡಿತು. ಚುನಾಯಿತ ಅಧ್ಯಕ್ಷರಿಗೆ ಪ್ರತಿಯಾಗಿ ಪ್ರತಿಪಕ್ಷದ ನಾಯಕ ಯುವಾನ್‌ಗೈದೊನನ್ನು ಹಂಗಾಮಿ ಅಧ್ಯಕ್ಷನೆಂದು ಅಮೆರಿಕ ಪ್ರಕಟಿಸಿತು. ಈತ ಚುನಾವಣೆಯಲ್ಲಿ ಭಾಗಿಯಾಗಿರಲಿಲ್ಲ. ಶೇ.೬೭.೮ರಷ್ಟು ಮತ ಗಳಿಸಿದ್ದ ಮಡುರೋ ಅಧ್ಯಕ್ಷರಾದರು. ಬಲಪಂಥೀಯ ಪಾಪ್ಯುಲರ್ ವಿಲ್ ಪಕ್ಷದ ನಾಯಕನಿಗೆ ಅಧ್ಯಕ್ಷ ಪಟ್ಟ ಕಟ್ಟಿದ ಅಮೆರಿಕಕ್ಕೆ ಕೆನಡ, ಬ್ರೆಜಿಲ್ ಮತ್ತು ಕೆಲವು ದಕ್ಷಿಣ ಅಮೆರಿಕದ ದೇಶಗಳು ಮಾತ್ರ ಬೆಂಬಲ ನೀಡಿದವು. ಯೂರೋಪಿಯನ್ ಯೂನಿಯನ್ ಅಧ್ಯಕ್ಷ ಟ್ರಂಪ್‌ನ ಈ ಕ್ರಮಕ್ಕೆ ಬೆಂಬಲ ನೀಡಲಿಲ್ಲ. ಇಷ್ಟೆಲ್ಲ ನಡೆದದ್ದು ಜನವರಿ ೨೩ರಂದು. ಜನ ಬೆಂಬಲ ಹಾಗೂ ಸೇನೆಯ ಬೆಂಬಲ ಪಡೆದಿರುವ ಅಧ್ಯಕ್ಷ ಮಡುರೋ ಅಮೆರಿಕದ 'ಕ್ಷಿಪ್ರ ಕ್ರಾಂತಿ' ವೈಫಲ್ಯದ ಹಿನ್ನೆಲೆಯಲ್ಲಿ ಅಮೆರಿಕದ ದೂತಾವಾಸ ಕಛೇರಿಗಳನ್ನು ೭೨ ಗಂಟೆಗಳೊಳಗೆ ತೆರವುಗೊಳಿಸಿ, ಸಿಬ್ಬಂದಿ ಹಿಂದಿರುಗುವಂತೆ ಆಜ್ಞೆ ಮಾಡಿದ್ದಾರೆ. ಅಮೆರಿಕದ ಅಧಿಕಾರಿಗಳು ವೆನೆಜುವೇಲದ ಮಿಲಿಟರಿಗೆ ದಂಗೆ ಏಳಲು ಕರೆ ನೀಡಿದೆ. ಇಂಥ ಬಹಿರಂಗ ಕರೆ ಎಲ್ಲ ಅಂತರರಾಷ್ಟ್ರೀಯ ನಿಯಮಗಳ ಉಲ್ಲಂಘನೆಯಾಗಿದೆ. ವಿಶ್ವಸಂಸ್ಥೆಯ ಹಾಗೂ ಅಮೆರಿಕ ರಾಜ್ಯಗಳ ಸಂಸ್ಥೆ (ಒಎಎಸ್)ಯ ಪ್ರಣಾಳಿಕೆಯ ವಿರುದ್ಧ ವಾದುದಾಗಿದೆ. ೨೦೧೭ರಿಂದಲೇ ವೆನೆಜುವೇಲದ ನೆರೆಯ ರಾಷ್ಟ್ರ ಪೆರುವಿನಲ್ಲಿ ವೆನೆಜುವೇಲದ ಸರಕಾರವನ್ನು ಪದಚ್ಯುತಗೊಳಿಸಿ ಬಲಪಂಥೀಯರನ್ನು ಅಧಿಕಾರಕ್ಕೆ ತರಲು 'ಲಿಮಾತಂಡ' ಎಂಬ ಸಂಘಟನೆಯನ್ನು ಸ್ಥಾಪಿಸಲಾಗಿತ್ತು.

ವೆನೆಜುವೇಲದ ಸಮಾಜವಾದಿ ಒಲವಿನ ಸರಕಾರವನ್ನು ಉರುಳಿಸಲು ಅಮೆರಿಕದ ಪ್ರಯತ್ನ ಮೊದಲನೆಯದೇನಲ್ಲ. ೨೦೦೨ರಲ್ಲಿ ಚಾವೆಜ್ ಅಧಿಕಾರಕ್ಕೆ ಬಂದಾಗ, ಅವರನ್ನು ಪದಚ್ಯುತಗೊಳಿಸಲು ಅಮೆರಿಕ ಕ್ಷಿಪ್ರಕ್ರಾಂತಿಗೆ ಪ್ರಯತ್ನಿಸಿ ಕೈಸುಟ್ಟುಕೊಂಡಿತ್ತು. ಸಮಾಜವಾದಿ ಸರಕಾರ ಅಸ್ತಿತ್ವಕ್ಕೆ ಬಂದಾಗಿನಿಂದ ವೆನೆಜುವೇಲ ಚುನಾಯಿತ ಸರಕಾರವನ್ನು ಉರುಳಿಸಲು ಅಮೆರಿಕ ಪ್ರಯತ್ನಿಸುತ್ತಲೇ ಇದೆ. ದಕ್ಷಿಣ ಅಮೆರಿಕದಲ್ಲಿ ಬಲಪಂಥೀಯ ಸರಕಾರಗಳನ್ನು ಅಧಿಕಾರಕ್ಕೆ ತರುವುದರಲ್ಲಿ ಸಾಕಷ್ಟು ಯಶಸ್ವಿಯಾಗಿದೆ. ಅಮೆರಿಕ ರಾಜ್ಯಗಳ ಸಂಘಟನೆ 'ಒಎಎಸ್' ಮೇಲೆ ಹಿಡಿತ ಸಾಧಿಸಿದೆ. ಅಂತರರಾಷ್ಟ್ರೀಯ ತೈಲ ಬೆಲೆ ಇಳಿಕೆಯಿಂದಾಗಿ ದೇಶ ಆರ್ಥಿಕ ದುಸ್ಥಿತಿಯಲ್ಲಿದೆ. ದೇಶಕ್ಕೆ ಬಹುಭಾಗ ಆದಾಯ ಬರುವುದು ತೈಲದ ರಫ್ತಿನಿಂದಲೇ. ಇದರ ಮೇಲೆ ಆರ್ಥಿಕ ದಿಗ್ಬಂಧನವೂ ಸೇರಿ ಆರ್ಥಿಕ ಸ್ಥಿತಿ ಮತ್ತಷ್ಟು ಉಲ್ಬಣಗೊಂಡಿದೆ. ಹೆಚ್ಚು ಕಡಿಮೆ ಏಕಾಂಗಿಯಾಗಿ ವೆನೆಜುವೇಲ ಅಮೆರಿಕದ ವಿರುದ್ಧ ಸೆಣಸುತ್ತಿದೆ. ವೆನೆಜುವೇಲದ ಲಕ್ಷಾಂತರ ಪ್ರಜೆಗಳು ನೆರೆಯ ರಾಜ್ಯಗಳಿಗೆ ವಲಸೆ ಹೋಗುತ್ತಿದ್ದಾರೆ.

*     *     *



ಗುರು

## ಭಾರತ – ಪಾಕಿಸ್ತಾನ – ಉಗ್ರರು

**ಕೇಂ**ದ್ರ ಮೀಸಲು ಪಡೆಯ (ಸಿಆರ್‌ಪಿಎಫ್) ಮೇಲೆ ಪಾಕಿಸ್ತಾನದಲ್ಲಿ ನೆಲೆಯೂರಿರುವ ಜೈಷ್‌ಎ – ಮೊಹಮದ್ ಭಯೋತ್ಪಾದಕ ಸಂಸ್ಥೆ ಕಾಶ್ಮೀರದ ಪುಲ್ವಾಮಾದ ಹೆದ್ದಾರಿಯಲ್ಲಿ ನಡೆಸಿದ ದಾಳಿಯಲ್ಲಿ ನಲವತ್ತಕ್ಕೂ ಹೆಚ್ಚು ಮಂದಿ ಯೋಧರು ಮೃತಪಟ್ಟಿದ್ದಾರೆ. ಅವರ ಪೈಕಿ ಮಂಡ್ಯ ಜಿಲ್ಲೆಗೆ ಸೇರಿದ ಯೋಧ ಗುರು ಒಬ್ಬರು. ಉಗ್ರರ ದಾಳಿಗೀಡಾದ ಹುತಾತ್ಮ ಯೋಧರಿಗೆ 'ಹೊಸತು' ಅಂತಿಮ ನಮನ ಹಾಗೂ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

ಕಾಶ್ಮೀರದಲ್ಲಿ ಉಗ್ರರ ಉಪಟಳ ಹೊಸದೇನಲ್ಲ. ಪುಲ್ವಾಮಾ ದಾಳಿಯಲ್ಲಿ ತನ್ನ ಕೈವಾಡ ಇರುವುದನ್ನು ಮಸೂದ್ ಅಜರ್ ನೇತೃತ್ವದ ಜೈಷ್‌ಎ – ಮಹಮದ್ ಒಪ್ಪಿಕೊಂಡಿದೆ. ಪಾಕಿಸ್ತಾನದ ಸರಕಾರ ಈ ಉಗ್ರಸಂಘಟನೆಯ ಮೇಲೆ ಅಂತರ ರಾಷ್ಟ್ರೀಯ ಒತ್ತಡ ಇದ್ದರೂ ಇದುವರೆಗೆ ಏನೂ ಕ್ರಮಕೈಗೊಂಡಿಲ್ಲ. ಇದುವರೆಗೆ ನಡೆದಿರುವ ಉಗ್ರರ ದಾಳಿಗಳಲ್ಲಿ ಇದು ಅತ್ಯಂತ ಹೇಯವಾದ ಕೃತ್ಯ ಮೃತರ ಸಂಖ್ಯೆಯನ್ನು ಪರಿಗಣಿಸಿದರೆ. ಈ ಅಮಾನುಷ ಕ್ರೌರ್ಯಕ್ಕೆ ದೇಶದ ಪ್ರಜೆಗಳು ಆಕ್ರೋಶಗೊಂಡಿದ್ದಾರೆ. ಪ್ರತೀಕಾರಕ್ಕಾಗಿ ಹಾತೊರೆಯುತ್ತಿದ್ದಾರೆ. ಪ್ರಧಾನಿ ಮೋದಿ ಪ್ರತಿಕ್ರಯಿಸಿ ಸೇನೆಗೆ ಮುಕ್ತ ಅಧಿಕಾರ ನೀಡಿದ್ದಾರೆ. ದೇಶದ ಎಲ್ಲ ಪಕ್ಷಗಳೂ ಈ ದುರಂತವನ್ನು ಖಂಡಿಸಿ ಸರಕಾರಕ್ಕೆ ಪೂರ್ಣವಾದ ಬೆಂಬಲ ನೀಡಿವೆ. ಈಗಾಗಲೆ ಪಾಕಿಸ್ತಾನಕ್ಕೆ ನೀಡಲಾಗಿದ್ದ ಮೋಸ್ಟ್ ಫೇವರ್ಡ್ ನೇಷನ್ ಮಾನ್ಯತೆಯನ್ನು ಭಾರತ ಸರಕಾರ ಹಿಂದಕ್ಕೆ ತೆಗೆದುಕೊಂಡಿದೆ. ಈ ಕ್ರಮ ಒಂದರಿಂದಲೇ ಉಗ್ರರನ್ನು ಕಟ್ಟಿಹಾಕಲಾಗುವುದಿಲ್ಲ. ಪಾಕಿಸ್ತಾನ ಈ ದಾಳಿಗೆ ನೇರವಾಗಿ ಹೊಣೆಯಾಗಿದೆ. ಭಾರತದ ವಿರುದ್ಧವಾಗಿ ಭಯೋತ್ಪಾದನೆಯ ಕೃತ್ಯಗಳಿಗೆ ಪಾಕಿಸ್ತಾನದ ನೆಲ ಬಳಕೆಯಾಗುತ್ತಿರುವುದು ಖಂಡನೀಯ. ಪುಲ್ವಾಮ ದುರಂತಕ್ಕೆ ಅಮೆರಿಕವನ್ನೂ ಒಳಗೊಂಡಂತೆ ಹಲವು ದೇಶಗಳು ಪ್ರತಿಕ್ರಿಯಿಸಿ ಭಾರತಕ್ಕೆ ಬೆಂಬಲ ವ್ಯಕ್ತಪಡಿಸಿವೆ.

ಕಾಶ್ಮೀರದಲ್ಲಿ ನಿರಂತರವಾಗಿ ಭಯೋತ್ಪಾದಕರು ಅಟ್ಟಹಾಸ ನಡೆಸುತ್ತ ಬಂದಿದ್ದಾರೆ. ಭಾರತ – ಪಾಕಿಸ್ತಾನದ ಮಧ್ಯೆ ವಿರಸಕ್ಕೆ ಮುಖ್ಯವಾದ ಕಾರಣ ಕಾಶ್ಮೀರದ ಪ್ರಶ್ನೆ. ಕಳೆದ ಕೆಲ ವರ್ಷಗಳಲ್ಲಿ ಪರಿಸ್ಥಿತಿ ಉಲ್ಬಣಗೊಂಡಿದೆ. ಪ್ರತ್ಯೇಕವಾದಿಗಳ ಆರ್ಭಟ ಹೆಚ್ಚಾಗಿದೆ. ಇಂಥ ಸನ್ನಿವೇಶದಲ್ಲಿ ಇಡೀ ರಾಜ್ಯ ಒಂದು ಬಗೆಯಲ್ಲಿ ಸೇನೆ ಮತ್ತು ಭದ್ರತಾಪಡೆಗಳಿಂದ ಆವೃತವಾಗಿದೆ. ಚುನಾಯಿತ ಸರಕಾರ (ಭಾಜಪ – ಪಿಡಿಪಿ ಮೈತ್ರಿ ಸರಕಾರ) ಹೋಗಿ ರಾಜ್ಯಪಾಲರ ಆಡಳಿತವಿದೆ. ಅರ್ಥಾತ್ ಕೇಂದ್ರಾಡಳಿತಕ್ಕೆ ಒಳಪಟ್ಟಿದೆ. ಈಚೆಗೆ ಜರುಗಿದ ಹತ್ಯಾಕಾಂಡಕ್ಕೆ ಭದ್ರತಾ ಲೋಪ ಮುಖ್ಯಕಾರಣ ಎಂದು ಗೊತ್ತಾಗುತ್ತದೆ. ಮಿಲಿಟರಿ ವಾಹನಗಳು ಹೋಗುತ್ತಿದ್ದ ಹೆದ್ದಾರಿಯಲ್ಲಿ ಆ ಸ್ಫೋಟ ತುಂಬಿದ ಖಾಸಗಿ ವಾಹನ ಹೇಗೆ ನುಗ್ಗಿತು ಎನ್ನುವುದೇ ಪ್ರಶ್ನೆ. ಇದಕ್ಕೆ ಉತ್ತರ ನೀಡಬೇಕಾದದ್ದು ಸರಕಾರ.

**ಸೀಯಾರ್ಕೆ**

"ಸೂರ್ಯ ರೆಸಿಡೆನ್ಸಿ", ಫ್ಲಾಟ್–೧, # ೩೧೩೩, ೩ನೇ ಅಡ್ಡರಸ್ತೆ

ಗಿರಿನಗರ ೪ನೇ ಹಂತ, ಬೆಂಗಳೂರು–೫೬೦ ೦೮೫









# ಕಲಾತ್ಮಕ ಚಿತ್ರ – ಚಿತ್ತಾರಗಳು

ಕಲಾವಿದ ಶ್ರೀ ಕೆ. ವಿಠಲ್ ಭಂಡಾರಿ ಕಲಾಲೋಕದಲ್ಲಿ ಚಿರಪರಿಚಿತರಾದವರು. ಇವರು ಮೂಲತಃ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನ ಕೊಂರ್ಬಡ್ಕ ಬೀಡಿನವರು. ಅಲ್ಲಿನ ಪ್ರಕೃತಿ ಸೌಂದರ್ಯಕ್ಕೆ ಪರವಶರಾದ ಅವರು ಅಲ್ಲಿನ ಹಲವಾರು ವಿಚಾರಧಾರೆಗಳನ್ನು ಚಿತ್ರಗಳಲ್ಲಿ ಬಿಂಬಿಸಿದ್ದಾರೆ. ಇವರು ಬೆಂಗಳೂರಿನ ಅಖಿಲ ಭಾರತ ಕರಕುಶಲ ಅಭಿವೃದ್ಧಿ ಮತ್ತು ಪ್ರಾದೇಶಿಕ ವಿನ್ಯಾಸ ಕೇಂದ್ರದ ಕಲಾ ವಿಭಾಗದಲ್ಲಿ ಮುಖ್ಯ ಕಲಾವಿದರಾಗಿ ಸುಮಾರು 32 ವರ್ಷಗಳ ಕಾಲ ಕಲಾ ಸೇವೆ ಮಾಡಿದ್ದಾರೆ. ಇವರ ಕಲಾಕೃತಿಗಳು ಬೆಂಗಳೂರಿನ ಸರಕಾರದ ವಸ್ತು ಸಂಗ್ರಹಾಲಯ ಮತ್ತು ಮೈಸೂರು ವಿಶ್ವವಿದ್ಯಾಲಯದ ಜಾನಪದ ವಿಭಾಗದಲ್ಲಿ ಹಾಗೂ ದೇಶವಿದೇಶಗಳಲ್ಲಿ ಸಂಗ್ರಹವಾಗಿರುತ್ತವೆ. ಇವರು ರಾಜ್ಯ – ರಾಷ್ಟ್ರ ಮಟ್ಟದಲ್ಲಿ ಹಲವಾರು ಕಲಾ ಕಾರ್ಯಾಗಾರ ಮಾಡಿರುವುದು ವಿಶೇಷ. ಇವರು ಕರ್ನಾಟಕ ಚಿತ್ರಕಲಾ ಪರಿಷತ್ತಿನ ಖಾಯಂ ಕಾರ್ಯಕಾರಿಣಿ ಸದಸ್ಯರಾಗಿ 50 ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ.

**– ಬಳಕೂರು ವಿ.ಎಸ್.ನಾಯಕ, ಬೆಂಗಳೂರು, ಮೊಬೈಲ್:9448687636**









Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

